# ಹೊಸತು

ನೆಮ್ಮದಿಯ ನಾಳೆ ನಮ್ಮದು

## ಒಳಗೇನಿದೆ ...




**ಚಿತ್ರಗಳು :** ಕಮಲಂ ಅರಸು, ಶ್ರೀಹರಿ, ಸಂಕೇತ್, ಪತ್ತಾರ್
ಬಿ. ವಿ. ಎಚ್., ಗೋಪಿ, ಬಿ. ವಿಲ್ಸನ್
**ಮುಖಚಿತ್ರ :** ಡಾ|| ಬಿ. ಆರ್. ಅಂಬೇಡ್ಕರ್
**ವಿನ್ಯಾಸ :** ನವಕರ್ನಾಟಕ ವಿನ್ಯಾಸ
**ಕಚೇರಿ ಸಹಕಾರ :** ಜಿ. ವಿ. ತೇಜೋವತಿ


## ಈ ತಿಂಗಳು

ವಕೀಲ ವೃತ್ತಿ ಸಮಾಜದಲ್ಲಿ ಬಹಳ ಉದಾತ್ತ ವೃತ್ತಿಯೆಂದು ಬಹಳಷ್ಟು ವಕೀಲರಲ್ಲೇ ಸೀಮಿತಗೊಂಡಿರುವ ಪೂಜ್ಯ ಭಾವನೆ. ಇದು ಸಮಾಜದ ಇತರೆ ವರ್ಗದ ಜನರ ಅನುಭವಕ್ಕೆ ಬಂದಿರುವ ಅಭಿಪ್ರಾಯ ಕೂಡ ಎಂದು ಹೇಳುವುದು ಸ್ವಲ್ಪ ಕಷ್ಟದ ಕೆಲಸ. ಹಾಗಾಗಿ ವಕೀಲರು, ಎಷ್ಟೇ ಸಮಂಜಸ ಕಾರಣಕ್ಕಾದರೂ, ಮುಷ್ಕರದ ಹಾದಿ ಹಿಡಿದಾಗ ಜನರ, ಅದರಲ್ಲೂ ಕಕ್ಷಿದಾರರ ಅನುಕಂಪ ದೊರೆಯುವುದು ದುರ್ಲಭ. ಅದೂ ಸಾಲದೆಂದು ಮಾಧ್ಯಮದ ಪ್ರತಿನಿಧಿಗಳು ವಕೀಲರನ್ನು ಗೂಂಡಾಗಳೆಂದು, ಅನಾಗರಿಕರೆಂದು ಚಿತ್ರೀಕರಿಸಿ, ಜನಾಭಿಪ್ರಾಯ ರೂಪಿಸಿ ಪೊಲೀಸರಿಂದ ಥಳಿಸಿದಲ್ಲಿ ವಕೀಲರ ಪಾಡು ವಿವರಿಸಲಾರದಷ್ಟು ಕೀಳು. ವಕೀಲರ ಇಂದಿನ ರೋಷಕ್ಕೆ ಇವೇ ಸಾಮಗ್ರಿಗಳು. ವಿಪರ್ಯಾಸವೆಂದರೆ ಕಕ್ಷಿದಾರರಿಗೆ ಕಾನೂನು ಸಲಹೆ ನೀಡುವ ವಕೀಲರಿಗೇ ಇಂದು ಎಲ್ಲರೂ ಕಾನೂನು ಸಲಹೆ ಉಚಿತವಾಗಿ ಹಾಗೂ ಧಾರಾಳವಾಗಿ ನೀಡುತ್ತಿದ್ದಾರೆ.

ವಕೀಲರು ಮತ್ತು ಮಾಧ್ಯಮ ಪ್ರತಿನಿಧಿಗಳ ಮಧ್ಯೆ, ವಕೀಲರು ಮತ್ತು ಪೊಲೀಸರ ನಡುವೆ ಇತ್ತೀಚಿನ ದಿನಗಳಲ್ಲಿ ಸಣ್ಣ-ಪುಟ್ಟ ಘರ್ಷಣೆಗಳು ನಡೆಯುತ್ತಿದ್ದು ಅಸಮಾಧಾನದ ಹೊಗೆಯಾಡುತ್ತಿದ್ದು, ಅದು ಭುಗಿಲೇಳುವ ಸಾಧ್ಯತೆಗಳ ಬಗ್ಗೆ ಪೂರ್ವ ಸೂಚನೆ ರಾಜ್ಯ ಸರ್ಕಾರಕ್ಕಿತ್ತು. ಆದರೆ ಸರ್ಕಾರ ಇದನ್ನು ಸರಿಪಡಿಸುವ ಗೋಜಿಗೆ ಹೋಗಿರಲಿಲ್ಲ. ಅದಿರು ಭಕ್ಷಕ ಜನಾರ್ದನ ರೆಡ್ಡಿಯನ್ನು ಬೆಂಗಳೂರಿನ ಸಿವಿಲ್ ನ್ಯಾಯಾಂಗ ಸಂಕೀರ್ಣದ ನ್ಯಾಯಾಲಯವೊಂದಕ್ಕೆ ಹಾಜರುಪಡಿಸುವ ಸಂದರ್ಭದಲ್ಲಿ ವಕೀಲರು ಮತ್ತು ಮಾಧ್ಯಮ ಪ್ರತಿನಿಧಿಗಳ ನಡುವಿನ ಬಿರುಕನ್ನು ದುರುಪಯೋಗಪಡಿಸಿಕೊಂಡು ವಕೀಲರ ಮೇಲೆ ದಾಳಿ ನಡೆಸಿದ್ದು ಶಂಕರ್ ಬಿದರಿ - ಜ್ಯೋತಿ ಪ್ರಕಾಶ್ ಮಿರ್ಜಿ ನೇತೃತ್ವದ ಪಡೆ. ಇದು ಪೂರ್ವಯೋಜಿತ ದಾಳಿ ಎಂಬ ಮಾತೂ ಕೇಳಿಬರುತ್ತಿದೆ. ಆದರೆ ಬಹುತೇಕ ಮಾಧ್ಯಮಗಳು ತಮ್ಮ ಪತ್ರಕರ್ತರ ಮೇಲೆ ವಕೀಲರು ಅಥವಾ ವಕೀಲರಂತೆ ಕರಿ ಕೋಟು ಧರಿಸಿದ್ದ ನಕಲಿ ಜನರು ತಮ್ಮ ಮೇಲೆ ಹಲ್ಲೆ ನಡೆಸಿದ್ದನ್ನು ಮಾತ್ರ ವಾಕರಿಕೆ ಬರುವಷ್ಟು ಬಿತ್ತರಿಸಿ, ಮಾಧ್ಯಮದ ದುರುಪಯೋಗಕ್ಕೊಂದು ನಿದರ್ಶನ ನೀಡಿ ತಾವೂ ಸಾಚಾಗಳಲ್ಲವೆಂಬುದನ್ನು ಸಾಬೀತುಗೊಳಿಸಿದರು. ನಂತರ ಬೆಳಕಿಗೆ ಬಂದಿರುವ ಸಂಗತಿಗಳನ್ನು ಗಮನಿಸಿದಲ್ಲಿ ವಕೀಲರ ಮೇಲೆ ಪೊಲೀಸರು ನಡೆಸಿದ ದೌರ್ಜನ್ಯ ಮಿತಿಮೀರಿದ್ದೆಂದೂ, ಜಿದ್ದಿನ ಕ್ರಮವೆಂದೂ ಕಾಣುತ್ತದೆ. ಅನೇಕ ಅಮಾಯಕ ತರುಣ ವಕೀಲರನ್ನು ಪೊಲೀಸರು ವಿನಾಕಾರಣ ಬೇರೆ ಸ್ಥಳಗಳಲ್ಲಿ ಥಳಿಸಿರುವುದೆ ಇಷ್ಟು ಆಕ್ರೋಶಕ್ಕೆ ಕಾರಣ.

ಸರ್ವೋಚ್ಚ ನ್ಯಾಯಾಲಯ ಈ ಹಿಂದೆಯೇ ವಕೀಲರು ಮುಷ್ಕರ ಮಾಡಬಾರದೆಂದು ನಿರ್ಣಯ ನೀಡಿದ್ದರೂ ದೇಶದ ವಿವಿಧ ಭಾಗಗಳಲ್ಲಿ ವಕೀಲರು ಕೋರ್ಟ್ ಕಲಾಪಗಳನ್ನು ಬಹಿಷ್ಕರಿಸಿ ಮುಷ್ಕರ ನಡೆಸಿರುವ ಘಟನೆಗಳಿವೆ. ಇದು ಏಕೆ ಆಗುತ್ತಿದೆ ಎಂಬ ಬಗ್ಗೆ ಸರಿಯಾದ ಚಿಂತನೆ ಕೂಡ ನಡೆದಿಲ್ಲ. ವಕೀಲರು ಭಾವುಕರಾಗಬಾರದು ಮತ್ತು ಆವೇಶಕ್ಕೊಳಗಾಗಬಾರದೆಂಬುದು ವೃತ್ತಿ ನಿಯಮ. ಬೇರೆಲ್ಲರಿಗೂ ನ್ಯಾಯ ದೊರಕಿಸಿಕೊಡುವ ವಕೀಲರು ಕಾನೂನು ಹೋರಾಟಗಳ ಮೂಲಕ ತಮಗಾದ ಅನ್ಯಾಯವನ್ನು ಸರಿಪಡಿಸಿಕೊಳ್ಳಲು ಸಾಧ್ಯವಿಲ್ಲವೆ ? ಇದೊಂದು ಉಚಿತ ಕಾನೂನು ಸಲಹೆಯಲ್ಲ, ನಮ್ಮನ್ನೆಲ್ಲ ಕಾಡುತ್ತಿರುವ ಪ್ರಶ್ನೆಯಷ್ಟೆ.

* * *

ಮಕ್ಕಳಿಗೋಸ್ಕರ ನಾವು ಏನೆಲ್ಲ ಮಾಡುತ್ತೇವೆಂದು ಸರ್ಕಾರ ಮತ್ತು ಜನ ಹಂಡೆಗಟ್ಟಲೆ ಮಾತು ಸುರಿಸುತ್ತಾರೆ, ಅನುಕಂಪ ಸೂಚಿಸುತ್ತಾರೆ ಮತ್ತು ಆಶ್ವಾಸನೆಗಳನ್ನು ಕೊಡುತ್ತಾರೆ. ಸರ್ಕಾರದಲ್ಲಿ ಹತ್ತಾರು ವಿಭಾಗಗಳು ಮಕ್ಕಳ ಅಭಿವೃದ್ಧಿ ಮತ್ತು ಕಲ್ಯಾಣಕ್ಕಾಗಿ ಮೀಸಲಾಗಿವೆ. ಆದರೆ ನಮ್ಮ ವಿಲಕ್ಷಣ ಸಂಸ್ಕೃತಿಯಲ್ಲಿ ಮಾತು ಮತ್ತು ಕೃತಿಗಳ ನಡುವೆ ಹೊಂದಾಣಿಕೆಯ ಅಗತ್ಯವಿಲ್ಲ. ಮೌಲ್ಯಗಳನ್ನು ಹೊಸಕಿ ಹಾಕಿದ ಆಚಾರ್ಯರು, ಮಠಪತಿಗಳು ಮತ್ತು ವಿದ್ವಾಂಸರು ಮೌಲ್ಯಗಳನ್ನು ಬಿಟ್ಟು ಬೇರೇನನ್ನೂ ಉಪದೇಶಿಸುವುದಿಲ್ಲ. ಇವರಿಗೆ ಸರಿಯಾಗಿ ಸರಕಾರ ಮತ್ತು ಅಧಿಕಾರಿಗಳು. ಶಿಶು ಅಭಿವೃದ್ಧಿ ಯೋಜನೆಯೊಂದರಲ್ಲಿ ಮುನಿರಾಜು ಎಂಬ ಮಹಾಮಹಿಮ ಅಧಿಕಾರಿ ಹಾಗೂ ಆತನ ಜೊತೆಯ ಇನ್ನೊಬ್ಬ ಅಧಿಕಾರಿ ಹದಿನೆಂಟೋ ಇಪ್ಪತ್ತೋ ಕೋಟಿ ರೂಪಾಯಿಗಳನ್ನು ನುಂಗಿದ್ದಾರೆಂದು ವರದಿಯಾಗಿದೆ. ಅದನ್ನು ಕೇಳಿ ಜನ ರೊಚ್ಚಿಗೇಳಲಿಲ್ಲ, ಆ ಮಹಾ ಶಿಶು ಸಂರಕ್ಷಕನನ್ನು ಅಟ್ಟಿಸಿಕೊಂಡು ಹೋಗಲಿಲ್ಲ. ಆತ ಲಪಟಾಯಿಸಿದ ಒಂದು ಬಿಡಿಗಾಸನ್ನೂ ಸರ್ಕಾರಕ್ಕೆ ಹಿಂದಿರುಗಿಸದಿರಲು ನಮ್ಮ ವ್ಯವಸ್ಥೆಯಲ್ಲಿ ಅವಕಾಶವಿದೆ. ಮಕ್ಕಳು

(೯ನೇ ಪುಟಕ್ಕೆ)

ತಿಂಗಳ ಪತ್ರಿಕೆ
**ಹೊಸತು**
ನಮ್ಮದಿಯ ನಾಳೆ ನಮ್ಮದು
ನವಕರ್ನಾಟಕ ಪ್ರಕಾಶನ

ಸಂಪುಟ-೧೩ ಸಂಚಿಕೆ-೯ ಏಪ್ರಿಲ್ ೨೦೧೨

**ಸಂಪಾದಕ**
ಜಿ. ರಾಮಕೃಷ್ಣ

**ಸಹಸಂಪಾದಕರು**
ಇಂದಿರಾಕುಮಾರಿ
ಸಿ. ಆರ್. ಕೃಷ್ಣರಾವ್
ಎನ್. ಗಾಯತ್ರಿ
ಕೆ. ಎಲ್. ಗೋಪಾಲಕೃಷ್ಣಯ್ಯ
ಕೆ. ಎಸ್. ಪಾರ್ಥಸಾರಥಿ
ರಾಮಲಿಂಗಪ್ಪ ಟಿ. ಬೇಗೂರು
ಎಸ್. ಸುರೇಂದ್ರ

**ವ್ಯವಸ್ಥಾಪಕ**
ಎ. ಆರ್. ಉಡುಪ

**ಮುದ್ರಕ-ಪ್ರಕಾಶಕ**
ಆರ್. ಎಸ್. ರಾಜಾರಾಮ್
ವ್ಯವಸ್ಥಾಪಕ ನಿರ್ದೇಶಕ
ನವಕರ್ನಾಟಕ ಪಬ್ಲಿಕೇಷನ್ಸ್ ಪ್ರೈ. ಲಿ.

**ಮುದ್ರಣ**
**ನವಕರ್ನಾಟಕ ಪ್ರಿಂಟರ್ಸ್**
೧೬೭ ಮತ್ತು ೧೬೮, ೧೦ನೇ ಮುಖ್ಯ ರಸ್ತೆ
೩ನೇ ಘಟ್ಟ, ಪೀಣ್ಯ ಕೈಗಾರಿಕಾ ಪ್ರದೇಶ
ಬೆಂಗಳೂರು - ೫೬೦ ೦೫೮
ದೂರವಾಣಿ : ೨೮೫೯೭೪೨೬

**ಹೊಸತು ಕಚೇರಿಯ ವಿಳಾಸ**
ನವಕರ್ನಾಟಕ ಪ್ರಕಾಶನ
**ನವಕರ್ನಾಟಕ ಪಬ್ಲಿಕೇಷನ್ಸ್ ಪ್ರೈವೆಟ್ ಲಿಮಿಟೆಡ್**
೧೫, ಎಂಬೆಸಿ ಸೆಂಟರ್, ಕ್ರೆಸೆಂಟ್ ರಸ್ತೆ, ಅಂ. ಪೆ. ೫೧೯೫
ಕುಮಾರ ಪಾರ್ಕ್ ಪೂರ್ವ, ಬೆಂಗಳೂರು - ೫೬೦ ೦೦೧
ದೂರವಾಣಿ : ೩೦೫೭೮೦೨೯, ೨೨೨೦೩೫೮೦
ಫ್ಯಾಕ್ಸ್ : ೩೦೫೭೮೦೨೩
**e-mail : navakarnataka@gmail.com**
**hosathu@gmail.com**
**hosathu.nkp@gmail.com**
**URL : www.navakarnataka.com**
**http : //navakarnataka.blogspot.in**
**http : //hosathu.blogspot.in**




## ಮಿತಿ ಮೀರುತ್ತಿರುವ ಮಾಫಿಯಾ ಹಾವಳಿ

**ಮಾ**ಫಿಯಾ ಮೂಲತಃ ಇಟಲಿ ದೇಶದ ಸಿಸಿಲಿ ದ್ವೀಪದ ಮೂಲದ ಪದ. ವ್ಯವಸ್ಥಿತ, ಸಂಘಟಿತ ತಂಡಗಳ ಅಪರಾಧ ಕೃತ್ಯಗಳಿಗೆ ಸಂಬಂಧಿಸಿದಂತೆ ಬಳಸುವ ಶಬ್ದ. ಇದು ಹೆಚ್ಚು ಪ್ರಚಾರಕ್ಕೆ ಬಂದದ್ದು ಕಳೆದ ಶತಮಾನದ ಐವತ್ತು ಅರವತ್ತರ ದಶಕದಲ್ಲಿ, ಮಾರಿಯೊ ಪುಜೊ ಎಂಬಾತನ 'ಗಾಡ್‌ಫಾದರ್' ಎಂಬ ಕಾದಂಬರಿಯಿಂದ. ಅಮೆರಿಕದ ಷಿಕಾಗೋ ನಗರದಲ್ಲಿ ಇಟಲಿ ಮೂಲದ ತಂಡಗಳು ನಡೆಸುತ್ತಿದ್ದ ಅಕ್ರಮ ಚಟುವಟಿಕೆಗಳನ್ನು, ಮತ್ತೆ ಅವು ಆಡಳಿತದ ಎಲ್ಲ ಅಂಗಗಳಲ್ಲೂ ಹೊಂದಿದ್ದ ಜಾಲವನ್ನೂ ಸಾರವತ್ತಾಗಿ ವಿವರಿಸುವ ಈ ಕಾದಂಬರಿ ಆಗ ತುಂಬ ಜನಪ್ರಿಯವಾಗಿತ್ತು, ಯಶಸ್ವಿಯಾದ ಸಿನಿಮಾ ಕೂಡ ಆಗಿತ್ತು. ಈಗ ಈ ಪದ ನಮ್ಮ ಜನಜೀವನದ ಎಲ್ಲ ಕ್ಷೇತ್ರಗಳನ್ನೂ ಆವರಿಸಿಕೊಂಡಿದೆ. ದಿನಬೆಳಗಾದರೆ ಮಾಧ್ಯಮಗಳಲ್ಲಿ, ಪತ್ರಿಕೆಗಳಲ್ಲಿ ವರದಿಯಾಗುವ ಹಗರಣಗಳು ಅದರ ಹಿಂದಿರುವ ಮಾಫಿಯಾ ತಂಡವನ್ನು ನೆನಪಿಸುತ್ತವೆ. ಅಧಿಕಾರಿಗಳು, ರಾಜಕಾರಣಿಗಳು, ಶಾಸಕರು, ಸಚಿವರು ಶಾಮೀಲಾಗಿರುವ ದೇಶದ ಸಂಪತ್ತಿನ ಲೂಟಿ ಪ್ರಕರಣಗಳು ನಿಜವಾಗಿ ಗಾಬರಿಗೊಳಿಸುವಂಥದ್ದಾಗಿದೆ. ಇನ್ನೂ ವಿಚಾರಣೆಯ ಹಂತದಲ್ಲೇ ಇರುವ ಕೋಟಿ ಕೋಟಿ ಅಕ್ರಮ ವ್ಯವಹಾರದ ೨ಜಿ ಹಗರಣ ಇಡೀ ದೇಶವನ್ನೇ ದಿಗ್ಭ್ರಮೆಗೊಳಿಸಿತು. ಈ ಚಕ್ರವ್ಯೂಹ ಭೇದಿಸಿ, ಹಿಂದಿರುವ ಅಪರಾಧಿಗಳನ್ನು ಗುರ್ತಿಸಿ, ಶಿಕ್ಷೆ ವಿಧಿಸಲು ಇನ್ನೆಷ್ಟು ವರ್ಷ ನಾವು ಕಾಯಬೇಕೊ ? ಕೊನೆಗೆ ಇದು ಟುಸ್ ಎಂದರೂ ಅಚ್ಚರಿಪಡಬೇಕಾಗಿಲ್ಲ.

ಈಚೆಗೆ ದೇಶದಲ್ಲೆಲ್ಲೆಡೆ ಗಣಿ ಮಾಫಿಯ, ಭೂ ಮಾಫಿಯ, ಗ್ರಾನೈಟ್ ಮಾಫಿಯ, ಮರಳು ಮಾಫಿಯ ಮುಂತಾದ ಹಲವು ಅಕ್ರಮಗಳು ವರದಿಯಾಗುತ್ತಿವೆ. ಮಾಹಿತಿ ಹಕ್ಕು ಕಾಯಿದೆ ಬಂದಮೇಲೆ ಇಂಥ ಪ್ರಕರಣಗಳು ಹೆಚ್ಚು ಹೆಚ್ಚಾಗಿ ಬಯಲಾಗುತ್ತಿವೆ. ಈ ಕ್ಷೇತ್ರದಲ್ಲಿ ಸಕ್ರಿಯವಾಗಿ ತೊಡಗಿಕೊಂಡಿರುವವರ ಮೇಲೆ ಅಕ್ರಮದಲ್ಲಿ ತೊಡಗಿರುವವರು ಹಲ್ಲೆ ನಡೆಸುತ್ತಿರುವುದು ಅಪರೂಪವೇನಲ್ಲ. ಅಂಥವರಿಗೆ ಜೀವ ಬೆದರಿಕೆ ಯಾವತ್ತೂ ಇದೆ. ಈ ಮಾಫಿಯ ತಂಡಗಳಿಗೆ ರಾಜಕಾರಣಿಗಳ, ಸಚಿವರುಗಳ ಮತ್ತು ಅಧಿಕಾರಸ್ಥರ ಬೆಂಬಲ ಇರುವುದರಿಂದ, ನೇರವಾಗಿ ತಂಡಗಳ ಸದಸ್ಯರೇ ಶಾಸನಸಭೆಗಳಿಗೆ ಚುನಾಯಿತರಾಗಿರುವುದರಿಂದ ಆಪತ್ತು ಇನ್ನಷ್ಟು ಹೆಚ್ಚಾಗಿದೆ. ಇತ್ತೀಚೆಗೆ ಇಂಥ ಅಕ್ರಮ ಚಟುವಟಿಕೆಗಳಲ್ಲಿ ಭಾಗಿಗಳೆಂದು ಆಪಾದನೆಗೆ ಗುರಿಯಾಗಿರುವ ಸಚಿವ ಸಮೂಹವೇ ಇದಕ್ಕೆ ಸಾಕ್ಷಿ. ಉತ್ತರಪ್ರದೇಶದಲ್ಲಿ ಇತ್ತೀಚೆಗೆ ಜರುಗಿದ ಚುನಾವಣೆಗಳಲ್ಲಿ ಕಾಲು ಭಾಗಕ್ಕೂ ಹೆಚ್ಚು ಶಾಸಕರು ಅಪರಾಧದ ಹಿನ್ನೆಲೆ ಹೊಂದಿದವರಾಗಿದ್ದಾರೆ ಎಂದು ತಿಳಿದುಬಂದಿದೆ. ಇದೇನು ಅಂಥ ಅಚ್ಚರಿಯ ಸಂಗತಿಯಲ್ಲ. ಕೆಲವರನ್ನು ಸಚಿವ ಪದವಿಗೆ ಸಹ ಏರಿಸಲಾಗಿದೆ !

ಅಪರಾಧ ಕೃತ್ಯಗಳನ್ನು ತಡೆಯಲು ಕಾರ್ಯನಿರತರಾಗಿರುವ ಪ್ರಾಮಾಣಿಕ ಅಧಿಕಾರಿಗಳ ಮೇಲೆ ದಾಳಿ, ಕಗ್ಗೊಲೆ ನಿಜವಾಗಿಯೂ ಕಳವಳಕಾರಿ ಸಂಗತಿ. ಮಧ್ಯಪ್ರದೇಶದಲ್ಲಿ ಇತ್ತೀಚೆಗೆ ಗಣಿ ಮಾಫಿಯಾದ ಕೈಯಲ್ಲಿ ಹತನಾದ ಯುವ ಪೊಲೀಸು ಅಧಿಕಾರಿ ನರೇಂದ್ರ ಕುಮಾರ ಪ್ರಕರಣ ಗಾಬರಿಗೊಳಿಸುವಂಥದ್ದು. ಕಳ್ಳತನದಲ್ಲಿ ಮರಳು ಸಾಗಣೆಯಲ್ಲಿ ತೊಡಗಿದ್ದವರನ್ನು ತಡೆಯಲು ಪ್ರಯತ್ನಿಸಿದ ಐಪಿಎಸ್ ಅಧಿಕಾರಿಯನ್ನೇ ಕೊಲೆಗೈದದ್ದು ಗಾಬರಿ ಹುಟ್ಟಿಸುವಂಥದ್ದು. ಈ ಪ್ರಕರಣದ ಹಿಂದೆ ಭಾರತೀಯ ಜನತಾ ಪಕ್ಷದ ಶಾಸಕರು, ಸಚಿವರು ಇದ್ದಾರೆಂದು ವರದಿಯಾಗಿದೆ. ಈವರೆಗೆ ಇನ್ನೂ ಯಾರನ್ನೂ ಬಂಧಿಸದಿರುವುದು ಸಂಶಯವನ್ನು ಇನ್ನಷ್ಟು ಬಲಗೊಳಿಸಿದೆ. ಮಧ್ಯಪ್ರದೇಶದಲ್ಲಿ ಹೆಚ್ಚಾಗಿರುವ ಕಲ್ಲಿದ್ದಲ ಗಣಿ ಪ್ರದೇಶಗಳಲ್ಲಿ ಅಲ್ಲಿನ ಗಣಿ ಮಾಲಿಕರುಗಳ ಅಕ್ರಮಗಳು ಹಿಂದಿನಿಂದ ಬಂದದ್ದು. ಕಾರ್ಮಿಕರ ಸಂಘಟನೆಯನ್ನು ಮುರಿಯಲು ಗಣಿ ಮಾಫಿಯಾ ನಡೆಸಿರುವ ಕೊಲೆಗಳು ಕಮ್ಮಿಯೇನಲ್ಲ. ರಾಜಕೀಯ ಪ್ರಾಬಲ್ಯವನ್ನು ಹೊಂದಿರುವ ಈ ಗಣಿ ಮಾಲೀಕರ ಮೇಲೆ ಕ್ರಮ ಜರುಗಿಸುವುದು ಸುಲಭದ ಕೆಲಸವಲ್ಲ. ಭಾಜಪ ಸರಕಾರದ ಆಡಳಿತದಲ್ಲಿ ಅಕ್ರಮಗಳು ಮೇರೆ ಮೀರಿವೆ. ಪ್ರಕರಣಗಳು ಜರುಗಿದಾಗ ಮಂದಗತಿಯ ತನಿಖೆ, ವಿಚಾರಣೆ, ನ್ಯಾಯ ವಿತರಣೆಯಲ್ಲಿ ಆಗುವ ನಿಧಾನ ಭ್ರಮನಿರಸನವನ್ನುಂಟುಮಾಡುತ್ತದೆ ಎಂಥವರಿಗೂ. ಈ ಪ್ರಕರಣದ ಬೆನ್ನಲ್ಲೇ ಅದೇ ಮಧ್ಯಪ್ರದೇಶದಲ್ಲಿ ಇನ್ನೊಂದು ಹಲ್ಲೆ ಪ್ರಕರಣ ವರದಿಯಾಗಿದೆ. ಹಾಡಹಗಲಲ್ಲೇ ಮಾರುಕಟ್ಟೆಯಲ್ಲಿ ಟಿಂಬರ್ ಮಾಫಿಯಾದವರು ಅರಣ್ಯ ಇಲಾಖೆಯ ಕಾವಲುಗಾರನ ಮೇಲೆ ಹಲ್ಲೆ ನಡೆಸಿ ಹಿಗ್ಗಾಮುಗ್ಗಾ ಥಳಿಸಿದ್ದಾರೆ. ಈತ ಈಗ ಆಸ್ಪತ್ರೆಯಲ್ಲಿ ಚಿಕಿತ್ಸೆ ಪಡೆಯುತ್ತಿದ್ದಾನೆ. ಅಫ್ಘಾನ್ ಸಿಂಗ್ ಥಾಕೂರ್ ಎಂಬ ಹೆಸರಿನ ಈ ಸರಕಾರಿ ನೌಕರ ಎಸಗಿದ ಮಹಾಪರಾಧ ಪನ್ನಾ ಕಾಡಿನಿಂದ ತೇಗದ ಮರವನ್ನು ಕಳ್ಳತನದಲ್ಲಿ ಸಾಗಿಸುತ್ತಿದ್ದವರ ಸುಳಿವನ್ನು ಅಧಿಕಾರಿಗಳಿಗೆ ನೀಡಿದ್ದು ಅಷ್ಟೆ. ಮಧ್ಯಪ್ರದೇಶದಲ್ಲಿ ನಡೆಯುತ್ತಿರುವ ಮಾಫಿಯಾ ದಾಳಿಯನ್ನು ಮಾನವಹಕ್ಕುಗಳ ಆಯೋಗ ಖಂಡಿಸಿದೆ. ಮಧ್ಯಪ್ರದೇಶದಲ್ಲಿ ಹೆಚ್ಚು ಕಡಿಮೆ ೯೮೦೬ ಅಕ್ರಮಗಳಿವೆ ಎಂಬುದಾಗಿ ಭಾರತ ಸರಕಾರದ ಕಂಟ್ರೋಲರ್ ಅಂಡ್ ಆಡಿಟರ್ ಜನರಲ್ ಸಂಸ್ಥೆ ಅಂದಾಜು ಮಾಡಿದೆ. ಇದರಿಂದ ಮಧ್ಯಪ್ರದೇಶ ಸರಕಾರಕ್ಕೆ ಪ್ರತಿ ವರ್ಷ ೧೫೦೦ ಕೋಟಿ ರೂಪಾಯಿಗಳು ನಷ್ಟವಾಗುತ್ತಿದೆ ಎಂದು ಹೇಳಲಾಗಿದೆ. ಬಹುಶಃ ದೇಶದಲ್ಲಿ ನಡೆಯುತ್ತಿರುವ ಅಕ್ರಮಗಳಿಂದ ಸಂಭವಿಸುತ್ತಿರುವ ನಷ್ಟವನ್ನು ಲೆಕ್ಕ ಹಾಕಿದರೆ ಅದು ರಾಷ್ಟ್ರದ ನಿವ್ವಳ ಉತ್ಪತ್ತಿಯನ್ನೂ ಮೀರೀತೇನೊ !

ಕೆಲ ವರ್ಷಗಳ ಹಿಂದೆ ಪೆಟ್ರೋಲಿನ ಕಲಬೆರಕೆ ಮಾಫಿಯಾದ ವಿರುದ್ಧ ಕ್ರಮ ಕೈಗೊಳ್ಳಲು ಪ್ರಯತ್ನಿಸಿದ ಒಎನ್‌ಜಿಸಿ

ಯುವ ಇಂಜಿನಿಯರ್ ಕೊಲೆಪ್ರಕರಣವನ್ನು ಈ ಸಂದರ್ಭದಲ್ಲಿ ನೆನಪಿಸಿಕೊಳ್ಳಬಹುದು. ಈ ಕೊಲೆ ನಡೆದದ್ದೂ ಕೂಡ ಹಾಡು ಹಗಲಿನಲ್ಲೇ. ಇಂಥ ಘಟನೆಗಳನ್ನು ನೋಡಿದಾಗ ಪ್ರಾಮಾಣಿಕವಾಗಿ ಕಾರ್ಯನಿರ್ವಹಿಸಲು ಪ್ರಯತ್ನಿಸುವವರಿಗೆ ರಕ್ಷಣೆಯೇ ಇಲ್ಲವೆ ಎನ್ನುವ ಪ್ರಶ್ನೆ ಎದುರಾಗುತ್ತದೆ. ಇದಕ್ಕೆ ಕೊನೆ ಇಲ್ಲವೆ ?

ಮಧ್ಯಪ್ರದೇಶದ ಘಟನೆಯಿಂದ ದೇಶದ ಇತರ ರಾಜ್ಯಗಳು ಎಚ್ಚರ ವಹಿಸಬೇಕಾಗಿದೆ. ಇಲ್ಲದಿದ್ದರೆ ಈಗಾಗಲೇ ಕಪ್ಪುಹಣದ ಪ್ರಭಾವದಿಂದ, ಅಕ್ರಮ ವ್ಯವಹಾರಗಳಿಂದ ಸಮಾನಾಂತರ ವ್ಯವಸ್ಥೆ ರೂಪಿಸುತ್ತಿರುವ ಮಾಫಿಯಾ ತಂಡಗಳದೇ ಮೇಲುಗೈ ಆದೀತು. ಕರ್ನಾಟಕ ಈ ವಿಷಯದಲ್ಲಿ ಹಿಂದೆ ಬಿದ್ದಿಲ್ಲ. ಬಳ್ಳಾರಿ ಗಣಿ ಧಣಿಗಳ ಪ್ರಕರಣ ನಮ್ಮ ಮುಂದಿದೆ. ಕೋಟಿಗಟ್ಟಲೆ ಲೂಟಿ ಹೊಡೆದು ಸರಕಾರವನ್ನೇ ಒತ್ತೆಯಿಟ್ಟುಕೊಂಡಿದ್ದ ಪ್ರಬಲರು ಇವರು. ಇದರ ಪೂರ್ಣ ಸತ್ಯ ಎಂದು ಹೊರಬರುತ್ತದೋ ಏನೋ ಯಾರಿಗೆ ಗೊತ್ತು! ಕರ್ನಾಟಕದಲ್ಲೂ ಗಣಿ ಮಾಫಿಯಾ ಜೊತೆಗೆ, ಮರಳು ಮಾಫಿಯ, ಗ್ರಾನೈಟ್ ಮಾಫಿಯ ಮೊದಲಾದವೆಲ್ಲ ಇವೆ. ಯಾವುದೇ ದಿಟ್ಟ ಕ್ರಮ ತೆಗೆದುಕೊಳ್ಳಲು ದುರ್ಬಲವಾಗಿರುವ ಭಾಜಪ ಸರಕಾರದಿಂದ ಇವನ್ನು ಮಟ್ಟಹಾಕಲು ಸಾಧ್ಯವೆ ? ಇನ್ನೊಂದು ಗಮನಿಸಬೇಕಾದ ಅಂಶ ಎಂದರೆ ಭಾಜಪ ಅಧಿಕಾರದಲ್ಲಿರುವ ರಾಜ್ಯಗಳಲ್ಲೇ ಅಕ್ರಮಗಳ ಹಾವಳಿ ಹೆಚ್ಚುತ್ತಿರುವುದು.

## ಬಜೆಟ್ ಕುರಿತಾಗಿ

ಯುಪಿಎ-೨ ಈ ವರ್ಷದ ತನ್ನ ಆದ್ಯತೆಗಳನ್ನು ಆಯವ್ಯಯ ಪತ್ರದ ಮೂಲಕ ಬಹಿರಂಗಗೊಳಿಸಿದೆ. ಯುಪಿಎದ ನಾಯಕ ಪಕ್ಷವಾದ ಕಾಂಗ್ರೆಸ್ ಬಜೆಟ್ಟನ್ನು ಸಮರ್ಥಿಸಿಕೊಳ್ಳಲು ತಿಣುಕಾಡಿದೆ – ಮಾಮೂಲಿನಂತೆ. ಸಮ್ಮಿಶ್ರ (ಕಿಚಡಿ !) ಸರಕಾರಗಳ ಇಕ್ಕಟ್ಟು ಮತ್ತು ಅಂತರರಾಷ್ಟ್ರೀಯ ಆರ್ಥಿಕ ವ್ಯವಸ್ಥೆಯ ಬಿಕ್ಕಟ್ಟುಗಳ ಆಧಾರದಲ್ಲಿ ತನ್ನ ಅಸಹಾಯಕತೆಯನ್ನು ತೋಡಿಕೊಂಡಿದೆ. ಇತರ ಅಂಗ ಪಕ್ಷಗಳು ಸ್ವಲ್ಪ ಎಚ್ಚರಿಕೆಯಿಂದಲೇ ಪ್ರತಿಕ್ರಿಯಿಸಿವೆ. ಮುಖ್ಯವಾಗಿ ಮಮತಾ ಬ್ಯಾನರ್ಜಿ ರೈಲ್ವೆ ಇಲಾಖೆಯಲ್ಲಿನ ತನ್ನ ಅಭ್ಯರ್ಥಿಯನ್ನು ಬದಲಾಯಿಸಿ ಇಡೀ ಪ್ರಕ್ರಿಯೆಗೆ ಸ್ವಲ್ಪ ಅಣಕು ನಾಟಕದ ರಂಗನ್ನು ತುಂಬಿದ್ದಾರೆ. ವಿರೋಧ ಪಕ್ಷ ಬಿಜೆಪಿ ಸದ್ಯದ ಆಡಳಿತಾರೂಢ ''ಕಿಚಡಿಗಿಂತಲೂ ತನ್ನ ಕಿಚಡಿ ಹೆಚ್ಚು ರುಚಿಕರ ಮತ್ತು ಹೇಗೆ ಭಿನ್ನ'' ಎಂಬುದನ್ನು ವಿವರಿಸುವಲ್ಲಿ ವಿಫಲವಾಗಿದೆ. ನಮ್ಮ ರಾಜ್ಯದ ಬಜೆಟ್ ಅಧಿವೇಶನಕ್ಕೂ ಮುನ್ನ ಈ ಪಕ್ಷದ ನಾಯಕರು ನಡೆಸಿರುವ ರೆಸಾರ್ಟ್, ದೇವಸ್ಥಾನ ಮತ್ತು ಸ್ವಾಮೀಜಿಗಳ ಸನ್ನಿಧಾನದ ರಾಜಕೀಯ ನಮ್ಮಂತಹವರನ್ನು ಬಿಡಿ, ಅದೇ ಪಕ್ಷದ ಕಾರ್ಯಕರ್ತರೂ – ಸಮರ್ಥಕರೂ ಅಸಹ್ಯ ಪಟ್ಟುಕೊಳ್ಳುವ ಮಟ್ಟಕ್ಕೆ ಬಂದಿದೆ. ಎಡಪಕ್ಷಗಳು ಈ ಬಜೆಟ್ಟನ್ನು ಜನ ವಿರೋಧಿ ಮತ್ತು ಅತ್ಯಗತ್ಯ ವಸ್ತುಗಳ ಬೆಲೆ ಏರಿಕೆಗೆ ಪೂರಕವಾಗುವಂತಹುದು ಎಂದು ವ್ಯಾಖ್ಯಾನಿಸಿ ಈ ಬಜೆಟ್ಟನ್ನು ವಿರೋಧಿಸಲು ಕರೆ ನೀಡಿವೆ.

ಈ ಬಜೆಟ್ಟಿನಲ್ಲೂ ಪಂಡಿತರು ವಿಶ್ಲೇಷಣೆ ಮಾಡಿಕೊಳ್ಳಲು ಸಾಕಷ್ಟು ಅಂಕಿ-ಅಂಶಗಳಿವೆ. ಈ ಅಂಕಿ-ಅಂಶಗಳು ಒಟ್ಟಾರೆಯಾಗಿ ವ್ಯಕ್ತಪಡಿಸುವುದೇನೆಂದರೆ, ಈ ವರ್ಷ ಈ ದೇಶವನ್ನು ಸಾಗಿಸುವುದಕ್ಕೆ ಲಭ್ಯವಿರುವ ಹಣ ಎಷ್ಟು, ಬೇರೆ-ಬೇರೆ ಮೂಲಗಳಿಂದ ನಿರೀಕ್ಷಿಸಲಾಗಿರುವ ಆದಾಯ, ಯಾವ್ಯಾವ ಕ್ಷೇತ್ರಗಳಲ್ಲಿ ಎಷ್ಟೆಷ್ಟು ಹಣವನ್ನು ತೊಡಗಿಸಲಾಗುವುದು, ಒಟ್ಟಾರೆ ಲಾಭ-ನಷ್ಟಗಳ ಲೆಕ್ಕಾಚಾರ ಮತ್ತು ನಮ್ಮ ಸಾಮಾಜಿಕ ವ್ಯವಸ್ಥೆಯ ಮೇಲೆ ಇವುಗಳ ಉದ್ದೇಶಿತ ಪ್ರಭಾವವನ್ನು ಗುರುತಿಸುವ ಪ್ರಯತ್ನ. ಈ ಕುರಿತ ವಿವರಗಳು ಈಗಾಗಲೇ ಲಭ್ಯವಿರುವುದರಿಂದ, ಬಜೆಟ್ಟಿನ ನಿರ್ದಿಷ್ಟ ಅಂಶಗಳ ಕುರಿತ ವಿವರವಾದ ಪ್ರಸ್ತಾಪ ಇಲ್ಲಿಲ್ಲ. ಆರ್ಥಿಕ ಕ್ಷೇತ್ರದ ಯಾವುದೇ ಪಾಂಡಿತ್ಯವಿಲ್ಲದ ಆದರೆ ಸಂಸಾರಗಳನ್ನು ತೂಗಿಸಿಕೊಂಡು ಹೋಗುವ ಗ್ರಾಮೀಣ ಪ್ರದೇಶದ ಮಹಿಳೆಯೂ ಈ ಅಂಕಿ-ಅಂಶಗಳನ್ನು ಗಮನಿಸಿ ಉದ್ದಾಮ ಪಂಡಿತ ಪ್ರಣವ್ ಮುಖರ್ಜಿ ಬಳಗ ಯಾರ ಪರ ಎಂಬುದನ್ನು ಗುರುತಿಸುವುದರ ಜೊತೆಗೆ ನೈಸರ್ಗಿಕ ಹಾಗೂ ಮಾನವ ಸಂಪನ್ಮೂಲಗಳ ಬಳಕೆ ಮತ್ತು ಅಭಿವೃದ್ಧಿ; ತನ್ಮೂಲಕ ಕಷ್ಟದ ಪರಿಸ್ಥಿತಿಯಲ್ಲೂ ನಮ್ಮ ಹಿತವನ್ನು ಕಾಯ್ದುಕೊಳ್ಳುವ ಕುರಿತು ಈ ದೇಶಕ್ಕೆ ಪಾಠಗಳನ್ನು ಹೇಳಿಕೊಡಬಲ್ಲಳು ಎಂಬುದು ನಮ್ಮ ನಂಬಿಕೆ. ಆಕೆಗೆ ಈ ವಿಷಯ ತಿಳಿದೇ ಇದೆ. ಆದರೆ ಕೊರತೆಯಿರುವುದು ಇಂತಹವರನ್ನು ಬಳಸಿಕೊಂಡು ಸಾಮೂಹಿಕ ರೂಪ ಕೊಡುವಲ್ಲಿ, ಇಂತಹ ಮತ್ತು ಚುನಾವಣಾ ಸಂದರ್ಭಗಳಲ್ಲಿ ಮಾತ್ರ ಪ್ರಸ್ತುತತೆ ಪಡೆಯುವ ತೃತೀಯ ರಂಗದ ಸೃಷ್ಟಿಯ ಪ್ರಯತ್ನ ಸಾಕಾರವಾಗುವುದರಲ್ಲಿ.

'ಪ್ರಜಾಪ್ರಭುತ್ವದಲ್ಲಿ ಪ್ರಜೆಗಳೇ ಪ್ರಧಾನ' ಎಂಬ ಮಂತ್ರ ಪಠಣಕ್ಕೆ ನಾವೆಲ್ಲ ಒಗ್ಗಿಹೋಗಿದ್ದೇವೆ. ಪ್ರತಿವರ್ಷ ಮಂಡಿಸಲಾಗುವ ಆಯವ್ಯಯ ಪತ್ರಗಳಲ್ಲಿ ಜನಸಾಮಾನ್ಯರ ಅಗತ್ಯ, ಅನುಕೂಲಗಳ ಪೂರೈಕೆ ಮತ್ತು ಮೂಲಭೂತ ಕಷ್ಟಗಳ ನಿವಾರಣೆಯ ಉದ್ದೇಶದಿಂದ ರೂಪುಗೊಂಡ ಕಾರ್ಯಕ್ರಮಗಳು ಆದ್ಯತೆಯನ್ನು ಪಡೆದಿರುತ್ತವೆ ಎಂಬ ಪ್ರಬಲ ಆಶೆ ಮತ್ತು ಪ್ರಾಮಾಣಿಕ ನಂಬಿಕೆಗಳನ್ನು (೧೨೦ ಕೋಟಿ ಜನಸಂಖ್ಯೆಯ ನಮ್ಮ ದೇಶದಲ್ಲಿ) ಇನ್ನೂ ಉಳಿಸಿಕೊಂಡಿರುವ ಕನಿಷ್ಠ ೧೦೦ ಮಂದಿಯೂ ದೊರಕಲಾರರು ಎಂದು ಹೇಳಿದರೆ ಉತ್ಪ್ರೇಕ್ಷೆಯೇನೂ ಆಗಲಾರದೆನಿಸುತ್ತದೆ. ಸ್ವಾತಂತ್ರ್ಯಾನಂತರ ಈಗಾಗಲೇ ಮಂಡಿಸಲಾಗಿರುವ ೬೦ಕ್ಕೂ ಹೆಚ್ಚು ಆಯವ್ಯಯ ಪತ್ರಗಳ ಆದ್ಯತೆಗಳು, ಆಯಾ ಕಾರ್ಯಕ್ರಮಗಳ ಯೋಜನೆ ಮತ್ತು ಅವುಗಳ ಅನುಷ್ಠಾನದಲ್ಲಿ ಎದ್ದು ಕಂಡಿರುವ ಪ್ರಾಮಾಣಿಕತೆ ಮತ್ತು ದಕ್ಷತೆಗಳ ಕೊರತೆ ಸಾಧಿಸಬಹುದಾದುದನ್ನೂ ಸಾಧಿಸಿಲ್ಲದ ನಮ್ಮ ಪ್ರಜಾಪ್ರಭುತ್ವ ವ್ಯವಸ್ಥೆಯ ಇಂದಿನ ದುಸ್ಥಿತಿಗೆ ಕಾರಣ. ಸಾರ್ವತ್ರಿಕ ಶಿಕ್ಷಣ, ಆರೋಗ್ಯ, ಉದ್ಯೋಗ ಖಾತ್ರಿ, ರಸ್ತೆ ಮತ್ತಿತರೆ ಮೂಲಸೌಕರ್ಯಗಳಿಗೆ ಸಂಬಂಧಿಸಿದ

ತಿಂಗಳ ಪತ್ರಿಕೆ
ಹೊಸತು
ನಮ್ಮದಿಯ ನಾಳೆ ನಮ್ಮದು
ನವಕರ್ನಾಟಕ ಪ್ರಕಾಶನ





**ಚಂದಾ ವಿವರಗಳು**

| | |
|---|---|
| ಬಿಡಿ ಸಂಚಿಕೆ | ರೂ. ೧೨/- |
| ವಾರ್ಷಿಕ ಚಂದಾ | ರೂ. ೧೫೦/- |
| ಮೂರು ವರ್ಷಕ್ಕೆ | ರೂ. ೩೫೦/- |

**ನವಕರ್ನಾಟಕ ಶಾಖೆಗಳು**

೫ನೇ ಮುಖ್ಯ ರಸ್ತೆ, ಗಾಂಧಿನಗರ
ಬೆಂಗಳೂರು - ೫೬೦ ೦೦೯
✆ : ೦೮೦-೨೨೨೫೧೩೮೨

ಕೆ. ಎಸ್. ಆರ್. ರಸ್ತೆ
ಮಂಗಳೂರು - ೫೭೫ ೦೦೧
✆ : ೦೮೨೪-೨೪೪೧೦೧೬

ಶರಾವತಿ ಕಟ್ಟಡ, ಬಲ್ಮಠ
ಮಂಗಳೂರು - ೫೭೫ ೦೦೧
✆ : ೦೮೨೪-೨೪೨೫೧೬೧

ರಾಮಸ್ವಾಮಿ ವೃತ್ತ
ಮೈಸೂರು - ೫೭೦ ೦೨೪
✆ : ೦೮೨೧-೨೪೨೪೯೪೪

ಸ್ಟೇಷನ್ ರಸ್ತೆ
ಗುಲ್ಬರ್ಗಾ - ೫೮೫ ೧೦೨
✆ : ೦೮೪೭೨-೨೨೪೩೦೨

ಯೋಜನೆಗಳನ್ನು ಈ ನಿಟ್ಟಿನಲ್ಲಿ ನೋಡಬಹುದು. ಈ ಎಲ್ಲಾ ಕ್ಷೇತ್ರಗಳನ್ನು ಪ್ರತಿನಿಧಿಸುವ ಒಂದಲ್ಲಾ ಒಂದು ಯೋಜನೆ ಮತ್ತು ಆಯಾ ಯೋಜನೆಯ ಎದುರು ಒಂದಷ್ಟು ಹಣವನ್ನು ಜೋಡಿಸಿಬಿಟ್ಟರೆ ಅದು ಜನಸಾಮಾನ್ಯರ ಬಜೆಟ್ ಆಗಿಬಿಡುತ್ತದೆ ಎಂದು ನಮ್ಮ ಸರಕಾರಗಳು ಭಾವಿಸಿರುವಂತಿದೆ. ಈ ಯೋಜನೆಗಳಿಗೆ ಒದಗಿಸಲಾಗಿರುವ ಹಣದ ಸದುಪಯೋಗ ಆಗುತ್ತಿಲ್ಲ ಎಂಬುದು ಎಲ್ಲರಿಗೂ ತಿಳಿದ ವಿಷಯವೇ. ಯೋಜನೆಗಳಲ್ಲಿ ಶಿಕ್ಷಣ, ಆರೋಗ್ಯ, ಉದ್ಯೋಗ ಸೃಷ್ಟಿಯಂತಹ ಕ್ಷೇತ್ರಗಳಲ್ಲಿ ಅಗತ್ಯವಾದ ಹಣವನ್ನು ತೊಡಗಿಸಿಲ್ಲ, ಪ್ರಾಕ್ಟಿಕಲ್ ಆದಂತಹ ಉಪಾಯಗಳೇ ಇಲ್ಲ ಎಂಬ ವಿಶ್ಲೇಷಣೆ ಎಷ್ಟೇ ಹಳತಾದರೂ ಈ ಬಜೆಟ್ಟಿಗೂ ಅನ್ವಯವಾಗುವಂತಹುದು. ಆದರೆ, ಯೋಜಿತ ಹಣವನ್ನು ಬಳಸಿಯೂ ಇಲ್ಲ ಎಂಬುದು ಈ ದೇಶಕ್ಕೆ ಬಗೆದ ಒಂದು ಮಹಾದ್ರೋಹ. ನಮ್ಮ ಎಂಪಿಗಳಿಗೆ ಅವರವರ ಕ್ಷೇತ್ರಗಳ ಉದ್ಧಾರಕ್ಕೆಂದು ಪ್ರತಿ ವರ್ಷ ೨ ಕೋಟಿಗಳನ್ನು ಒದಗಿಸಲಾಗುತ್ತದೆ. ಈ ಹಣವನ್ನು ಸದುಪಯೋಗ ಪಡಿಸಿಕೊಳ್ಳಲಾರದಷ್ಟು ಬ್ಯುಸಿ ನಮ್ಮ ಬಹಳಷ್ಟು ಎಂಪಿಗಳು. ೧೯೯೩-೯೪ರಲ್ಲಿ ಜಾರಿಗೆ ಬಂದ ಯೋಜನೆಯಡಿ ಇದುವರೆವಿಗೆ ಸುಮಾರು ೧೯೦೦೦ ಕೋಟಿ ರೂಪಾಯಿಗಳ ಬಳಕೆಯಾಗಿದೆಯಂತೆ! ದೇಶದ ಜನಸಂಖ್ಯೆಯ ೪೦೦ ಮಂದಿಗೆ ಒಂದರಂತೆ ಹಬ್ಬಿರುವ ಎನ್‌ಜಿಓಗಳ ಅಬ್ಬರದ ಕುರಿತ ಸರಕಾರದ ಅಧಿಕೃತ ಹೇಳಿಕೆಯ ಪ್ರಕಾರ ೨೦೦೭-೧೦ರ ಮೂರು ವರ್ಷಗಳ ಅವಧಿಯಲ್ಲಿ ಈ ಸಾಮಾಜಿಕ ಕಳಕಳಿಯ ಆಪಾದನೆಯನ್ನು ಹೊತ್ತ ಈ ಎನ್‌ಜಿಓಗಳು ಸುಮಾರು ೩೧೦೦೦ ಕೋಟಿ ರೂ.ಗಳ ವಿದೇಶಿ ಹಣವನ್ನು ಪಡೆದುಕೊಂಡಿವೆಯಂತೆ. ಇದಲ್ಲದೆ ನಮ್ಮ ಕಾರ್ಪೊರೇಟ್ ವಲಯವೂ ಕೋಟಿಗಟ್ಟಲೆ ಹಣವನ್ನು ತಮ್ಮ 'ಸಾಮಾಜಿಕ ಜವಾಬ್ದಾರಿ' ಕಾರ್ಯಕ್ರಮಗಳ ಅಡಿಯಲ್ಲಿ ಹೂಡಿವೆ ಎಂದು ಅವೇ ಹೇಳಿಕೊಳ್ಳುತ್ತವೆ. ಸ್ವಲ್ಪ ಕಾಲದ ಹಿಂದೆ ೫೦೦ ಕೋಟಿಗೂ ಮಿಕ್ಕ ಹಣವನ್ನು ಶಿಕ್ಷಣ ಕ್ಷೇತ್ರದಲ್ಲಿ ತೊಡಗಿಸಲು ಕಾರ್ಪೊರೇಟ್ ವಲಯವೊಂದು ಮೀಸಲಿಟ್ಟಿರುವ ಅಂಶ ನಮ್ಮ ಸುದ್ದಿ-ಮಾಧ್ಯಮಗಳಲ್ಲಿ ಬಹಳ ಪ್ರಚಾರ ಪಡೆದಿದ್ದುದನ್ನು ನಮ್ಮ ಓದುಗರಾರೂ ಮರೆತಿರಲು ಸಾಧ್ಯವಿಲ್ಲ. ಈ ಎಲ್ಲಾ ಕೋಟಿಗಳು ಒಟ್ಟಾರೆಯಾಗಿ ಸಾಧಿಸಿರುವ ಅಭಿವೃದ್ಧಿ ಎಲ್ಲೆಲ್ಲಾಗಿದೆ ಎಂಬುದನ್ನು ಯಾರಾದರೂ ಕಂಡುಹಿಡಿಯಬೇಕು! ಭ್ರಷ್ಟಾಚಾರ, ನಿರುದ್ಯೋಗಿಗಳ ಸಂಖ್ಯೆ, ಮುಚ್ಚಿಹೋಗಿರುವ ಉದ್ದಿಮೆಗಳ ಸಂಖ್ಯೆ, ಬಡತನ ಮುಂತಾದವುಗಳ ಹೆಚ್ಚಳದಲ್ಲಿ, ರಾಷ್ಟ್ರ - ರಾಜ್ಯ ಮಟ್ಟಗಳೆರಡರಲ್ಲೂ ಸಾಕಷ್ಟು ಅಭಿವೃದ್ಧಿಯಾಗಿದೆ ಎಂದಂತೂ ಗ್ಯಾರಂಟಿಯಾಗಿ ಹೇಳಬಹುದು!

ಸಾರ್ವಜನಿಕ ಸಂಸ್ಥೆಗಳನ್ನು ಬಲಪಡಿಸುವ, ಸಾರ್ವಜನಿಕ ಸಾಲದ ಹೊರೆಯನ್ನು ಕಡಿಮೆಗೊಳಿಸುವ ಕೆಲಸ ಈ ವರ್ಷದಲ್ಲಂತೂ ಆಗುವ ಲಕ್ಷಣಗಳಿಲ್ಲ. ಬಜೆಟ್ಟಿನ ಮುನ್ನಾ ದಿನ ಪಿಎಫ್ ಬಡ್ಡಿದರವನ್ನು ಕಡಿತಗೊಳಿಸುವ ನಿರ್ಧಾರವನ್ನು ಪ್ರಕಟಿಸಿದ ಭಂಡತನ ಈ ಸರಕಾರದ್ದು. ಬಜೆಟ್ ಮಂಡನೆಯ ನಂತರ ಒಂದು ದಿವಸದ ಯಶಸ್ವಿ ಮುಷ್ಕರ ನಡೆಸಿದ ಟ್ರೇಡ್ ಯೂನಿಯನ್ ನಾಯಕರನ್ನು ಭೇಟಿಯಾಗುವುದಾಗಿ ಪ್ರಧಾನಿ ತಿಳಿಸಿದ್ದರು! ಬಜೆಟ್ಟಿಗೆ ಮುನ್ನ ಅವರನ್ನು ಭೇಟಿ ಮಾಡಬೇಕಾದ ಅಗತ್ಯ ಅವರಿಗೆ ಕಾಣಲಿಲ್ಲ! ಕಾರ್ಪೊರೇಟ್ ದಿಗ್ಗಜರೊಡನೆ ಬಹಳ ಬ್ಯುಸಿಯಾಗಿದ್ದಿರಬೇಕು. ಸುಮಾರು ೩೦೦೦೦ ಕೋಟಿ ಹಣವನ್ನು ಸಾರ್ವಜನಿಕ ಉದ್ಯಮಗಳನ್ನು ಸಂಪೂರ್ಣವಾಗಿ ಅಥವಾ ಅವುಗಳಲ್ಲಿನ ತನ್ನ ಹೂಡಿಕೆಯ ಸ್ವಲ್ಪ ಪ್ರಮಾಣವನ್ನು ಮಾರುವ ಮೂಲಕ ಎತ್ತುವ ಗುರಿ ಹೊತ್ತಿರುವ ಯೋಜನೆಯ ಹಿಂದೆ ಈ ಸರಕಾರದ ಹದ್ದಿನ ಕಣ್ಣು ಬಿ.ಎಸ್.ಎನ್.ಎಲ್. ಮತ್ತಿತರೆ ಸಾರ್ವಜನಿಕ ಉದ್ದಿಮೆಗಳ ಮೇಲಿರುವುದು ಸ್ಪಷ್ಟವಾಗಿಯೇ ಇದೆ. ೨೦೧೧-೧೨ನೇ ಸಾಲಿನಲ್ಲಿ ಓ.ಎನ್.ಜಿ.ಸಿ. ಯಲ್ಲಿನ ತನ್ನ ಷೇರುಗಳನ್ನು ಮಾರಿ ಸುಮಾರು ೧೩೦೦೦ ಕೋಟಿ ಗಳಿಸಿದ ಸರಕಾರವಲ್ಲವೇ ಇದು! ಮೂಲಭೂತ ಅಗತ್ಯಗಳ ಪೂರೈಕೆಯನ್ನು ಸಾಧಿಸುವ ಮತ್ತು ಅವುಗಳ ಕೊರತೆಯನ್ನು ನೀಗಿಸುವ ನಿರೀಕ್ಷೆಯನ್ನು ಈ ಬಜೆಟ್ ಹುಸಿಗೊಳಿಸುತ್ತದೆ. ಅಗತ್ಯ ವಸ್ತುಗಳ ಬೆಲೆ ಏರಿಕೆಗೆ ಪೂರಕವಾದ ತೆರಿಗೆಗಳ ಸ್ವರೂಪವನ್ನು ಈ ನಿಟ್ಟಿನಲ್ಲಿ ಗಮನಿಸಬಹುದು. ಬೇರೆ ವಿಶ್ಲೇಷಣೆಗಳೇನೇ ಇದ್ದರೂ ನಮ್ಮ ಮಟ್ಟಿಗೆ ಇದು ಸರಕಾರದ ದಿವಾಳಿತನ, ಮಾರ್ವಾಡಿತನ ಮತ್ತು ಖಾಸಗೀಕರಣದ ಕಡೆಗಿನ ಒಲವನ್ನು ತೋರಿಸುತ್ತದೆ.

೨-ಜಿ ಹಗರಣದ ಕೋಟಿಗಟ್ಟಲೆ ಹಣವನ್ನು ವಸೂಲು ಮಾಡುವ ಸಂಕಲ್ಪ ಸರ್ಕಾರಕ್ಕೆ ಇದ್ದಿದ್ದರೆ ಸಾಮಾನ್ಯರ ಮೇಲಿನ ಹೊರೆ ಎಷ್ಟೋ ಕಡಿಮೆಯದಿರಬಹುದಿತ್ತು. ಆದರೆ ಕದ್ದ ಹಣವನ್ನು ಹಿಂದಕ್ಕೆ ಪಡೆಯುವ ಪದ್ಧತಿ ನಮ್ಮಲ್ಲಿಲ್ಲ. ಆಡಳಿತ ವ್ಯವಸ್ಥೆ ಅದಕ್ಕೆ ಅನುಕೂಲ ಮಾಡಿಕೊಡುತ್ತದೆ. ಮಾರಿಷಸ್ ಮೂಲದಿಂದ ತೊಡಗಿಸಲಾದ ಷೇರು ಬಂಡವಾಳ ಎಂಬ ಖದೀಮ ವಾದದ ಆಧಾರದ ಮೇಲೆ ವೋಡಫೋನ್ ಎಂಬ ಕಂಪನಿಯು ೧೧,೦೦೦ ಕೋಟಿ ರೂಪಾಯಿಗಳ ತೆರಿಗೆಯನ್ನು ಕೊಡದೆ ವರಮಾನ ತೆರಿಗೆ ಇಲಾಖೆಯನ್ನು ಹಂಗಿಸುತ್ತಿದೆ. ಇಲಾಖೆಯು ಸರ್ವೋಚ್ಚ ನ್ಯಾಯಾಲಯದಲ್ಲಿ ಮೊಕದ್ದಮೆ ಹೂಡಿತು, ಆದರೆ ನ್ಯಾಯಾಲಯವು ವೋಡಫೋನ್ ಒಂದು ಚಿಕ್ಕಾಸು ತೆರಿಗೆಯನ್ನೂ ನೀಡಬೇಕಿಲ್ಲವೆಂಬ ಘನ ತೀರ್ಮಾನ ನೀಡಿತು. ಎಂಥದೋ ತಾಂತ್ರಿಕ ವಿವರಣೆ ಅದಕ್ಕಿದೆ, ಅದನ್ನು ವಿವರಿಸುವ ಅಗತ್ಯವಿಲ್ಲ. ಆ ತೆರಿಗೆಯನ್ನು ಪಡೆಯುವ ಉದ್ದೇಶದಿಂದ ವರಮಾನ ತೆರಿಗೆ ಕಾಯಿದೆಗೆ ತಿದ್ದುಪಡಿ ಸೂಚಿಸುವ ಕೆಲಸವನ್ನು ಬಜೆಟ್ ಮಾಡಿದೆ. ಅದೊಂದು ಸ್ವಾಗತಾರ್ಹ ಕ್ರಮ. ವೋಡಫೋನ್ ಮತ್ತೆ ನ್ಯಾಯಾಲಯದ ಮೆಟ್ಟಿಲೇರುವುದಾಗಿ ಘೋಷಿಸಿದೆ. ತಾಂತ್ರಿಕ ಅಂಶದ ಮುಸುಕಿನಲ್ಲಿ ಹನ್ನೊಂದು ಸಾವಿರ ಕೋಟಿ ಲೂಟಿ ಸಾಧ್ಯವಾದರೆ ಏಕೆ ಬೇಡ! ನಮ್ಮ ತೆರಿಗೆ ಕಾನೂನು ತಜ್ಞರು ಕೆಲವರು ಅಂತಹ ತಿದ್ದುಪಡಿ ಸರಿಯಲ್ಲವೆಂದು ಸಾರಿದ್ದಾರೆ. ಅಹ್ಲುವಾಲಿಯ ಪ್ರಕಾರ ಹೀಗೆ ತೆರಿಗೆ ಕೇಳಿದರೆ ವಿದೇಶಿ ಬಂಡವಾಳದ ಹರಿವು ನಿಂತುಹೋಗುತ್ತದಂತೆ. ಅಂತೂ ಅರ್ಥ ಸಚಿವರು ಸೂಚಿಸಿರುವ ತಿದ್ದುಪಡಿಯನ್ನು ಸಮರ್ಥಿಸಿಕೊಂಡು ಊರ್ಜಿತಗೊಳಿಸುತ್ತಾರೆಯೇ ಎಂಬುದನ್ನು ಕುತೂಹಲದಿಂದ ಕಾದುನೋಡಬೇಕು ಅಥವಾ ವಿದೇಶಿ ''ತಜ್ಞರು'' ಪ್ರಧಾನಿಯ ಕೈ ತಿರುಚಿ ತೆಪ್ಪಗಾಗಿಸುತ್ತಾರೋ ?

ಒಟ್ಟಾರೆ, ಜನಸಾಮಾನ್ಯರ ಪಾಲಿಗೆ ಎಲ್ಲ ಬಜೆಟ್‌ಗಳಂತೆ ಈ ಬಜೆಟ್ ಸಹ ಒಂದು ಸವಾಲು. ಯಾವ್ಯಾವ ಸಾಮಾನುಗಳನ್ನು ಕೊಳ್ಳಬೇಕೆಂಬ ನಿರ್ಧಾರ, 'ಕೊಳ್ಳಲಾಗದ ಮತ್ತು ನಿಷೇಧಿಸಬೇಕಾದವುಗಳ ಪಟ್ಟಿಯಿಂದ ಪ್ರಾರಂಭವಾಗಬೇಕಲ್ಲದೇ ನಮ್ಮ ಅಗತ್ಯಗಳನ್ನು ಆಧರಿಸಿಯಲ್ಲ' ಎಂಬ ಸ್ಪಷ್ಟ ಸೂಚನೆ ಈ ಬಜೆಟ್ಟಿನಲ್ಲೂ ಇದೆ. ಮೋಂಟೆಕ್ ಸಿಂಘ ಬಹುಶಃ ಹೇಳಬಹುದು: ''ಇಂತಹ ಹಲವಾರು ಬಜೆಟ್ಟುಗಳನ್ನು ಕಂಡಿರುವ ಜನಸಾಮಾನ್ಯರಿಗೆ ಗೊತ್ತು ಹೇಗೆ ಜೀವಿಸಬೇಕು ಎಂದು, ನೀವು ಬರಿದೆ ಉತ್ಪ್ರೇಕ್ಷೆ ಮಾಡುತ್ತಿದ್ದೀರಿ'' ಎಂದು. ಇಂತಹ ವಾದಗಳಿಗೆ ನಮ್ಮ ಸರಳ ಉತ್ತರ ''ಹೌದು ಸ್ವಾಮಿ. ನಿಮ್ಮ ಇಷ್ಟೆಲ್ಲಾ ಅಧ್ವಾನಗಳ ನಡುವೆಯೂ ಹೇಗೆ ಜೀವಿಸಬೇಕು, ಯಾವುದರ ಖರೀದಿಯಲ್ಲಿ ಎಷ್ಟು ಕುಂಠಿತವನ್ನು ಸಾಧಿಸಬೇಕು, ಯಾವುದರ ಖರೀದಿಯನ್ನು ನಿಲ್ಲಿಸಬೇಕು ಎಂಬುದು ಅವರಿಗೆ ಚೆನ್ನಾಗಿಯೇ ಗೊತ್ತು. ಏಕೆಂದರೆ ಲೆನಿನರು ಹೇಳುತ್ತಿದ್ದಂತೆ ''ಆಯ್ಕೆಯ ಸ್ವಾತಂತ್ರ್ಯ''ವನ್ನು ಅವರು ಪ್ರದರ್ಶಿಸುತ್ತಾರೆ. ಅವರ ಆಯ್ಕೆ ನಿಮ್ಮಂತಹವರಿಗೆ ಸರಿಯಾದ ಪಾಠ ಕಲಿಸುವುದೇ ಆಗಿರುತ್ತದೆ ಎಂಬುದು ನಮ್ಮ ಆಶೆ. ಅದಿರಲಿ, ನೀವು ಹೇಳಿ, ನಿಮ್ಮ '೨೬ರೂ ಥಿಯರಿ'ಯಲ್ಲಿ ಏನಾದರೂ ಬದಲಾವಣೆ ಉಂಟೆ ?'' ನಿಮ್ಮ ಪ್ರಕಾರ ಬಡತನ ಅಂದರೆ, ೨೬ ರೂ. ಅಲ್ಲವೆ! ಎಷ್ಟೇ ವಿಮರ್ಶೆಗೆ ಒಳಪಡಿಸಿದರೂ ಅಗತ್ಯ ದಿನಬಳಕೆ ವಸ್ತುಗಳ ಖರೀದಿಯನ್ನು ನಿಲ್ಲಿಸಲಾಗದಲ್ಲ! ಪ್ರತಿ ಖರೀದಿಗೆ ಮುನ್ನ ಮತ್ತು ನಂತರವೂ ಕಾಡುವ ಯೋಚನೆ – ಕ್ಲೀಷೆಗಳಿಗೆ ಈ ಬಜೆಟಂತೂ ಪರಿಹಾರ ಒದಗಿಸಿಲ್ಲ. ಬಿಡುಗಡೆಯ ರಾಜಕೀಯ ಹಾದಿಯನ್ನು ನಾವೇ ಹುಡುಕಿಕೊಳ್ಳಬೇಕು.

ತಮ್ಮ ಭಂಡತನದ ಮಾತುಗಾರಿಕೆ, ಕಾರ್ಯಕ್ರಮಗಳ ಅಬ್ಬರದ ಪ್ರಚಾರದ ಮೂಲಕ – ಈ ಪ್ರಚಾರಗಳಿಗೆ ಅಗತ್ಯವಾದ ಹಣದ ವ್ಯವಸ್ಥೆ ಬಜೆಟ್‌ನಲ್ಲಿ ಇದ್ದೇ ಇರುತ್ತದೆ. ಈ ದೇಶದ ಪ್ರಜೆಗಳನ್ನು ಮತದಾರರಂತೆ ಪರಿಗಣಿಸುವ ನಮ್ಮ ರಾಜಕೀಯ ಪಕ್ಷಗಳು ಅವರನ್ನು ಎಂದಿನಂತೆ ಮೋಸಗೊಳಿಸುವ ಪರಿಪಾಠಕ್ಕೆ ೨೦೧೪ಕ್ಕೂ ಮುನ್ನವೇ ನಡೆಯಬಹುದಾದ ಸಾರ್ವತ್ರಿಕ ಚುನಾವಣೆಗಳೇನಾದರೂ ತಕ್ಕ ಪಾಠವನ್ನೊದಗಿಸಿ ಕೊಡುತ್ತದೆಯೇ ಎಂಬುದನ್ನು ಕಾದು ನೋಡಬೇಕು. ಅಂತೆಯೇ ಈ ವ್ಯವಸ್ಥೆಯ ಕುರಿತು ಇನ್ನೂ ಹೆಚ್ಚುವ ಹತಾಶೆ ಜನಪರ ಹೋರಾಟಗಳಲ್ಲಿ ಪ್ರತಿಫಲಿತಗೊಳ್ಳಬಲ್ಲುದೇ, ಎಡಪಕ್ಷಗಳು ತಮ್ಮ ಮೇಲಿನ ಜವಾಬ್ದಾರಿ ಮತ್ತು ನಿರೀಕ್ಷೆಗಳನ್ನು ಪೂರೈಸಿಕೊಳ್ಳಬಲ್ಲವೇ ಎಂಬುದನ್ನೂ ಕಾದು ನೋಡಬೇಕು.

''ವಾಸ್ತವತೆ ಅತಿ ಕ್ರೂರ ಸ್ವರೂಪದ್ದಾಗಿರುತ್ತದೆ. ಒಳಹೊಕ್ಕು ನೋಡಿದಾಗ

ವಾಸ್ತವತೆಯ ವಿಡಂಬನೆ ಸ್ಪಷ್ಟವಾಗಿ ಗೋಚರವಾಗುತ್ತದೆ. ನಾವು ಯಾವ ಮಟ್ಟಕ್ಕೆ ಲಾಯಕ್ಕೋ ಆ ಮಟ್ಟದಲ್ಲಿಯೇ ನಮ್ಮನ್ನು ಆಳ್ವಿಕೆ ನಡೆಸಲು ಅಗತ್ಯವಾದ ಪರಿಕರಗಳನ್ನು ಹೊಂದಿರುವ ವ್ಯವಸ್ಥೆಯೇ ಪ್ರಜಾಪ್ರಭುತ್ವ'' ಎಂಬ ಬರ್ನಾರ್ಡ್ ಷಾ ಅವರ ಅಭಿಪ್ರಾಯಗಳನ್ನು ಪ್ರಾಸಂಗಿಕವಾಗಿ ಇಲ್ಲಿ ನೆನಪಿಸಿಕೊಳ್ಳಬಹುದು. ಏಕೆಂದರೆ ಈ ಅಭಿಪ್ರಾಯಗಳ ಗ್ರಹಿಕೆ ಮತ್ತು ಗ್ರಹಿಕೆಯ ಅನುಷ್ಠಾನ ಭರವಸೆಯ ಮತ್ತು ನೆಮ್ಮದಿಯ ನಾಳೆಗಳನ್ನು ರೂಪಿಸುವಲ್ಲಿ ಪ್ರಮುಖ ಪಾತ್ರ ವಹಿಸಬಲ್ಲದು.

*ಜಿ. ನಾಗಕುಮಾರ್*

## ದುಡಿಯುವ ವರ್ಗದ ರಾಜ್ಯಪ್ರಭುತ್ವ

ಏಪ್ರಿಲ್ ೨೨ ಲೆನಿನ್ ಜನ್ಮದಿನ. ೧೪೨ನೆಯದು. ಅವನು ಹುಟ್ಟಿದ್ದು ೧೮೭೦ರಲ್ಲಿ. ಈ ವರ್ಷದ ಫೆಬ್ರವರಿಯಲ್ಲಿ ಪುತಿನ್ ರಷ್ಯಾದ ಅಧ್ಯಕ್ಷರಾಗಿ ಚುನಾಯಿತರಾಗಿದ್ದಾರೆ. ಅವರ ಕೆಲವು ವಿರೋಧಿಗಳು ಚುನಾವಣೆಯಲ್ಲಿ ಅಕ್ರಮಗಳಿದ್ದುವೆಂದು ಆಪಾದಿಸಿದ್ದಾರೆ. ಉಕ್ರೇನಿನಲ್ಲಿ ಕೆಲ ವರ್ಷಗಳ ಹಿಂದೆ ಚುನಾವಣಾ ಸಂಬಂಧವಾಗಿ 'ಕಿತ್ತಲೆ ಕ್ರಾಂತಿ' ನಡೆದು ಚುನಾಯಿತನಾಗಿದ್ದವನ ಜಾಗದಲ್ಲಿ ಬೇರೊಬ್ಬ ಅಧ್ಯಕ್ಷ ಸ್ಥಾನ ಪಡೆದಿದ್ದ. ಅವನ ಕೀರ್ತಿ ಎಂಥದೆಂದರೆ ಆತ ಮತ್ತೊಮ್ಮೆ ಗೆಲ್ಲಲಿಲ್ಲ! ಕಿತ್ತಲೆ ಕ್ರಾಂತಿಯಂತೆ ಬೇರೆಡೆಗಳಲ್ಲಿ 'ಗುಲಾಬಿ ಕ್ರಾಂತಿ' ಇತ್ಯಾದಿಗಳನ್ನು ಆಯೋಜಿಸಿದ್ದುದುಂಟು. ಉಕ್ರೇನಿನಿಂದ ಪಾಠ ಕಲಿತಿದ್ದ ಜನ ಅಲ್ಲೆಲ್ಲಾ ಮಧ್ಯಪ್ರವೇಶ ಮಾಡಿ 'ಕ್ರಾಂತಿ'ಗಳನ್ನು ವಿಫಲಗೊಳಿಸಿದರು. ಅವಕ್ಕೆ 'ಕ್ರಾಂತಿ' ಎಂಬ ಪದವನ್ನು ಅನ್ವಯಿಸುವುದು ಕ್ರಾಂತಿಗೆ ಅಪಚಾರ. ಆದರೆ ತೆರೆಯ ಹಿಂದೆ ನಿಂತು ತನ್ನ ಸಮರ್ಥಕರನ್ನು ಗದ್ದುಗೆಗೆ ಏರಿಸುವಾಗೆಲ್ಲಾ ಅಮೆರಿಕಾ ಅದನ್ನು ಕ್ರಾಂತಿಯೆಂದು ಕರೆಯುವುದು ರೂಢಿ.

ಕ್ರಾಂತಿಯನ್ನು ಕುರಿತು ಸ್ವಂತ ಅನುಭವದಿಂದ ಆಳವಾದ ಚಿಂತನೆ ನಡೆಸಿದವರಲ್ಲಿ ಲೆನಿನ್ ಪ್ರಮುಖ. ಶತಮಾನಗಳ ಕಾಲ ದಬ್ಬಾಳಿಕೆ ಮತ್ತು ಶೋಷಣೆಗೆ ಗುರಿಯಾದ ದುಡಿಯುವ ವರ್ಗವು ಕ್ರಾಂತಿಯ ಮುಖೇನ ಗುಣಾತ್ಮಕವಾಗಿ ಭಿನ್ನವಾದ ಮತ್ತು ಉತ್ತಮವಾದ ಹೊಸ ವ್ಯವಸ್ಥೆಯೊಂದನ್ನು ನಿರ್ಮಿಸಿಕೊಳ್ಳುತ್ತದೆ. ಹಾಲಿ ಬಂಡವಾಳಶಾಹಿ ವ್ಯವಸ್ಥೆಯಡಿ ಪ್ರಭುತ್ವವೊಂದಿದೆ; ಅದನ್ನು ಕಿತ್ತೊಗೆದು ತನ್ನದೇ ಪ್ರಭುತ್ವವನ್ನು ದುಡಿಯುವ ವರ್ಗವು ಸ್ಥಾಪಿಸಿಕೊಂಡಾಗ ಪ್ರಭುತ್ವದ ಮೂಲ ಲಕ್ಷಣ ಏನಾಗಿರುತ್ತದೆ ಅಥವಾ ಏನಾಗಿರಬೇಕು? ಹತ್ತೊಂಭತ್ತನೆಯ ಶತಮಾನದಲ್ಲಿ ಮಾರ್ಕ್ಸ್‌ವಾದವು ಅದಕ್ಕೆ ಉತ್ತರ ನೀಡುವಾಗ ''ದುಡಿಯುವ ವರ್ಗದ ಸರ್ವಾಧಿಕಾರ'' ಎಂಬ ಪದಗುಚ್ಛವನ್ನು ಬಳಸಿತ್ತು. ಕ್ರಾಂತಿಯ ಪರಿಣಾಮವಾಗಿ ಪ್ರಜಾಪ್ರಭುತ್ವದ ಬದಲು ಸರ್ವಾಧಿಕಾರವು ಬಂದುಬಿಡುವುದಾದರೆ ಅದನ್ನು ಗುಣಾತ್ಮಕವಾಗಿ ಉತ್ತಮವಾದುದೆಂದು ಹೇಗೆ ಬಗೆಯಲು ಸಾಧ್ಯ? ಈ ಪ್ರಶ್ನೆಯು ಆಳವಾದ ಜಿಜ್ಞಾಸೆಗೆ ಮೂಲವಾಯಿತು. ೧೯೦೬ರಲ್ಲಿ ಲೆನಿನ್ ಅದನ್ನು ಕುರಿತು ದೀರ್ಘವಾದ ಲೇಖನಗಳನ್ನು ಬರೆದು ವಿಪುಲವಾದ ಚರ್ಚೆಯನ್ನು ಹುಟ್ಟುಹಾಕಿದ್ದ. ೧೯೧೭ರ ಸಮಾಜವಾದಿ ಕ್ರಾಂತಿಯ ನಂತರ ''ಪ್ರಭುತ್ವ ಮತ್ತು ಕ್ರಾಂತಿ'' ಎಂಬ ಪುಸ್ತಕವನ್ನು ಸಹ ಪ್ರಕಟಿಸಿದ್ದ. ಈ ವಿಷಯವನ್ನು ಕುರಿತ ಅವನ ಚರ್ಚೆ ಸದಾಕಾಲಕ್ಕೂ ಪ್ರಸ್ತುತ.

''ಸರ್ವಾಧಿಕಾರ'' ಎಂಬ ಪದವನ್ನು ಬಳಸಲಾಗಿರುವುದು ''ರಾಜ್ಯದ ಆಧಿಪತ್ಯ'' ಎಂಬರ್ಥದಲ್ಲಿ. ಹತ್ತೊಂಭತ್ತನೆಯ ಶತಮಾನದ ಯೂರೋಪಿನ ದೇಶಗಳಲ್ಲಿ ಮತ್ತು ರಷ್ಯಾದಲ್ಲಿ ಇರುತ್ತಿದ್ದ ಪ್ರಭುತ್ವದ ಸ್ವರೂಪವನ್ನು ಲಕ್ಷ್ಯದಲ್ಲಿಟ್ಟುಕೊಂಡು 'ಸರ್ವಾಧಿಕಾರ' ಎಂಬುದರ ವ್ಯಾಖ್ಯಾನ ಮಾಡಿಕೊಳ್ಳಬೇಕು. ರಾಜನ ನಿರಂಕುಶ ಪ್ರಭುತ್ವ ಅಥವಾ ಬಂಡವಾಳಶಾಹಿಯ ಏಕೈಕ ರಾಜ್ಯಾಧಿಕಾರ ಹೇಗಿರುತ್ತಿತ್ತೆಂದು ನೆನೆದರೆ ಅದಕ್ಕೆ ಪರ್ಯಾಯವಾದ ದುಡಿಯುವ ವರ್ಗದ ಆಧಿಪತ್ಯದ ಕಲ್ಪನೆ ಮೂಡಿದ ಬಗೆಯ ಅರಿವಾಗುತ್ತದೆ. ಲೆನಿನ್ ವಿಶ್ಲೇಷಣೆಯು ೧೯೦೫ರ ರಷ್ಯದ ಕ್ರಾಂತಿಯ ಹಿನ್ನೆಲೆಯಲ್ಲಿ ಬಂದುದು. ಆ ವರ್ಷದ ಜನವರಿ ೯ರಂದು ಒಂದೂವರೆ ಲಕ್ಷ ಕಾರ್ಮಿಕರು ಸೆಂಟ್ ಪೀಟರ್ಸ್‌ಬರ್ಗ್‌ನಲ್ಲಿ ತ್ಸಾರನ ಅರಮನೆಯತ್ತ ಮೆರವಣಿಗೆಯಲ್ಲಿ ಹೊರಟಿದ್ದರು. ಗಾಪೋನ್ ಎಂಬ ಕ್ರೈಸ್ತ ಪಾದ್ರಿಯು ಅದರ ಮುಂದಾಳು. ಜನವರಿ ೩ರಂದು ಪುತಿಲೋವ್ ಕಾರ್ಖಾನೆಯ ಕಾರ್ಮಿಕರು ಮುಷ್ಕರ ಹೂಡಿದ್ದು, ಅದು ವ್ಯಾಪಕವಾಗಿ ದೇಶದಲ್ಲೆಲ್ಲಾ ಹರಡಿತ್ತು. ತ್ಸಾರ್ ಮತ್ತು ಅವನ ಕಾಲದ ಮಾಲೀಕರು ಅದನ್ನು ಸಹಿಸದಾದರು. ಮೆರವಣಿಗೆಯು ಅರಮನೆಯನ್ನು ಮುಟ್ಟುವ ಮೊದಲೇ ಗುಂಡಿನ ಸುರಿಮಳೆ ಸುರಿಸಿ ಸಾವಿರಕ್ಕೂ ಹೆಚ್ಚು ಜನರನ್ನು ಕೊಲ್ಲಿಸಿದರು, ಐದು ಸಾವಿರಕ್ಕೂ ಹೆಚ್ಚು ಮಂದಿಯನ್ನು ಗಾಯಾಳುಗಳನ್ನಾಗಿಸಿದರು. ನಂತರ ಕ್ರಾಂತಿಕಾರಿ ಹೋರಾಟವು ಎರಡು ಅಂಶಗಳ ಸಂಘಾತದ ರೂಪ ತಳೆಯಿತು: (ಅ) ರಾಜಕೀಯ ಮುಷ್ಕರ, ಮತ್ತು (ಆ) ಸಶಸ್ತ್ರ ದಂಗೆ. ಅದು ಕೇವಲ ಕಮ್ಯುನಿಸ್ಟರ ನೇತೃತ್ವದಲ್ಲಿ ನಡೆದ ಚಳುವಳಿಯಲ್ಲ. ತ್ಸಾರ್ ಪರಿವಾರ, ಬಂಡವಾಳಿಗರು, ಭಾರಿ ಭೂಮಾಲೀಕರು ಹಾಗೂ ಅವರೆಲ್ಲರ ರಾಜ್ಯಯಂತ್ರ (ಪೊಲೀಸ್, ಸೈನ್ಯ, ನ್ಯಾಯಾಲಯ, ಆಡಳಿತಗಾರರು, ಇತ್ಯಾದಿ) ಒಂದುಕಡೆ ಮತ್ತು ರೈತರು, ಕಾರ್ಮಿಕರು, ವಿದ್ಯಾರ್ಥಿಗಳು, ಹಾಗೂ ಅವರೆಲ್ಲರ ಸಮರ್ಥಕರು ಇನ್ನೊಂದು ಕಡೆ. ಪ್ರಭುತ್ವದ ಹಸ್ತಾಂತರವೆಂದರೆ ಆಗ್ಗೆ ಭೂಮಿಯ ಹಾಗೂ ಕಾರ್ಖಾನೆಗಳ ಒಡೆತನದ ಹಸ್ತಾಂತರವೂ ಸೇರಿದ್ದಿತು. ಆ ಸನ್ನಿವೇಶಕ್ಕೂ ಇಂದಿನ ನಮ್ಮ ಸನ್ನಿವೇಶಕ್ಕೂ ಬಹಳ ವ್ಯತ್ಯಾಸಗಳಿವೆ. ಸದ್ಯದಲ್ಲಿ ರಾಜ್ಯಪ್ರಭುತ್ವವು ಬಂಡವಾಳಿಗ ವರ್ಗದ ಕೈಯ್ಯಲ್ಲಿದೆ, ನಿಜ; ಆದರೆ ನಿರಂಕುಶ ಪ್ರಭುತ್ವವಿಲ್ಲ. ಕೆಲವು ಸಂದರ್ಭಗಳಲ್ಲಿ ಅದು ನಿರಂಕುಶತೆಯತ್ತ ಕ್ರಮಿಸಬಹುದು, ಫ್ಯಾಸಿಸ್ಟ್ ಸ್ವರೂಪ ತಾಳಬಹುದು; ಇನ್ನು ಕೆಲವು ಸಂದರ್ಭಗಳಲ್ಲಿ ಅದು ಜನಪರವಾಗಿ ಚಲಿಸಬಹುದು, ಹೆಚ್ಚಿನ ಪ್ರಜಾಪ್ರಭುತ್ವದ ರೂಪ ತಾಳಬಹುದು. ೧೯೦೫ರ ರಷ್ಯಾದಲ್ಲಿ ಚಲನೆಯ ಸ್ವರೂಪ ಅಷ್ಟು ನಿರ್ದಿಷ್ಟವಾಗಿರಲಿಲ್ಲ. ಸೈನಿಕರು, ಕಾರ್ಮಿಕರು, ರೈತರು, ಎಲ್ಲಾ ತಮ್ಮದೇ 'ಸೋವಿಯೆತ್'ಗಳನ್ನು ರಚಿಸಿಕೊಂಡಿದ್ದು, ಸ್ವಲ್ಪಮಟ್ಟಿಗೆ ಐಕ್ಯತೆಯಿಂದ ಹೋರಾಟ ನಡೆಸುತ್ತಾ ಪ್ರಭುತ್ವದ ಪಲ್ಲಟದ ಗುರಿಯತ್ತ ಸಾಗುತ್ತಿದ್ದುದು ಅಂದಿನ ಸನ್ನಿವೇಶ. ೧೯೦೫ರ ಕ್ರಾಂತಿಯು ಡಿಸೆಂಬರ್ ವೇಳೆಗೆ ವಿಫಲವಾಗಿ, ವಿವಿಧ ರಾಜಕೀಯ ಬಣಗಳು ಪ್ರಭುತ್ವದ ಬಗ್ಗೆ ವಿಭಿನ್ನ ವ್ಯಾಖ್ಯಾನಗಳನ್ನು ನೀಡಹೊರಟವು. ಎಲ್ಲ ಬಣಗಳೂ ಕ್ರಾಂತಿಯನ್ನು ಗುರುತಿಸಿದವು, ಆದರೆ ರಾಜ್ಯಪ್ರಭುತ್ವದ ಬಗ್ಗೆ ಭಿನ್ನಮತ ಗಳಿದ್ದವು. ಇನ್ನೂ ಸ್ಪಷ್ಟವಾಗಿ ಹೇಳುವುದಾದರೆ, ಪ್ರಭುತ್ವವು ಯಾವ ವರ್ಗದ್ದೆಂಬುದು ಅಭಿಪ್ರಾಯಭೇದಕ್ಕೆ ಎಡೆಮಾಡಿಕೊಟ್ಟಿದ್ದಿತು. ಎಲ್ಲರೂ ''ದುಡಿಯುವ ವರ್ಗದ ಪ್ರಭುತ್ವ'' ಎಂಬುದನ್ನು ಮಾತಿನಲ್ಲಿ ಅಂಗೀಕರಿಸಿದ್ದರು, ಆದರೆ ವ್ಯಾವಹಾರಿಕವಾಗಿ ಅದರ ಹೊಮ್ಮುವಿಕೆ ಮತ್ತು ಅದರ ಲಕ್ಷಣದ ಬಗ್ಗೆ ಅಂಜಿಕೆ ಹೊಂದಿದ್ದರು. ಲೆನಿನ್ ವಿಮರ್ಶಿಸಿದ್ದು ಮತ್ತು ವಿವರಿಸಿದ್ದು ಅದನ್ನೇ. ಮಾರ್ಕ್ಸ್ ಸಹ ೧೮೪೮ರಷ್ಟು ಹಿಂದೆಯೇ ಆ ಬಗ್ಗೆ ಚರ್ಚೆ ನಡೆಸಿದ್ದ ಮತ್ತು ಫ್ರಾನ್ತ್ಸ್ ಮೇರಿಂಗ್ ಅದನ್ನು ವ್ಯಾಖ್ಯಾನಿಸಿದ್ದ.

ಬಂಡವಾಳಶಾಹಿ ಮತ್ತು ಅದರ ನೆರಳಲ್ಲಿ ವಿಕಸಿಸಿದ ಮಧ್ಯಮ ವರ್ಗವು ''ದುಡಿಯುವ ವರ್ಗದ ರಾಜ್ಯಾಧಿಕಾರ'' (ಸರ್ವಾಧಿಕಾರ) ಮತ್ತು ''ಪ್ರಜಾಪ್ರಭುತ್ವ'' ಪರಸ್ಪರ ಅಸಂಗತವೆಂಬ ತಪ್ಪುಕಲ್ಪನೆ ಹೊಂದಿರುತ್ತವೆಂದು ಲೆನಿನ್ ವಿವರಣೆ ನೀಡಿದ. ಸರ್ವಾಧಿಕಾರವನ್ನು ಚಲಾಯಿಸುವ ಬಂಡವಾಳಶಾಹಿಯು ಬೇರೆ ವರ್ಗಕ್ಕೆ ಅದನ್ನು ಅನ್ವಯಿಸುವಾಗ ಅದು ಎಲ್ಲಾ ಸ್ವಾತಂತ್ರ್ಯಗಳ ಹರಣವೆಂದೇ ಪ್ರಚಾರ ಮಾಡುತ್ತದೆ; ಅಲ್ಲಿ ಎಲ್ಲಾ ಅನಿಯಮಿತ ಮತ್ತು ವೈಯಕ್ತಿಕ ಹಿತದಿಂದ ಮಾತ್ರ ಪ್ರೇರಿತ ಎಂದು ಟೀಕಿಸುತ್ತದೆ. ೧೮೪೮ರ ಸೆಪ್ಟೆಂಬರ್ ೧೪ರಂದು 'ನೂತನ ರೈನ್ ಪತ್ರಿಕೆ'ಯಲ್ಲಿ ಬರೆಯುತ್ತಾ ಮಾರ್ಕ್ಸ್ ಹೇಳಿದ್ದ, ''ಕ್ರಾಂತಿಯ ನಂತರ ಪ್ರತಿಯೊಂದು ಹಂಗಾಮಿ ಸಂಘಟನೆಯೂ ಬಲವತ್ತರವಾದ ಅಧಿಕಾರವನ್ನು ಚಲಾಯಿಸಬೇಕಾಗುತ್ತದೆ,'' ಎಂದು. ೧೮೭೦ರ ಪ್ಯಾರಿಸ್ ಕಮ್ಯೂನ್ ನೂರು ದಿನಗಳಲ್ಲೇ ಪತನಗೊಂಡಿದ್ದು ಹಾಗೆ ಚಲಾಯಿಸದಿದ್ದುದರಿಂದ. ಜರ್ಮನಿಯಲ್ಲಿ ೧೮೪೮ರ ಕ್ರಾಂತಿಯ ನಂತರ ಕಾಂಪ್‌ಹೌಸೆನ್ ಇನ್ನೂ ಮೀನ-ಮೇಷ ಎಣಿಸುತ್ತಿದ್ದಾಗ ಅವನ ವಿರೋಧಿ ಬಣವು ಅಧಿಕಾರಶಾಹಿ ಮತ್ತು ಸೈನ್ಯವನ್ನು ಸಂಘಟಿಸಿಕೊಂಡು ಅವನನ್ನು ಹಿಮ್ಮೆಟ್ಟಿಸಿತ್ತು. ಅಂದರೆ, ಕ್ರಾಂತಿಯ ನಂತರದ ಪ್ರಭುತ್ವ ಸಂರಚನೆಯು ಹೊಸ ಆಶಯಗಳಿಗೆ ತಕ್ಕಂತೆ ಪೂರ್ಣಪ್ರಮಾಣದಲ್ಲಿ ಪುನರ್‌ರಚನೆಗೆ ಪಕ್ಕಾಗಬೇಕು. ಇಂದಿನ ಚಿಕ್ಕ ಉದಾಹರಣೆಯೊಂದನ್ನು ನೋಡುವುದಾದರೆ, ಭಾರತೀಯ ಜನತಾ ಪಕ್ಷದ ಕಾರ್ಯವೈಖರಿಯನ್ನು ಗಮನಿಸಬಹುದು. ಅಸ್ತಿತ್ವದಲ್ಲಿರುವ ಪ್ರಜಾಪ್ರಭುತ್ವದಡಿಯಲ್ಲೇ ಅದು ಎಲ್ಲ ವಿಭಾಗಗಳಲ್ಲೂ ತನ್ನವರನ್ನು ತುಂಬುತ್ತದೆ, ತನ್ನ ಕಾರ್ಯಸೂಚಿಯನ್ನು ಮುಂದುಮಾಡುತ್ತದೆ. ಅಂದರೆ, ಪ್ರಭುತ್ವದ ಅಂಗಸಂಸ್ಥೆಗಳನ್ನು ಮಾರ್ಪಡಿಸಿಕೊಳ್ಳುತ್ತದೆ. ಬೇರೆಯವರಿಗೆ ''ಸಂವಿಧಾನಾತ್ಮಕ ವಿಧಾನ''ವನ್ನು ಬೋಧಿಸುತ್ತಲೇ ತಾನು ಅದಕ್ಕೆ ವಿರುದ್ಧವಾಗಿ

ನಡೆದುಕೊಂಡು ಅಧಿಕಾರವನ್ನು ಗಟ್ಟಿಗೊಳಿಸಿಕೊಳ್ಳಲು ಯತ್ನಿಸುತ್ತದೆ. ೨೧ನೆಯ ಶತಮಾನದಲ್ಲಿ ಅದು ಸುಲಭವಾಗಿ ಸಿದ್ಧಿಸದಿರಬಹುದು, ಆದರೆ ೧೯ ಮತ್ತು ೨೦ನೆಯ ಶತಮಾನದಲ್ಲಿ ಅದು ಸಾಧ್ಯವಾಗಿತ್ತು. ೧೯೩೦ರ ದಶಕದಲ್ಲಿ ಸ್ಪೇನಿನಲ್ಲಿ ಕಮ್ಯುನಿಸ್ಟರು ಮುಕ್ತ ಚುನಾವಣೆಯಲ್ಲಿ ಬಹುಮತ ಪಡೆದರು, ಆದರೆ ಅವರನ್ನು ಅಧಿಕಾರಕ್ಕೆ ಬರಲು ಬಂಡವಾಳಶಾಹಿಯು ಬಿಡಲಿಲ್ಲ. ಯೂರೋಪಿನ ಅಂದಿನ ಪ್ರಜಾಪ್ರಭುತ್ವದ ವಕ್ತಾರರು (ಬ್ರಿಟನ್, ಫ್ರಾನ್ಸ್, ಬೆಲ್ಜಿಯಂ, ಸ್ವೀಡನ್, ಇತ್ಯಾದಿ) ಪ್ರಜಾಪ್ರಭುತ್ವ ರೀತ್ಯಾ ಅಧಿಕಾರಕ್ಕೆ ಬರಲು ಕಮ್ಯುನಿಸ್ಟರಿಗೆ ಬೆಂಬಲ ನೀಡಲಿಲ್ಲ. ಬದಲಾಗಿ, ಫ್ಯಾಸಿಸ್ಟನಾದ ಫ್ರಾಂಕೋಗೆ ಅಧಿಕಾರ ದೊರಕಿಸಿಕೊಟ್ಟರು. ನಂತರ ಹಿಟ್ಲರ್ ಮತ್ತು ಮುಸ್ಸೋಲಿನಿ ಅಧಿಕಾರಕ್ಕೆ ಬಂದದ್ದೂ ಹಾಗೆಯೇ. ಸೆಪ್ಟೆಂಬರ್ ೧೧ ಅಮೆರಿಕಾಕ್ಕೆ ದುರಂತದ ದಿನವೆಂದು ಈಗ ಖ್ಯಾತಿ ಹೊಂದಿದೆ. ಆದರೆ ಸ್ವತಃ ಅಮೆರಿಕಾ ೧೯೭೩ರ ಸೆಪ್ಟೆಂಬರ್ ೧೧ರಂದು ಚಿಲಿಯಲ್ಲಿ ಚುನಾಯಿತನಾಗಿದ್ದ ಅಧ್ಯಕ್ಷ ಅಲೆಂಡೆಯನ್ನು ಕೊಂದು ಅಧಿಕಾರಕ್ಕೆ ಬರಲು ಪಿನೋಶೆಗೆ ಸಹಾಯ ಮಾಡಿದ್ದಿತು. ಅಂದರೆ, ಬಂಡವಾಳಶಾಹಿ ಪ್ರಭುತ್ವಕ್ಕೆ ಸಂವಿಧಾನ ನೀತಿಯು ಪ್ರಶಸ್ತವಾದ ಮೌಲ್ಯವೇನಲ್ಲ; ಆದರೆ ದುಡಿಯುವ ವರ್ಗವು ಅಧಿಕಾರಕ್ಕೆ ಬರಲು ಸಂವಿಧಾನ ರೀತಿಯನ್ನು ಅನುಸರಿಸಿ ಯಶಸ್ಸು ಗಳಿಸಿದರೆ ಅಡ್ಡಗಾಲು ಹಾಕಿ ಸಂವಿಧಾನವನ್ನು ತಿಪ್ಪೆಗೆ ಬಿಸುಡುತ್ತದೆ. ಮಾರ್ಕ್ಸ್ ಮತ್ತು ಲೆನಿನ್ ದುಡಿಯುವ ವರ್ಗದ ರಾಜ್ಯಾಧಿಕಾರವನ್ನು ಚರ್ಚಿಸುವುದು ಅಂತಹ ಚಾರಿತ್ರಿಕ ಹಿನ್ನೆಲೆಯಲ್ಲಿ. ಒಮ್ಮೆ ಗಳಿಸಿದ ಅಧಿಕಾರವನ್ನು ಪರಿಣಾಮಕಾರಿಯಾಗಿ ಬಳಸಿ ಕ್ರಾಂತಿಕಾರಕ ಸಾಮಾಜಿಕ-ಆರ್ಥಿಕ ಬದಲಾವಣೆಯತ್ತ ಸಾಗಲು ದುಡಿಯುವ ವರ್ಗವು ಆಡಳಿತ ವ್ಯವಸ್ಥೆಯನ್ನು ಹೇಗೆ ಸಮರ್ಥವಾಗಿ ರೂಪಿಸಿಕೊಳ್ಳಬೇಕು, ಎಂಬುದು ಮೂಲಭೂತ ಪ್ರಶ್ನೆ. ''ದುಡಿಯುವ ವರ್ಗದ ಸರ್ವಾಧಿಕಾರ'' (ಅಥವಾ, ರಾಜ್ಯಾಧಿಕಾರ) ಎಂಬ ಕಲ್ಪನೆಯ ಮೂಲ ಅಲ್ಲಿದೆ. ಪ್ರಜಾಪ್ರಭುತ್ವದ ಮೌಲ್ಯವನ್ನು ಮಾನ್ಯಮಾಡಿ ಅದರಂತೆ ನಡೆಯಲು ಬಂಡವಾಳಶಾಹಿಯು ಸಿದ್ಧವಿದ್ದರೆ ದುಡಿಯುವ ವರ್ಗದ ಸರ್ವಾಧಿಕಾರದ ಪ್ರಮೇಯವೇ ಇಲ್ಲ. ೧೯೧೭ರ ಸಮಾಜವಾದಿ ಕ್ರಾಂತಿಯ ನಂತರ ರಷ್ಯಾದ ನೂತನ ವ್ಯವಸ್ಥೆಯನ್ನು ಬುಡಮೇಲು ಮಾಡಲು ಬಂಡವಾಳಶಾಹಿ ದೇಶಗಳೆಲ್ಲಾ ಒಟ್ಟಾಗಿ ಸೈನ್ಯ ಕಳಿಸಿದ್ದು, ಅದರ ಅನಾಹುತ, ಇತ್ಯಾದಿಗಳೆಲ್ಲಾ ಈಗ ಇತಿಹಾಸ. ಅಥವಾ, ಕ್ಯೂಬಾದ ಕಳೆದ ೫೩ ವರ್ಷಗಳ ಚರಿತ್ರೆಯನ್ನು ನೋಡಬಹುದು. ಕಾಂಗೊ, ನಿಕರಾಗ್ವ, ಅಂಗೋಲ, ಗ್ರೆನಡಾ, ಹೀಗೆ ಅನೇಕ ದೇಶಗಳ ಮೇಲಿನ ಬಂಡವಾಳಶಾಹಿ ಆಕ್ರಮಣವನ್ನು ಸಹ ಗಮನಿಸಬೇಕು. ಅಂತಹ ಆಂತರಿಕ ಮತ್ತು ಬಾಹ್ಯ ಆಕ್ರಮಣಗಳನ್ನು ದುಡಿಯುವ ವರ್ಗದ ಪ್ರಭುತ್ವವು ಹೇಗೆ ಎದುರಿಸಬೇಕು, ಅದಕ್ಕೆ ಹೇಗೆ ಸಜ್ಜಾಗಬೇಕು ? ಈ ಪ್ರಶ್ನೆ ಅಪ್ರಸ್ತುತವೇನಲ್ಲ.

ಈ ಸಂದರ್ಭಗಳಲ್ಲೆಲ್ಲಾ ಹಿಂಸೆಯನ್ನು ಹರಿಯಬಿಡುವವರು ಯಾರು ? ಬಂಡವಳಿಗರೋ ಅಥವಾ ದುಡಿಯುವ ವರ್ಗವೋ ? ೧೯೦೫ರ ರಷ್ಯದ ಸಂದರ್ಭದಲ್ಲಿ ಲೆನಿನ್ ಹೇಳಿದ್ದುದು ಇಂದಿಗೂ ಅನ್ವಯವಾಗುತ್ತದೆ : ಕ್ರಾಂತಿಯ ಸಂದರ್ಭದಲ್ಲಿ ''ಬಂದೂಕವನ್ನು ಕಾರ್ಯಸೂಚಿಗೆ ಸೇರಿಸುವುದು'' ಬಂಡವಾಳಶಾಹಿಯ ವಿಧಾನ. ಕ್ರಾಂತಿ ಜರುಗದಿರುವೆಡೆಗಳಲ್ಲೂ ಬಂಡವಾಳಶಾಹಿ ಅದನ್ನು ಮಾಡುತ್ತಿದೆಯೆಂಬುದಕ್ಕೆ ಇರಾಕ್, ಇರಾನ್, ಆಫ್ಘಾನಿಸ್ತಾನ, ಪನಾಮ, ಅರ್ಜೆಂಟೈನಾ, ಹೀಗೆ ಎಷ್ಟು ಉದಾಹರಣೆಗಳು ಬೇಕು ! ದುಡಿಯುವ ವರ್ಗದ ಕ್ರಾಂತಿಕಾರಿ ಹೋರಾಟಗಳೆಲ್ಲಾ ಅಂತರ್ಯುದ್ಧಗಳಲ್ಲಿ ಪರ್ಯವಸಾನವಾಗುವ ಸನ್ನಿವೇಶವು ೨೧ನೆಯ ಶತಮಾನದಲ್ಲಿ ಇರಬೇಕಾಗಿಲ್ಲ; ಆದ್ದರಿಂದ ೧೯-೨೦ನೇ ಶತಮಾನಗಳಲ್ಲಿ ಉಕ್ತವಾದ ''ದುಡಿಯುವ ವರ್ಗದ ಸರ್ವಾಧಿಕಾರ''ವು ಅದೇ ಸ್ವರೂಪ ಧರಿಸುವುದು ಸಹ ಅನಗತ್ಯ ಹಾಗೂ ಅಸಂಭವ. ಬಂಡವಾಳಶಾಹಿಯ ''ಪ್ರಜಾಪ್ರಭುತ್ವ''ದಲ್ಲಿ ಅಲ್ಪಸಂಖ್ಯಾತ ಬಂಡವಳಿಗರು ಬಹುಸಂಖ್ಯಾತರಾದ ದುಡಿಯುವ ಜನರ ಮೇಲೆ ಅಧಿಕಾರ ಸ್ಥಾಪಿಸಿಕೊಂಡಿರುತ್ತಾರೆ. ಅದಕ್ಕೆ ಅನುವಾಗುವಂತೆ ಪ್ರಭುತ್ವದ ಅಂಗಸಂಸ್ಥೆಗಳನ್ನು ತಮ್ಮ ಹಿಡಿತದಲ್ಲಿರಿಸಿ ಕೊಂಡಿರುತ್ತಾರೆ. ಇದಕ್ಕೆ ಪರ್ಯಾಯವಾಗಿ ದುಡಿಯುವ ಜನರ ''ಪ್ರಜಾಪ್ರಭುತ್ವ''ವು ಬಹುಸಂಖ್ಯಾತರ ಪ್ರಭುತ್ವ. ಅದು ಅಲ್ಪಸಂಖ್ಯಾತ ಬಂಡವಳಿಗರನ್ನು ನಿರ್ನಾಮ ಮಾಡಲೆಳಸುವುದಿಲ್ಲ, ಆದರೆ ಹತೋಟಿಯಲ್ಲಿ ಇಟ್ಟುಕೊಳ್ಳಬಯಸುತ್ತದೆ. ಇದರಲ್ಲಿ ಅಪರಾಧವೇನಿದೆ ? ''ಇದೇ ಮೂಲಭೂತ ವ್ಯತ್ಯಾಸ : ಬಂಡವಾಳಶಾಹಿ ಪ್ರಜಾಪ್ರಭುತ್ವವು ಜನತೆಯ ಮೇಲೆ ಸರ್ವಾಧಿಕಾರ ಸ್ಥಾಪಿಸಿಕೊಳ್ಳುತ್ತದೆ, ಆದರೆ ದುಡಿಯುವ ವರ್ಗದ ಸರ್ವಾಧಿಕಾರವು ಕ್ರಾಂತಿಕಾರಿ ಜನತೆಯ ಪ್ರಭುತ್ವವಾಗಿರುತ್ತದೆ.'' ಇದು ಲೆನಿನ್ ಪ್ರತಿಪಾದನೆ. ಆತನ ವಿಶ್ಲೇಷಣೆಯು ನಮ್ಮ ಮುಂದಿಡುವ ಮೂಲಭೂತ ಪ್ರಶ್ನೆ ಇದು : ಆಳುವ ವರ್ಗದ ಪ್ರಭುತ್ವದ ಅಂಗಸಂಸ್ಥೆಗಳು (ಪಾರ್ಲಿಮೆಂಟ್, ಪೊಲೀಸು, ನ್ಯಾಯಾಂಗ, ಅಧಿಕಾರಶಾಹಿ, ಇತ್ಯಾದಿ) ಖಾಸಗಿ ಸ್ಥಾಪಿತ ಹಿತಾಸಕ್ತಿಗಳ ಪರವಾಗಿ ನಿಂತರೆ, ಅಥವಾ ಇನ್ನೂ ಮುಂದುವರಿದು ಅವುಗಳೊಡನೆ ಶಾಮೀಲಾದರೆ, ಪ್ರಜಾಪ್ರಭುತ್ವ ವ್ಯವಸ್ಥೆಯ ದಿಕ್ಕು ಯಾವುದಾಗುತ್ತದೆ ? ಅಕ್ರಮ ಗಣಿಗಾರಿಕೆ, ಸಾರ್ವಜನಿಕ ಸಂಪತ್ತಿನ ಲೂಟಿ, ಭೂ ಮಾಫಿಯಾ, ತೆರಿಗೆಗಳ್ಳತನಕ್ಕಾಗಿ ಹಣವನ್ನು ವಿದೇಶಿ ಬ್ಯಾಂಕುಗಳಿಗೆ ಸಾಗಿಸುವುದು, ಬಂಡವಾಳದ ಹೂಡಿಕೆಯನ್ನು ಮಾರಿಷಸ್ ನಂತಹ ದೇಶಗಳ ಮೂಲದಿಂದ ಮಾಡಿ ದೇಶಕ್ಕೆ ಅಪಾರ ವಂಚನೆ ಎಸಗುವುದು, ಇವೆಲ್ಲಾ ''ಪ್ರಜಾಪ್ರಭುತ್ವ''ದ ಯಾವ ಭಾಗಗಳು ? ಇವೆಲ್ಲಾ ''ಪ್ರಜಾಪ್ರಭುತ್ವ''ದ ಶ್ರೇಯಸ್ಸಿಗೆ ನಿದರ್ಶನಗಳೆ ? ಇದಕ್ಕೆ ಪರ್ಯಾಯ ಇರುವುದೇ ಒಂದು : ಅದು ದುಡಿಯುವ ಜನತೆಯ ರಾಜ್ಯಾಧಿಕಾರ. ವಂಚಕರನ್ನು ಸದೆ ಬಡಿಯಲು ಅದು ಇಂದಿನ ಬಂಡವಾಳಶಾಹಿ ವ್ಯವಸ್ಥೆಯ ಪರಿಕರಗಳನ್ನು ಯಥಾವತ್ತಾಗಿ ಹಾಗೆಯೇ ಉಳಿಸಿ ಕೊಳ್ಳಬೇಕೆ ಮತ್ತು ಹಾಗೆ ಉಳಿಸಿಕೊಂಡರೆ ತನ್ನ ಮೂಲ ಆಶಯವಾದ ಕ್ರಾಂತಿಕಾರಿ ಸಾಮಾಜಿಕ-ಆರ್ಥಿಕ-ಸಾಂಸ್ಕೃತಿಕ ಬದಲಾವಣೆಯು ಸಿದ್ಧಿಸುತ್ತದೆಯೇ ?

೧೯೦೫ರ ಹಿನ್ನೆಲೆಯಲ್ಲಿ ಭಾವೋದ್ವೇಗದಿಂದ ಲೆನಿನ್ ಒಂದೆಡೆ ಬಿಸುಸುಯ್ಯುವುದು ಹೀಗೆ : ''ಬಂಡವಾಳಶಾಹಿಯಿಂದ ಪೋಷಿತರಾದವರು (ಮಧ್ಯಮ ವರ್ಗ, ಅಧಿಕಾರಿ ವರ್ಗ, ಇತ್ಯಾದಿ) 'ಸರ್ವಾಧಿಕಾರ' ಎಂದೊಡನೆ ಬೆಚ್ಚಿಬೀಳುತ್ತಾರೆ. ಏಕೆಂದರೆ ಅವರಿಗೆ ತಿಳಿದಿರುವ ಒಂದೇ ಸರ್ವಾಧಿಕಾರವು ಪೊಲೀಸರದ್ದು (ಮತ್ತು ಅಂತಹ ಬೇರೆಯವು). ಪೊಲೀಸ್ ಸರ್ವಾಧಿಕಾರವಿಲ್ಲದ ಒಂದು ಸರ್ಕಾರವು ಸಾಧ್ಯವೆಂಬ ಪರಿಕಲ್ಪನೆಯೇ ಅವರಿಗೆ ಸೋಜಿಗ ತರುತ್ತದೆ. ಸಹಸ್ರಾರು ಸಂಖ್ಯೆಯ ದುಡಿಯುವ ಜನ ಕೇವಲ ಕೆಲವು ನೂರು ಮಂದಿಯ ಬಣದ ಮೇಲೆ ಬಲಾತ್ಕಾರವನ್ನೇಕೆ ಹೇರಬೇಕೆಂಬುದು ಅವರ ಪ್ರಶ್ನೆ. ...ಆದರೆ, ಮಾನ್ಯ ಸ್ನೇಹಿತರೆ, ಹೊಸ ರಾಜ್ಯಾಧಿಕಾರವು ಎಲ್ಲೋ ಮೇಲಿಂದ ಉದುರಿ ಬಿದ್ದಿಲ್ಲ. ಹಳೆಯ ಅಧಿಕಾರದ ವಿರುದ್ಧದ ಸೆಣಸಾಟದಲ್ಲಿ, ಅದಕ್ಕೆ ಸಮಾನಾಂತರವಾಗಿ, ವಿಕಾಸವಾಗಿರುವುದು ದುಡಿಯುವ ವರ್ಗದ ನೂತನ ಅಧಿಕಾರ. ಆ ಹಳೆಯ ದುರುಳರನ್ನು ನಮ್ಮ ಅಧಿಕಾರ ಸಾಧನದಿಂದ ಹಿಮ್ಮೆಟ್ಟಿಸಬೇಕು. ಇಲ್ಲವಾದರೆ ಅವರಿಂದ ವಿಮುಕ್ತಿ ದೊರೆಯದು.'' ಇದಕ್ಕೆ ಲೆನಿನ್ ನೀಡಿದ ರೂಪಕ ಇದು : ''ಸ್ಪಿರಿದಿನೋವ ಇದ್ದಾಳೆ, ಆಕೆ ರೈತರ ಜೀವ. ಅವಳನ್ನು ಅವ್ರಮೋವ್ ಹಿಂಸಿಸುತ್ತಿದ್ದಾನೆ. ಅವನು ಪೊಲೀಸ್ ಅಧಿಕಾರಿ. ಅವಳನ್ನು ಎಲ್ಲೋ ಗುಹೆಯಲ್ಲಿ ಅಲ್ಲ ಹಿಂಸಿಸುತ್ತಿರುವುದು; ನೇರವಾಗಿ ಜನರೆದುರಿನಲ್ಲೇ ಅವಳ ಮೇಲೆ ದೈತ್ಯ ಹಿಂಸೆ. ಹೀಗಿದ್ದಾಗ ಜನ ಏನು ಮಾಡಬೇಕೆನ್ನುತ್ತೀರಿ ? ...ಅವ್ರಮೋವನ ಸರ್ವಾಧಿಕಾರವನ್ನು ಜನರ ಸರ್ವಾಧಿಕಾರವು ಎದುರಿಸಬೇಕು. ಅವನ ನಡತೆಯು ಯಾವ ಕಾನೂನಿಗೆ ಬದ್ಧವಾಗಿದೆ ? ಅವ್ರಮೋವನನ್ನು ಕೊಲ್ಲಬೇಕೆಂಬುದು ಸಹ ಕಾನೂನಿನ ವ್ಯಾಪ್ತಿಗೆ ಹೊರತಾದುದಲ್ಲವೆ ಎನ್ನುತ್ತೀರೇನೊ, ಅಲ್ಲವೆ ? ...ಆದ್ದರಿಂದ ಬಂಧುಗಳೆ, ದುಡಿಯುವ ವರ್ಗದ 'ಸರ್ವಾಧಿಕಾರ' ಎಂದರೆ ಯಾವ ಕಾನೂನಿಗೂ ಬದ್ಧವಲ್ಲದ ಅಧಿಕಾರವೆಂದಲ್ಲ, ಅದು ಬಲಾತ್ಕಾರವೆಂಬ ಊಹನೆ ಬೇಡ... ದುಡಿಯುವ ವರ್ಗದ ರಾಜ್ಯಾಧಿಕಾರವೆಂದರೆ, ಜನತೆಯ ಅಧಿಕಾರ ಎಂದಷ್ಟೇ ಅರ್ಥ. ಅದು ಕ್ರಾಂತಿಕಾರಿ ಜನತೆಯ ಅಧಿಕಾರ.''

ನಮ್ಮ ಇಂದಿನ ಸಂದರ್ಭದಲ್ಲಿ ಇದನ್ನು ಪದಶಃ ಅನ್ವಯ ಮಾಡಹೋಗ ಬಾರದು. ಮುಖ್ಯವಾದ ಪ್ರಶ್ನೆ, ಶೋಷಣೆಯ ಅಸ್ತಿತ್ವ – ಸಾರ್ವಜನಿಕ ಸಂಪತ್ತಿನ ಲೂಟಿ – ದುಡಿಯುವ ಜನರ ಮೇಲಿನ ದೌರ್ಜನ್ಯ – ಸಂವಿಧಾನದ ಚೌಕಟ್ಟನ್ನು ಮೀರಿ ದರ್ಪದಿಂದ ಆಡಳಿತ ನಡೆಸುವುದು, ಇತ್ಯಾದಿ. ಇದಕ್ಕೆ ಪರ್ಯಾಯವಾದ ಆವಿಷ್ಕಾರವು ದುಡಿಯುವ ಜನತೆಯು ರಾಜ್ಯಾಧಿಕಾರವನ್ನು ಸ್ಥಾಪಿಸಿಕೊಳ್ಳುವುದರಲ್ಲಿದೆ.

ಆದರೆ ಹೇಗೆ ಮತ್ತು ಎಂದು ? ಅದು ಇಂದು ದುಡಿಯುವ ಜನತೆ ವಿವೇಚಿಸುತ್ತಿರುವ ವಿಚಾರ.

ಈ ತಿಂಗಳು (೩ನೇ ಪುಟದಿಂದ)

ಹಾಳಾಗಲಿ, ಇವರಂಥ ಅಧಿಕಾರಿಗಳು ಹಾಲುಣ್ಣುತ್ತಿದ್ದರೆ ಸಾಕು, ಎನ್ನುವುದು ಜನತೆಯ ಹೀನ ಧೋರಣೆಯಾಗಿ ಬಿಟ್ಟಿದೆ. ಹೀಗೆ ವಂಚಿಸಲ್ಪಟ್ಟ ಮಕ್ಕಳಾದರೂ ಯಾರು ? ಹಿಂದುಳಿದ ಬಡ ಕುಟುಂಬಗಳ ಮಕ್ಕಳು. ಅವರೇ ತಾನೆ, ನಮ್ಮ ''ಬುದ್ಧಿವಂತ'' ಮಕ್ಕಳಲ್ಲವಲ್ಲ, ಎಂದು ತಣ್ಣಗೆ ಸಮಾಧಾನ ತಾಳುವ ಅಸಹ್ಯ ಸನ್ನಿವೇಶ ನಮ್ಮದು. ಈ ಮುನಿರಾಜು ಎಂಬುವರ ತಪಾಸಣೆ ನಡೆಯುತ್ತಿದ್ದಾಗ ಆತನ ಸಾಹಸಗಳ ಒಂದು ದಾಖಲೆಯನ್ನು ಲೋಕಾಯುಕ್ತದ ಅಧಿಕಾರಿಗಳು ವೀಕ್ಷಿಸುತ್ತಿದ್ದರಂತೆ. ಅವರೊಡನೆ ಪೊಲೀಸರೂ ಇರುತ್ತಾರೆ. ಆದರೂ ವೀರ ಮುನಿರಾಜು ಆ ಸಿ.ಡಿ. ಕಿತ್ತುಕೊಂಡು ಚೂರು ಚೂರು ಮಾಡಿದನಂತೆ. ಲೋಕಾಯುಕ್ತ ಅಧಿಕಾರಿಗಳು ಮತ್ತು ಪೊಲೀಸರು ಬೆಣ್ಣೆ ಮೆಲ್ಲುತ್ತಿದ್ದರೇನೊ ! ಅಥವಾ, ಸಿ.ಡಿ. ಮುರಿದುಹಾಕುವುದು ಒಂದು ಪೂರ್ವ ನಿಯೋಜಿತ ಕೃತ್ಯವೋ ? ೨೦ ಕೋಟಿಯ ಸರದಾರ ಸಿ.ಡಿ. ಮುರಿಯಲು ಕೆಲವು ಲಕ್ಷಗಳನ್ನು ಖರ್ಚು ಮಾಡಿರಬಹುದೆ ? ಮೌಲ್ಯಗಳ ಉಪದೇಶ ನೀಡುವ ವಿದ್ವಾಂಸರು ಮುನಿರಾಜು ಎದುರು ಕಿನ್ನರಿ ನುಡಿಸಲಿ, ನಮ್ಮ ಸಂಸ್ಕೃತಿ ಇನ್ನೂ ಅತಿಶಯವಾಗಿ ಕಂಗೊಳಿಸುತ್ತದೆ ! ನಾಚಿಕೆಗೇಡು, ಅಷ್ಟೆ.

* * *

ಬೆಂಗಳೂರಿನಲ್ಲಿ ಮರಗೆಲಸ ಮಾಡುವವರ ಪೈಕಿ ಅಧಿಕ ಸಂಖ್ಯೆಯವರು ಉತ್ತರ ಪ್ರದೇಶ, ಬಿಹಾರ ಮತ್ತು ಪಶ್ಚಿಮ ಬಂಗಾಳದವರು ಎನ್ನಲಾಗಿದೆ. ಅವರಿರುವಾಗ ಕರ್ನಾಟಕದ ಜನ ಏಕೆ ಕಷ್ಟಕ್ಕೆ ಕೈ ಹಾಕಬೇಕು ! ಅಷ್ಟಕ್ಕೂ ಮನೆಗಳನ್ನು ಕಟ್ಟಿಸಿಕೊಳ್ಳುವವರಲ್ಲಿ ಹೆಚ್ಚಿನವರು ಕನ್ನಡೇತರರೇ ಅಲ್ಲವೆ ? ನಾವೇಕೆ ಅವರಿಗಾಗಿ ಬೆವರು ಸುರಿಸಬೇಕೆಂಬ ತತ್ವ ಸ್ವಾರಸ್ಯವಾಗಿದೆ. ನಮ್ಮ ರಾಜ್ಯಕ್ಕೆ ಇದರಲ್ಲಿ ಕೇಂದ್ರ ಸರ್ಕಾರ ಹಾಗೂ ಹಲವು ರಾಜ್ಯ ಸರ್ಕಾರಗಳ ಮಾದರಿ ಇದೆ. ಎರಡು ಉದಾಹರಣೆಗಳು ನಮ್ಮ ಮುಂದಿವೆ : (ಅ) ಬಿಹಾರ ಸರ್ಕಾರವು ರಾಜಧಾನಿ ಪಾಟ್ನಾದಲ್ಲಿರುವ ಬೃಹತ್ ವಸ್ತುಸಂಗ್ರಹಾಲಯವನ್ನು ದುರಸ್ತಿ ಮಾಡಿ ಆಕರ್ಷಕವಾಗಿರುವಂತೆ ಮಾಡಲಿಚ್ಛಿಸುತ್ತದಂತೆ. ಅದೂ ನಮಗಾಗಿ ಏನಲ್ಲ, ಈ ದೇಶದಲ್ಲಿ ಎಲ್ಲಾ ವಿದೇಶಿ ಪ್ರವಾಸಿಗಳಿಗಾಗಿ ಮಾಡುವುದು ರೂಢಿ. ಒಂದು ವಸ್ತು ಸಂಗ್ರಹಾಲಯವನ್ನು ಲಕ್ಷಣವಾಗಿ ಸಿದ್ಧಗೊಳಿಸಲು ನಮ್ಮಲ್ಲಿ ನುರಿತ ಜನ ಇಲ್ಲವೆ ? ಅದಕ್ಕೆಂದೇ ತರಬೇತಿ ಪಡೆದ ಪ್ರಾಚ್ಯಶಾಸ್ತ್ರ ತಜ್ಞರಿದ್ದಾರೆ, ಆಡಂಬರದಿಂದ ಆಕರ್ಷಣೆಗೆ ಅಗತ್ಯವಾದ ಸಜ್ಜುಗೊಳಿಸುವ ತಂತ್ರ ತಿಳಿದವರಿದ್ದಾರೆ. ಆದರೆ ಬಿಹಾರ ಸರ್ಕಾರವು ಈ ಕೆಲಸಕ್ಕೆ ಫ್ರಾನ್ಸಿನ ಒಂದು ಸಂಸ್ಥೆಗೆ ಕಂಟ್ರಾಕ್ಟ್ ನೀಡಿದೆ ! ವಿದೇಶಿ ಕಂಪನಿಯ ಮುಂದೆ ನಮ್ಮ ತಜ್ಞರು ಕುಬ್ಜರಿರಬೇಕು, ಅದಕ್ಕೇ ಅವರಿಗೆ ಆಹ್ವಾನ. ವಸಾಹತು ಮನಸ್ಸು ಎಷ್ಟು ಗಾಢವಾಗಿ ಬೆಳೆದಿದೆಯೆಂಬುದಕ್ಕೆ ಇದೊಂದು ಸೂಚನೆ. ಇದನ್ನು ಮೀರಿಸುವ ದಾಸ್ಯ ಮನಸ್ಸು ಕೇಂದ್ರ ಸರ್ಕಾರದ್ದು. ವಿಶ್ವ ಬ್ಯಾಂಕಿನ ಅರ್ಥಶಾಸ್ತ್ರಜ್ಞ ಮನಮೋಹನ ಸಿಂಗರಿಗೆ ಇದು ತಕ್ಕುದಾಗಿದೆ. ಕೇಂದ್ರ ಸರ್ಕಾರವು ಅರ್ನ್‌ಸ್ಟ್ ಅಂಡ್ ಯಂಗ್ ಎಂಬ ಅಮೆರಿಕಾದ ಪರಿಣತ ಕಂಪನಿಗೆ ಒಂದು ಕಂಟ್ರಾಕ್ಟ್ ನೀಡಿದೆ. ಏತಕ್ಕೆ ಗೊತ್ತೆ? ನಮ್ಮ ದೇಶದ ಕಾರಾಗೃಹಗಳ ವ್ಯವಸ್ಥೆಯ ಅಧ್ಯಯನ ಮಾಡಿ ಅದನ್ನು ಉತ್ತಮಗೊಳಿಸಲು ಸಲಹೆ ನೀಡುವ ಸಲುವಾಗಿ ! ಎಂತಹ ಸುಧಾರಣೆಯ ಅಗತ್ಯವಿದೆ ಎಂದು ತಿಳಿಯಹೇಳಬಹುದಾದ ಪರಿಣತರು ನಮ್ಮಲ್ಲಿಲ್ಲ, ಅದಕ್ಕೆ ಈ ತೋಲಾಂಡಿ ಯಂಗ್ ಕಂಪನಿ ಬೇಕು, ಅಲ್ಲವೆ ? ಗೃಹಸಚಿವರ ಕಚೇರಿಯಲ್ಲಿ ಇದೇ ವಿಷಯಕ್ಕೆ ಸಂಬಂಧಿಸಿದ ಎರಡು ಡಜನ್ ವರದಿಗಳು ಬಿದ್ದಿವೆ, ಅದನ್ನು ನೋಡಲು ಚಿದಂಬರಂಗೆ ಸಮಯವಿಲ್ಲ, ಸಹನೆಯೂ ಇಲ್ಲ. ಒಂದಷ್ಟು ಕೋಟಿ ವಿದೇಶಿ ವಿನಿಮಯ ಸುರಿದು ಅರ್ನ್‌ಸ್ಟ್ ಮತ್ತು ಯಂಗ್ ಕಂಪನಿಯ ''ಪರಿಣತಿ''ಯನ್ನು ವಿಜೃಂಭಿಸಬೇಕು. ಅದೂ ಸರಿಯೆ, ಏಕೆಂದರೆ ಅಮೆರಿಕಾದಲ್ಲಿ ಪ್ರಪಂಚದಲ್ಲೇ ಶೇಕಡಾವಾರು ಅತಿಹೆಚ್ಚಿನ ಸಂಖ್ಯೆಯ ಜನರನ್ನು ಕಾರಾಗೃಹದಲ್ಲಿರಿಸಿ, ಅವನ್ನು ಖಾಸಗೀಕರಿಸಿ, ಖಾಸಗಿ ಕಂಪನಿಗಳಿಗೆ ಕಡಿಮೆ ಕೂಲಿಯ ಆಳುಗಳನ್ನು ದೊರಕಿಸಿಕೊಟ್ಟಿರುವ ಖ್ಯಾತ ವ್ಯವಸ್ಥೆ ಇದೆ. ಅದರ ಪಡಿಯಚ್ಚನ್ನು ನಾಳೆ ನಮ್ಮ ದೇಶದಲ್ಲೂ ಕಾಣಬಹುದೇನೊ ! ಜೈ ಭಾರತ ಎನ್ನಲಡ್ಡಿಯಿಲ್ಲ.

* * *

ಸರ್ವೋಚ್ಚ ನ್ಯಾಯಾಲಯವು ಕೇವಲ ತೀರ್ಪುಗಳನ್ನು ನೀಡುತ್ತದೆಯೆಂದು ತಿಳಿದಿದ್ದವರಿಗೆ ಈಚೆಗೆ ಒಂದು ಹೊಸ ತಿಳುವಳಿಕೆ ಮೂಡಿತು : ಅದು ಕಟ್ಟಾಜ್ಞೆಗಳನ್ನೂ ಹೊರಡಿಸುತ್ತದೆ, ಎಂದು. ಪಾರ್ಲಿಮೆಂಟಿನ ಕೆಲಸವನ್ನು ನ್ಯಾಯಾಲಯವೇ ಮಾಡುವುದಾದರೆ ನಾವೇಕೆ ಈ ಪಾರ್ಲಿಮೆಂಟಿನಲ್ಲಿ ಕುಳಿತಿದ್ದೇವೆಂದು ಪಾರ್ಲಿಮೆಂಟ್ ಸದಸ್ಯರು ಈಗಲಾದರೂ ತೂಕಡಿಕೆಯಿಂದ ಹೊರ ಬರುತ್ತಾರೇನೋ ಕಾದುನೋಡೋಣ. ನ್ಯಾಯಾಲಯದ ಆಜ್ಞೆ ದೇಶದ ನದಿಗಳನ್ನು ಜೋಡಿಸಲು ಕೂಡಲೆ ಕೇಂದ್ರ ಸರ್ಕಾರವು ಕ್ರಮ ಕೈಗೊಳ್ಳಬೇಕು, ಎಂದು. ಆಜ್ಞೆಯನ್ನು ಪಾಲಿಸದಿದ್ದರೆ ಕೇಂದ್ರದ ಮೇಲೆ ನ್ಯಾಯಾಂಗ ನಿಂದನೆಯ ಆರೋಪ ಹೊರಿಸಲು ನ್ಯಾಯಾಲಯಕ್ಕೆ ಅಧಿಕಾರವಿದೆ, ಏಕೆಂದರೆ ಇದು ಆಜ್ಞೆಯೇ ವಿನಾ ಕೇವಲ ತೀರ್ಪಲ್ಲ. ಹಾಗೆ ಆಜ್ಞೆ ನೀಡುವ ಹಕ್ಕು ನ್ಯಾಯಾಲಯಕ್ಕುಂಟೆ ? ಇದೆಯೆಂದೇ ಭಾವಿಸಿದರೂ, ನದಿಜೋಡಣೆಯ ತಾಂತ್ರಿಕ ಅಂಶಗಳ ಅಧ್ಯಯನ ನಡೆಸಲು ನ್ಯಾಯಾಲಯಕ್ಕೆ ಪರಿಣತಿ ಉಂಟೆ ? ಇಲ್ಲದಿದ್ದರೆ, ಪರಿಣತರ ಸೂಕ್ತ ಸಲಹೆ ಪಡೆಯಲಾಗಿದೆಯೆ ? ಹೀಗೆಲ್ಲಾ ಪ್ರಶ್ನಿಸಬೇಕಾದ್ದು ಪಾರ್ಲಿಮೆಂಟಿನ ಕರ್ತವ್ಯ. ಆದರೆ ಅಲ್ಲಿಯ ಮಹಾನ್ ನಾಯಕರಿಗೆ ಇದನ್ನು ತಿಳಿಸುವುದು ಹೇಗೆ ? ಯೋಜನೆಗೆ ಕನಿಷ್ಠ ಒಂದು ಲಕ್ಷ ಕೋಟಿ ರೂಪಾಯಿಗಳ ಖರ್ಚು ಖಂಡಿತ. ಅಷ್ಟು ಹಣ ಎಲ್ಲಿಂದ ತರಬೇಕೆಂದು ನ್ಯಾಯಾಲಯ ಹೇಳಿಲ್ಲ, ಹೇಳಲಾರದು. ಜೋಡಣೆಯು ನಿರರ್ಥಕವಾದರೆ ಅಷ್ಟು ಹಣ ವ್ಯರ್ಥವಾಗುತ್ತದಲ್ಲ ಎಂಬ ಯೋಚನೆ ಜನರದ್ದು. ಯಮುನಾ ನದಿಯೊಂದನ್ನು ನೋಡಿದರೆ ಜೋಡಣೆಯು ಅಪಾಯಕರವೆಂಬುದು ತಿಳಿಯುತ್ತದೆ. ಅಲ್ಲಿ ನೀರೇ ಇಲ್ಲ, ಏನನ್ನು ಹರಿಸುವುದು ? ಅಲ್ಲದೆ, ಹೇಗೆ ಹರಿಸುವುದು ? ಜೋಡಣೆಯು ಸರ್ವಕ್ಕೂ ಪರಿಹಾರವೆನ್ನುವವರು ಒಮ್ಮೆ ಗೋಮುಖದಿಂದ ತಂಜಾವೂರಿನವರೆಗೆ ಕಾಲ್ನಡಿಗೆಯಲ್ಲಿ ಬಂದು ನಮ್ಮ ದೇಶದ ಮೇಲ್ಮೈ ಲಕ್ಷಣಗಳನ್ನು ಅರಿಯುವುದು ಉಚಿತ. ನಿವೃತ್ತ ನ್ಯಾಯಮೂರ್ತಿ ಶ್ರೀ ವಿ. ಆರ್. ಕೃಷ್ಣ ಅಯ್ಯರ್ ಹೇಳಿರುವಂತೆ ಸರ್ವೋಚ್ಚ ನ್ಯಾಯಾಲಯದ ಮಾತು ಅಂತಿಮ, ಆದರೆ ಅದು ತರ್ಕಶುದ್ಧವಾಗಿಯೇ ಇರುತ್ತದೆಂದು ಭಾವಿಸಲಾಗದು. ಸರ್ವೋಚ್ಚ ನ್ಯಾಯಾಲಯವು ತನ್ನ ಆಜ್ಞೆಯನ್ನು ಪುನಃ ಪರಿಶೀಲಿಸಲು ನ್ಯಾಯಮೂರ್ತಿಗಳ ಒಂದು ವಿಸ್ತೃತ ಪೀಠದ ಮುಂದೆ ತಾನೇ ಸ್ವತಃ ಇರಿಸುವುದು ಸೂಕ್ತ. ಇಲ್ಲದಿದ್ದರೆ, ಅದನ್ನು ಪ್ರಶ್ನಿಸಿ ತಳ್ಳಿಹಾಕುವುದು ಪಾರ್ಲಿಮೆಂಟಿನ ಕೆಲಸವಾಗಬೇಕು. ಒಂದು ಲಕ್ಷ ಕೋಟಿ ರೂಪಾಯಿಗಳನ್ನು ಸಮುದ್ರಕ್ಕೆ ಚೆಲ್ಲಲು ನಮ್ಮ ದೇಶ ಅಷ್ಟು ಶ್ರೀಮಂತವಲ್ಲ. ಜೋಡಣೆಯ ತೀರ್ಮಾನವು ಸರಿಯೇ ಎನ್ನುವುದನ್ನು ಸಾವಧಾನದಿಂದ ಅಧ್ಯಯನ ಮಾಡುವುದು ಅನಿವಾರ್ಯ.

* * *

ಅಡ್ಮಿರಲ್ ರಾಬರ್ಟ್ ವಿಲಾರ್ಡ್ ಅಮೆರಿಕಾದಲ್ಲಿ ಉಚ್ಚಮಟ್ಟದ ಅಧಿಕಾರಿ. ಆತ ಆ ದೇಶದ ಜನಪ್ರತಿನಿಧಿ ಸಭೆಯ ಮುಂದೆ ಫೆಬ್ರವರಿ ೨೯ರಂದು ಸಾಕ್ಷ್ಯ ನೀಡಿರುವುದು ವರದಿಯಾಗಿದೆ. ಆತನ ಪ್ರಕಾರ ಅಮೆರಿಕಾದ ಸೈನ್ಯದ ತುಕಡಿಗಳ ನೆಲೆಯೊಂದು ಭಾರತದಲ್ಲಿದೆ, ಅದು ಭಯೋತ್ಪಾದಕರ ನಿಗ್ರಹಕ್ಕಾಗಿ ಇರಿಸಲ್ಪಟ್ಟಿದೆ. ಜೊತೆಗೆ, ಕಚ್ ಪ್ರದೇಶದಲ್ಲಿ ಸಾಗರದಲ್ಲಿ ಒಂದು ಬೃಹತ್ ಯುದ್ಧ ನೌಕೆಯೂ ಇದೆ. ಅದನ್ನು ಮನಮೋಹನ ಸಿಂಗ್ ಸರ್ಕಾರ ದೇಶಕ್ಕೇಕೆ ತಿಳಿಸಲಿಲ್ಲ ? 'ಹೊಸತು' ಕೇಂದ್ರದ ರಕ್ಷಣಾ ಸಚಿವರಿಗೆ ಈ ಬಗ್ಗೆ ಪತ್ರವೊಂದನ್ನು ಬರೆದಿದೆ. ಅದರ ಪೂರ್ಣಪಾಠ ಹೀಗಿದೆ :

187 : 2011-12

*ಮಾರ್ಚ್ 6, 2012*

ಸನ್ಮಾನ್ಯ ಶ್ರೀ ಎ. ಕೆ. ಆಂಟೊನಿ
ರಕ್ಷಣಾ ಸಚಿವರು
ಭಾರತ ಸರ್ಕಾರ
ನವದೆಹಲಿ - 110 001

ಸನ್ಮಾನ್ಯ ರಕ್ಷಣಾ ಸಚಿವ ಶ್ರೀ ಆಂಟೊನಿ ಅವರಿಗೆ ನಮಸ್ಕಾರ.

ಕಳೆದ ಹದಿಮೂರು ವರ್ಷಗಳಿಂದ ಒಂದು ಕನ್ನಡ ಮಾಸಿಕ ಪತ್ರಿಕೆಯಾಗಿ ಹೊರಬರುತ್ತಿರುವ 'ಹೊಸತು' ಪತ್ರಿಕೆಯು ಮಹತ್ತರವಾದ ಒಂದು ವಿಷಯವನ್ನು ಕುರಿತಂತೆ ತಮ್ಮ ವಿವರಣೆ ಪಡೆಯುವ ಉದ್ದೇಶದಿಂದ ಈ ಪತ್ರವನ್ನು ಬರೆಯುತ್ತಿದೆ. ತಾವು ದಯೆಯಿಟ್ಟು ಪ್ರತಿಕ್ರಿಯಿಸುತ್ತೀರೆಂದು ನಿರೀಕ್ಷಿಸುತ್ತೇವೆ.

ಅಮೆರಿಕಾದ ವಿದೇಶಾಂಗ ಸಚಿವಾಲಯದ ಹಿರಿಯ ಸಚಿವರೊಬ್ಬರು ತಮ್ಮ ದೇಶದ ಪ್ರಜಾಪ್ರತಿನಿಧಿ ಸಭೆಯ ಮುಂದೆ ಒಂದು ಹೇಳಿಕೆ ನೀಡಿದ್ದಾರೆ. ಅದು ನಿಮ್ಮ ಗಮನಕ್ಕೆ ಬಂದಿದೆಯೆಂದು ಭಾವಿಸುತ್ತೇವೆ. ಆ ಸಚಿವರ ಹೇಳಿಕೆಯಂತೆ ಅಮೆರಿಕಾದ ಸೈನ್ಯದ ತುಕಡಿಗಳು ನಮ್ಮ ದೇಶದ ಗಡಿಭಾಗದಲ್ಲಿ ನೆಲೆಯನ್ನು ಹೊಂದಿವೆ, ಅಲ್ಲಿ ಕವಾಯತು ನಡೆಸುತ್ತವೆ, ಮತ್ತು ಭಯೋತ್ಪಾದಕರನ್ನು ನಿಗ್ರಹಿಸಲು ಸಜ್ಜಾಗಿವೆ. ಅಮೆರಿಕಾದ ಪ್ರಜಾಪ್ರತಿನಿಧಿ ಸಭೆಯಲ್ಲಿ ಈ ಹೇಳಿಕೆಯನ್ನು ಯಾರೂ ಪ್ರಶ್ನಿಸಿದಂತೆ ತೋರುತ್ತಿಲ್ಲ.

ನಮ್ಮ ದೇಶದ ಭೂಭಾಗದಲ್ಲೆಲ್ಲೂ ಅಮೆರಿಕಾ ತುಕಡಿಗಳ ನೆಲೆಗಳು ಇಲ್ಲವೆಂದು ಭಾರತ ಸರ್ಕಾರದ ವಕ್ತಾರರು ಹೇಳಿದ್ದಾರೆಂದು ವರದಿಯಾಗಿದೆ.

ಅಮೆರಿಕಾ ಮತ್ತು ಭಾರತದ ಹೇಳಿಕೆಗಳಲ್ಲಿ ಅಪಾರ ವೈರುಧ್ಯವಿದೆ. ಅಮೆರಿಕಾ ಮತ್ತು ಭಾರತ ನೀಡಿರುವ ಹೇಳಿಕೆಗಳಲ್ಲಿ ಯಾವುದಾದರೂ ಒಂದು ಮಾತ್ರ ನಿಜವಾಗಿರಲು ಸಾಧ್ಯ. ಆದ್ದರಿಂದ ಅಮೆರಿಕಾದ ವಿದೇಶಾಂಗ ಸಚಿವ ಸುಳ್ಳು ಹೇಳಿಕೆ ನೀಡಿರಬೇಕು, ಇಲ್ಲವೆ ಭಾರತ

ಸರ್ಕಾರದ ವಕ್ತಾರ ತಪ್ಪು ಹೇಳಿಕೆ ನೀಡಿರಬೇಕು.

ಅಮೇರಿಕಾ ಸೈನ್ಯದ ತುಕಡಿಗಳಿಗೆ ಭಾರತವು ನೆಲೆ ಕಲ್ಪಿಸಿ ಕೊಡುವುದು ದೇಶದ ಜನರಿಗೆ ವಂಚನೆ ಮಾಡಿದಂತೆ. ಬಹಿರಂಗವಾಗಿ ಏನೂ ಹೇಳದೆ ಗುಟ್ಟಾಗಿ ಅದು ನಡೆದಿದ್ದರೆ ಖಂಡಿತವಾಗಿಯೂ ಆ ಕುಕೃತ್ಯವು ಖಂಡನೀಯ. ನಮ್ಮ ದೇಶದ ಸಾರ್ವಭೌಮತ್ವಕ್ಕೆ ಧಕ್ಕೆಯುಂಟುಮಾಡುವ ಸಂಗತಿ ಇದು.

ದೇಶದ ರಕ್ಷಣಾ ಸಚಿವರಾದ ತಾವು ವಿಶ್ವ ಬ್ಯಾಂಕು ಮತ್ತು ಅಂತರರಾಷ್ಟ್ರೀಯ ಹಣಕಾಸು ಸಂಸ್ಥೆಗಳಂತಹ ಕಡೆ ಗಳಲ್ಲಿದ್ದವರಲ್ಲ, ಇನ್ನೂ ಸ್ವಲ್ಪ ವರ್ಚಸ್ಸನ್ನು ಉಳಿಸಿ ಕೊಂಡಿರುವ ಸಚಿವರು ತಾವು. ತಮ್ಮ ನೇತೃತ್ವದಲ್ಲಿ ಭಾರತವು ಅಮೇರಿಕಾ ಸೈನ್ಯ ತುಕಡಿಗಳಿಗೆ ತಾಣ ಒದಗಿಸಿಕೊಟ್ಟಿರುವುದು ನಿಜವಾದರೆ ಅದು ದ್ರೋಹವೆನಿಸಿಕೊಳ್ಳುತ್ತದೆ.

ಈ ವಿಷಯವನ್ನು ಕುರಿತಂತೆ ಸತ್ಯಾಂಶವೇನೆಂದು ತಾವು ಬಹಿರಂಗವಾಗಿ ಹೇಳಿಕೆ ಕೊಡಬೇಕೆಂದು ವಿನಂತಿಸಿ ಕೊಳ್ಳುತ್ತೇವೆ. ತಮಗೆ ತಿಳಿಯದೆಯೇ ಇದು ಘಟಿಸಿದ್ದರೆ ಅದಿನ್ನೂ ಹೆಚ್ಚು ಖಂಡನೀಯ.

ವಂದನೆಗಳೊಂದಿಗೆ,

ನಿಮ್ಮ ವಿಶ್ವಾಸಿ,

(ಜಿ. ರಾಮಕೃಷ್ಣ)
ಸಂಪಾದಕ, ಹೊಸತು

✶ ✶ ✶

ವಿಶ್ವ ವಾಣಿಜ್ಯ ಸಂಸ್ಥೆ ಸದಸ್ಯತ್ವ ಹೊಂದಿ ಭಾರತವು ವಿಪುಲ ಲಾಭ ಪಡೆಯುತ್ತಿದೆಯೆಂಬ ಮಿಥ್ಯೆಯನ್ನು ಸರ್ಕಾರ ಮತ್ತು ಮಾಧ್ಯಮಗಳು ಸದಾ ಹರಡುತ್ತಿವೆ. ಅದೊಂದು ಪಿತೂರಿ ಎಂಬುದಕ್ಕೆ ಅನೇಕ ಘಟನೆಗಳು ಸಾಕ್ಷಿ ಒದಗಿಸಿವೆ ಮತ್ತು ಒದಗಿಸುತ್ತಿವೆ. ಈಚಿನ ಅಂತಹ ಒಂದು ಪ್ರಸಂಗ ಇದು : ಭಾರತ ಸರ್ಕಾರವು ಅದು ಹೇಗೋ ಏನೋ ಒಂದು ಸೂಚನೆ ನೀಡಿದೆ. ಅದೇನೆಂದರೆ ತನ್ನ ವಿವಿಧ ವಿಭಾಗಗಳಿಗೆ ಅಗತ್ಯವಾದ ವಿದ್ಯುನ್ಮಾನ ಸರಕುಗಳನ್ನು ಕೊಳ್ಳುವಾಗ ಭಾರತದಲ್ಲೇ ತಯಾರಾಗಿರುವ ಸರಕುಗಳಿಗೆ ಆದ್ಯತೆ ನೀಡಬೇಕು, ಎಂದು. ಅಂದರೆ ಕಂಪ್ಯೂಟರ್, ಹವಾ ನಿಯಂತ್ರಣದ ಯಂತ್ರ, ಸ್ವಯಂಚಾಲಿತ ಗ್ಯಾಜೆಟ್‌ಗಳು, ಇತ್ಯಾದಿ. ಇದರಲ್ಲೇನು ವಿಶೇಷ ಎನಿಸುವುದಿಲ್ಲವೆ ? ನಮ್ಮ ಉದ್ಯಮಗಳು ತಯಾರಿಸಿರುವ ಸರಕುಗಳಿರುವಾಗ ಅವನ್ನು ಕೊಳ್ಳದೆ ಆಮದು ಮಾಡಿಕೊಳ್ಳುವ ಮೂರ್ಖತನವೇಕೆ ? ಮನಮೋಹನ ಸಿಂಗ್ ಸರ್ಕಾರವು ಇಂತಹ ನೀತಿಗೆ ಮಾನ್ಯತೆ ನೀಡಿರುವುದು ಅಪರೂಪ. ಅದಕ್ಕೆ ವಿದೇಶಿ ವ್ಯಾಮೋಹ ಬಲವತ್ತರವಾದ್ದು. ಆದಾಗ್ಯೂ ಹೇಗೋ ಒಂದು ಸ್ವಾಗತಾರ್ಹ ಆಜ್ಞೆ ಬಂದಿದೆ. ಅದಕ್ಕೆ ಅಮೇರಿಕಾದ ಕಂಪನಿಗಳು ಹಾ-ಹೂ ಎಂದು ಗುಲ್ಲೆಬ್ಬಿಸಿವೆ. ಸರ್ಕಾರದ ಈ ನೀತಿ ವಿಶ್ವ ವ್ಯಾಪಾರ ಸಂಸ್ಥೆಯ ನಿಯಮಗಳ ಉಲ್ಲಂಘನೆ ಯಂತೆ ! ಅಮೇರಿಕಾ ಸರ್ಕಾರದ ವಾಣಿಜ್ಯ ಸಚಿವ ರಾನ್ ಕರ್ಕ್‌ಗೆ ಅಮೇರಿಕಾದ ಕಂಪನಿಗಳು ಒತ್ತಾಯ ಹೇರುತ್ತಿವೆ, ಭಾರತ ಸರ್ಕಾರದ ನೀತಿಯನ್ನು ಬದಲಾಯಿಸಲು ಮಧ್ಯಪ್ರವೇಶ ಮಾಡಬೇಕು, ಎಂದು. ಅವು ವಿದೇಶಾಂಗ ಸಚಿವೆ ಹಿಲರಿ ಕ್ಲಿಂಟನ್‌ಗೂ ಅದೇ ಮನವಿಯನ್ನು ಮಾಡಿ ಕೊಂಡಿವೆ. ಭಾರತದಂತಹ ದೊಡ್ಡ ಮಾರುಕಟ್ಟೆಯು ಹೀಗೆ ಕದ ಮುಚ್ಚಿದರೆ ಅಮೇರಿಕಾದ ಕಂಪನಿಗಳ ಗತಿಯೇನು, ಎಂಬುದು ಅವುಗಳ ಅಬ್ಬರ ! ಅಂದರೆ, ನಿಯಮಗಳ ಪ್ರಕಾರ ಭಾರತವು ತನ್ನ ಕೈಗಳನ್ನು ಕತ್ತರಿಸಿಕೊಳ್ಳಬೇಕು ಎಂಬುದು ಇದರರ್ಥ. ಅಂತರರಾಷ್ಟ್ರೀಯ ಮಾರುಕಟ್ಟೆಯಲ್ಲಿ ನಮ್ಮ ದೇಶಕ್ಕೆ ಅಂತಹ ದುರ್ಗತಿ ತಂದುಕೊಟ್ಟಿರುವುದು ಮನಮೋಹನ ಸಿಂಗ್ ಸರ್ಕಾರದ ಜಾಗತೀಕರಣ ನೀತಿ, ವಿಶ್ವ ವಾಣಿಜ್ಯ ಸಂಸ್ಥೆಯ ಜೊತೆಯಲ್ಲಿನ ಒಪ್ಪಂದ. ನಮ್ಮ ತಲೆಯ ಮೇಲೆ ನಾವೇ ಕಲ್ಲುಚಪ್ಪಡಿ ಹೇರಿಕೊಳ್ಳುವ ''ಬುದ್ಧಿವಂತಿಕೆ-ದೂರದರ್ಶಿತ್ವ'' ಇದು. ಇದನ್ನೇ ಸರ್ಕಾರ ಮತ್ತು ಮಾಧ್ಯಮಗಳು ಸ್ವಾಗತಿಸಿ ಶ್ಲಾಘಿಸುತ್ತಿವೆ. ಇದು ಜನ ವಿರೋಧಿ ಸರ್ಕಾರ ಎಂಬುದಕ್ಕೆ ಬೇರಿನ್ನೇನು ಪುರಾವೆ ಬೇಕು ?

✶ ✶ ✶

ಬಳ್ಳಾರಿ ರೆಡ್ಡಿ ಬಣದ ಶ್ರೀರಾಮುಲು ಈಗ ಹೊಸ ರಾಜಕೀಯ ಪಕ್ಷ ಕಟ್ಟಲು ಹೊರಟಿದ್ದಾನೆ. ಅದು ಎಷ್ಟರ ಮಟ್ಟಿಗೆ ಫಲಕಾರಿಯಾದೀತೋ ಹೇಳಲಾಗದು. ಆದರೆ ಒಂದಂತೂ ನಿಜ. ಈತ ಭಾಜಪಗೆ ತಲೆನೋವಾಗಿದ್ದಾನೆ. ಸಚಿವ ಸ್ಥಾನಕ್ಕೆ, ಶಾಸನಸಭೆಯ ಸದಸ್ಯತ್ವಕ್ಕೆ ರಾಜಿನಾಮೆ ನೀಡಿ ಉಪ ಚುನಾವಣೆಯಲ್ಲಿ ಅಧಿಕೃತ ಭಾಜಪ ಅಭ್ಯರ್ಥಿ ಯನ್ನು ಸೋಲಿಸಿ ಈಶ್ವರಪ್ಪನವರ ಮುಖಕ್ಕೆ ಮಸಿಬಳೆದ ಭೂಪ ಈತ. ನನಗೆ ಅನ್ಯಾಯವಾಗಿದೆ ಎಂದು ಹಲಬು ತ್ತಿರುವ ಶ್ರೀರಾಮುಲುಗೆ ತಾನು ಎಸಗಿರುವ ಅನ್ಯಾಯ, ಅಪರಾಧಗಳ ಪರಿವೆಯೇ ಇಲ್ಲ. ಏಕಾಏಕಿ ಈ ದಿಢೀರ್ ಶ್ರೀಮಂತ ಪ್ರಾಮಾಣಿಕತೆಯ ಮುಖವಾಡ ಧರಿಸಿದ್ದಾನೆ. ಭಾಜಪಗೆ ಕಿರಿಕಿರಿ ಉಂಟುಮಾಡಲು ಈಗ ಒಂದೊಂದೇ ವಿಷಯ ಹೊರಗೆಡಹುತ್ತಿದ್ದಾನೆ. ೨೦೦೮ರ ವಿಧಾನ ಸಭಾ ಚುನಾವಣೆ ಮತ್ತು ಸರಕಾರ ರಚನೆಗೆ ರೆಡ್ಡಿ ಸೋದರರು ಮತ್ತು ತಾನು ಭಾಜಪಗೆ ೨೬೦ ಕೋಟಿ ರೂ. ನೀಡಿರು ವುದಾಗಿ ಹೇಳಿದ್ದಾನೆ. ಇದರಲ್ಲಿ ಹತ್ತು ಕೋಟಿ ಚುನಾವಣೆ ಖರ್ಚಿಗೆ ಮತ್ತು ೨೦೦ ಕೋಟಿ ರೂ. 'ಆಪರೇಷನ್ ಕಮಲ' ಎನ್ನುವ ವ್ಯವಹಾರಕ್ಕೆ. ಇದರ ಬಗ್ಗೆ 'ಸತ್ಯವಂತ' ಕಾಂಗ್ರೆಸ್ ಈಗಾಗಲೇ ಲೋಕಾಯುಕ್ತಕ್ಕೆ ದೂರು ಸಲ್ಲಿಸಿದ್ದಾಗಿದೆ. ಇಷ್ಟು ಭಾರಿ ಮೊತ್ತದ ಹಣ ಎಲ್ಲಿಂದ ಬಂತು ? ಈಶ್ವರಪ್ಪ ಯಡಿಯೂರಪ್ಪ ಜೋಡಿ ಬಾಯಿಬಿಡುತ್ತಾರೆಯೆ ?

✶ ✶ ✶

ಯಡಿಯೂರಪ್ಪ ಅಧಿಕಾರದಿಂದ ಇಳಿದ ಮೇಲೆ ಅದೆಷ್ಟು ಸಲ ವೈಷ್ಣೋದೇವಿ ದರ್ಶನಕ್ಕೆ ಹೋದರೋ ಲೆಕ್ಕ ಇಟ್ಟಿಲ್ಲ, ಆದರೆ ದೇವೀಕೃಪೆ ಮಾತ್ರ ಅವರಿಗೆ ಇದುವರೆಗೆ ದಕ್ಕಿಲ್ಲ. ಜನವರಿ ತಿಂಗಳಿಂದ ಒಂದಾದ ಮೇಲೊಂದರಂತೆ ಗಡುವು ದಿನಾಂಕಗಳನ್ನು ಗೊತ್ತು ಮಾಡಿದರೂ ಏನೂ ಪ್ರಯೋಜನವಾಗಲಿಲ್ಲ. ಹುಬ್ಬಳ್ಳಿಯಲ್ಲಿ ಎಪ್ಪತ್ತನೇ ಹುಟ್ಟು ಹಬ್ಬ ಆಚರಿಸಿಕೊಂಡು ಶಕ್ತಿ ಪ್ರದರ್ಶನ ಮಾಡಿದ್ದು ಈಚಿನದು. ಈಗ ಶಸ್ತ್ರ ಸಂನ್ಯಾಸ ಘೋಷಿಸಿರುವ ಯಡಿಯೂರಪ್ಪ ನಾನಾವ ಅಧಿಕಾರ ಗದ್ದುಗೆಯನ್ನೂ ಅಪೇಕ್ಷಿಸುತ್ತಿಲ್ಲ, ಎಲ್ಲ ವರಿಷ್ಠರಿಗೆ ಬಿಟ್ಟಿದ್ದೇನೆ. ನಾನು ಅವರ ಬಾಗಿಲಿಗೆ ಹೋಗಲಾರೆ ಎಂದಿದ್ದಾರೆ. ಆದರೆ ಹಿಂದಿನಿಂದ ಪ್ರಯತ್ನಿಸುವುದನ್ನು ಮಾತ್ರ ಬಿಟ್ಟಿಲ್ಲ. ಯಡಿಯೂರಪ್ಪ ಪ್ರಶ್ನೆ ಭಾಜಪ ನಾಯಕತ್ವಕ್ಕೆ ಕಿರಿಕಿರಿ ಉಂಟುಮಾಡಿದೆ. ನಾಯಕತ್ವದಲ್ಲಿ ಬಿರುಕು ತಲೆದೋರಿದೆ. ಪರ-ವಿರೋಧ ಗಳ ತಾಕಲಾಟ ನಡೆದಿದೆ. ಯಡಿಯೂರಪ್ಪನವರಿಂದ ಸಾಕಷ್ಟು ಲಾಭ ಪಡೆದಿರುವ ಅಧ್ಯಕ್ಷ ನಿತೀನ್ ಗಡ್ಕರಿ ಪರ ವಹಿಸಿದರೆ ಯಾಕೋ ಅಡ್ವಾನಿ ವಿರೋಧಿಸುತ್ತಿದ್ದಾರೆ. ಈ ಎರಡೂ ಗುಂಪುಗಳ ನಡುವೆ ತಿಕ್ಕಾಟದಲ್ಲಿ ಕಂಗಾಲಾಗಿರುವುದು ಯಡಿಯೂರಪ್ಪ ಬೆಂಬಲಿಗರು. ಅವರ ಸಂಖ್ಯೆ ದಿನೇ ದಿನೇ ಕುಗ್ಗುತ್ತಿದೆ. ಸದಾನಂದ ಗೌಡರ ನಿದ್ರೆ ಕೆಡಿಸುವುದನ್ನು ಬಿಟ್ಟರೆ ಅವರಿಗೆ ಬೇರೇನೂ ಸಾಧಿಸಲಾಗಿಲ್ಲ. ಎಲ್ಲವೂ ಚಿಕ್ಕಮಗಳೂರು-ಉಡುಪಿ ಲೋಕಸಭೆ ಉಪ ಚುನಾವಣೆ ಮೇಲೆ ಅವಲಂಬಿತ. ಯಡಿಯೂರಪ್ಪ ಪ್ರಚಾರದಲ್ಲಿ ಭಾಗ ವಹಿಸದೆ ದೂರ ಉಳಿದು ತಮಾಷೆ ನೋಡುತ್ತಿದ್ದರು. ಅವರ ಪಕ್ಷದ ಅಭ್ಯರ್ಥಿ ಸೋತಿದ್ದಾರೆ. 'ನಾನಿಲ್ಲದಿದ್ದರೆ ನಿಮ್ಮ ಗತಿ ಅದೇ' ಎಂದು ಯಡಿಯೂರಪ್ಪ ಮುಖ ತಿರುವಬಹುದು !

✶ ✶ ✶

ಉತ್ತರ ಪ್ರದೇಶದ ಚುನಾವಣೆ. 'ಅವರು ಬಿಟ್ಟು ಇವರು ಬಿಟ್ಟು ಇವರ್‍ಯಾರು' ಎನ್ನುವಂತೆ ಈ ಸಲ ವಿಜಯಶ್ರೀ ಸಮಾಜವಾದಿ ಪಕ್ಷಕ್ಕೆ ಒಲಿದಿದ್ದಾಳೆ. ಕಾಂಗ್ರೆಸ್ ಮತ್ತು ಭಾಜಪ ರಾಷ್ಟ್ರೀಯ ಪಕ್ಷಗಳು ನೆಲಕಚ್ಚಿವೆ. ಪ್ರಧಾನಿಪಟ್ಟದ ಕನಸು ಕಾಣುತ್ತಿದ್ದ ಮಾಯಾವತಿಯ ಬಹುಜನ ಸಮಾಜ ಪಾರ್ಟಿ ಸೋತು ಸುಣ್ಣವಾಗಿದೆ. ದೆಹಲಿಯ ಸಿಂಹಾಸನದ ಮೇಲೆ ಕಣ್ಣಿರಿಸಿರುವ ಮುಲಾಯಮ್ ಸಿಂಗ್ ಯಾದವ್ ಮಗ ನಿಖಿಲೇಶ ಯಾದವ್‌ಗೆ ಮುಖ್ಯಮಂತ್ರಿ ಪಟ್ಟ ಕಟ್ಟಿದ್ದಾರೆ. ಅನುವಂಶಿಕ ಅಧಿಕಾರದ ಬಗ್ಗೆ ಆಕ್ಷೇಪಿಸುವವರೇ ತಮ್ಮ ಮಕ್ಕಳನ್ನು ಮುಂದೆ ತರಲು ನೋಡುತ್ತಿದ್ದಾರೆ. ತನ್ನ ರಾಜಕೀಯ ಚದುರಂಗವನ್ನು ದೆಹಲಿಗೆ ವರ್ಗಾಯಿಸಲು ನಿರ್ಧರಿಸಿರುವ ಉತ್ತರ ಪ್ರದೇಶದ ಮಾಜಿ ಮುಖ್ಯಮಂತ್ರಿ ಮಾಯಾವತೀಜಿ ರಾಜ್ಯಸಭಾ ಚುನಾವಣೆಗೆ ತಮ್ಮ ನಾಮಪತ್ರ ಸಲ್ಲಿಸಿದ್ದಾರೆ. ಆರಿಸಿ ಬರುವುದಂತೂ ಗ್ಯಾರಂಟಿ. ಮುಂದಿನ ಆಟವನ್ನು ನೋಡಬೇಕು. ಆಕೆ ಅಧಿಕೃತವಾಗಿ ಚುನಾವಣಾ ಆಯೋಗದ ಮುಂದೆ ಘೋಷಿಸಿಕೊಂಡಿರುವ ಒಟ್ಟು ಆಸ್ತಿಯ ಮೊತ್ತ ಎಷ್ಟು ಗೊತ್ತೆ ? ೧೧೧ ಕೋಟಿ ರೂಪಾಯಿಗಳು ! ಇಷ್ಟೊಂದು ಗಳಿಕೆ ಎಲ್ಲಿಂದ ಬಂತು ? ರಾಜಕಾರಣಿಗಳು ಘೋಷಿಸುವ ಆಸ್ತಿ ವಿವರಗಳನ್ನು ನೋಡಿದರೆ ವಿಸ್ಮಯ ವಾಗುತ್ತದೆ. ಇವರಿಗೆ ಇಷ್ಟು ಸಂಪತ್ತು ಎಲ್ಲಿಂದ ಬಂತು ಎಂದು ಅಚ್ಚರಿಯಾಗುತ್ತದೆ. ಅಧಿಕೃತವಾಗಿ ಹೇಳಿಕೊಳ್ಳುವ ಸಂಪತ್ತೇ ಇಷ್ಟಾದರೆ ಅನಧಿಕೃತವಾಗಿರುವುದು ಇನ್ನೆಷ್ಟೊ ? ಇದನ್ನೆಲ್ಲಾ ನೋಡಿದರೆ ರಾಜಕಾರಣ ಒಂದು ಲಾಭದಾಯಕ ಉದ್ಯಮ ಎನಿಸುವುದು ಸತ್ಯವಲ್ಲವೆ !

✶ ✶ ✶

ಸಮ್ಮಿಶ್ರ ಸರಕಾರದ ಆಡಳಿತ ಕಂಡಿರುವ ನಮಗೆ ಅದರ ಅನುಭವ ಈಗ ಚೆನ್ನಾಗಿ ಆಗಿದೆ, ಆಗುತ್ತಿದೆ. ಎನ್‌ಡಿಎ, ಯುಪಿಎ-೧,೨ ಕಂಡಿದ್ದೇವೆ. ವಾಜಪೇಯಿ ಪ್ರಧಾನಮಂತ್ರಿ ಯಾಗಿದ್ದಾಗ ಒಂದು ಸಂದರ್ಭದಲ್ಲಿ 'ಕೊಯಲಿಶನ್ ಧರ್ಮ' ಎನ್ನುವ ನುಡಿಕಟ್ಟನ್ನು ಬಳಸಿ ನುಣುಚಿಕೊಂಡರು. ಈ ಧರ್ಮ ದೇಶಕ್ಕೆ ತಂದಿರುವ ಹಾನಿ ಒಂದೇ ಎರಡೇ. ಗುಜರಾತ್‌ನಲ್ಲಿ ನರೇಂದ್ರ ಮೋದಿ ಆಡಳಿತದಲ್ಲಿ ೨೦೦೨ ರಲ್ಲಿ ನಡೆದ ಹತ್ಯಾಕಾಂಡದ ಸಂದರ್ಭದಲ್ಲಿ ವಾಜಪೇಯಿ 'ರಾಜಧರ್ಮ' ಎನ್ನುವ ಪ್ರಯೋಗ ಬಳಸಿದ್ದರು. ಯಾವುದಕ್ಕೂ ಧರ್ಮವನ್ನು ಹೇಗೆ ಬೇಕಾದರೂ ಉಪಯೋಗಿಸಿಕೊಳ್ಳ ಬಹುದು ರಾಜಕಾರಣದಲ್ಲಿ. ಮನಮೋಹನ್ ಸಿಂಗ್ ಸರಕಾರ ೨ಜಿ ಹಗರಣದಲ್ಲಿ ಪಾಲಿಸಿದ್ದು ಕೂಡ 'ಕೊಯಲಿಷನ್ ಧರ್ಮ'ವನ್ನೇ. ಅದು ಜಾರುತ್ತಿರುವುದು ಅದರಿಂದಲೇ. ಮಮತಾ ಬ್ಯಾನರ್ಜಿಯ ಭೂತ ಈಗ ಯುಪಿಎ-೨ನ್ನು ಕಿತ್ತು ತಿನ್ನುತ್ತಿದೆ. ಕೊಯಲಿಷನ್ ಧರ್ಮ ಜಿಂದಾಬಾದ್ ! ●




**ಜನವರಿ ವಿಶೇಷ ಸಂಚಿಕೆ**

ಈ ಸಲ ವಾರ್ಷಿಕ ಸಂಚಿಕೆಯು ತನ್ನ ಎಂದಿನ ವೈಶಿಷ್ಟ್ಯ ವನ್ನು, ಗಾಂಭೀರ್ಯವನ್ನು ಒಪ್ಪವಾಗಿ ಜಪ್ಪಿಸಿ ಕೊಂಡಿರುವ ಹದವು ಮುದಗೊಳಿಸಿತು. ನನಗೆ ಮನತಟ್ಟಿದ್ದೇನೆಂದರೆ ಸಂಪಾದಕರು 'ಓದುಗರ ವೇದಿಕೆ' ಯನ್ನು ನಿಭಾಯಿಸುವುದರಲ್ಲಿ ಪಟ್ಟ ಪಡಿಪಾಟಲು. ಗೋಪಿಯವರ 'ಕಾರ್ಟೂನು' ಅದನ್ನು ಸರಿಯಾಗಿ ಪ್ರತಿಬಿಂಬಿಸಿದೆ.

ಸಂಪಾದಕರು ಇಂಥ ವಿಷ(ಯ)ವನ್ನೇಕೆ ಆಯ್ದು ಕೊಂಡರಪ್ಪ ಈ ವೇದಿಕೆಗೆ ಎಂದು ನಾನು ಮೊದಲೇ ಅಂದ್ಕೊಂಡಿದ್ದೆ. ಪರೋಪದೇಶ ಪಾಂಡಿತ್ಯದಲ್ಲಿ ನಾವೆಲ್ಲ ಪರಿಣತರೇ! ''ಅಭಿಪ್ರಾಯಗಳು ಕ್ರಿಯೆಗಳಿಗೆ ಅಡಿಪಾಯವಾಗಲೆಂದು ಆಶಿಸುತ್ತೇವೆ'' ಎಂಬ ಮಂಗಳ ವಾಕ್ಯವು ಹತಾಶೆಯ ನಿಟ್ಟುಸಿರನ್ನೇ ಒಳಮನದ ಹುತ್ತಿನಲ್ಲಿ ಹುದುಗಿಸಿ ಕೊಂಡಿರುವ ಅನುಮಾನವನ್ನು ಧ್ವನಿಸುತ್ತದೆ. ನಾನು ನೀಡಿರುವ ಅಭಿಪ್ರಾಯವು ಬಲಪಂಥೀಯನ ಧಾರ್ಮಿಕ ಮತ್ತು ಆಧ್ಯಾತ್ಮಿಕ ಬೊಗಳೆ ಗಳೆಂದು ಅವಗಣಿತವಾಗುವವೇನೋ ಎಂದೆನಿಸಿತ್ತು. 'ಧರ್ಮ' ಎಂದರೆ ಕರ್ತವ್ಯ ಮತ್ತು ಅಧ್ಯಾತ್ಮ ಎಂದರೆ ಏಕಾತ್ಮವಾದ ('ಆತ್ಮವತ್ ಸರ್ವಭೂತೇಷು') ಎಂಬ ಮರ್ಮವೇ – ಆಡಂಬರದ ಹೋಮ, ಹವನಗಳ ಭರಾಟೆ ಹಾಗೂ ಶ್ರೇಷ್ಠ, ಕನಿಷ್ಠ ಎಂಬ ತಾರತಮ್ಯದ ಘನಿಷ್ಠ ವರ್ಗೀಕರಣದ ನಿರಂತರ ಚರ್ಚೆಯಲ್ಲಿ ಮಸುಕಾಗಿ ಹೋಗಿರುವುದರಿಂದ 'ಧರ್ಮ' ಮತ್ತು 'ಅಧ್ಯಾತ್ಮ' ಎಂದೊಡನೆ ಬಲಪಂಥೀಯತೆ ಎಂಬ ಪ್ರಬಲ ವಿರೋಧದ ಭಾವ ಸಹಜವಾಗಿ ಉಕ್ಕೇರು ತ್ತದಷ್ಟೇ! ಹೀಗಾಗಿ ಆ ನೆಲೆಯಲ್ಲಿ ಸಮಸ್ಯೆಯನ್ನು ಅರ್ಥೈಸಿಕೊಂಡು ಬಿಡಿಸಿಕೊಳ್ಳುವ ಕುರಿತು ಆಲೋಚನೆಗೈದಲ್ಲಿ 'ಸಾಕು; ಸಾಕು ಕಂದಾಚಾರದ ಮಾತು ಹಾಗೂ ಬೂಟಾಟಿಕೆಯ ವಿಚಾರ' ಎಂಬಂಥ ಪ್ರತಿಕ್ರಿಯೆ ತೀರ ಸಹಜ. ಹೀಗಾಗಿಯೇ ಸಮನ್ವಯದ ಅವಕಾಶಗಳಿಗೆ ಎರವಾಗುತ್ತಿರುವವೇನೋ! ಏನೇ ಇರಲಿ ಸಂಪಾದಕರು ಪಾಡಿರುವ ಉಪರೋಕ್ತ ಮಂಗಳ ವಾಕ್ಯವು ಬರೀ ಫಾರ್ಮ್ಯಾಲಿಟಿಯಾಗದಿರಲಿ ಎಂದು ನಾನು ಮನಸಾ ಬಯಸುವೆ.

ಬೆಳಗಾವಿ **ಅನಂತ ಕಲ್ಲೋಳ**

**ಮಾರ್ಚ್ ಸಂಚಿಕೆ**

ಈಗಾಗಲೇ ಕಾಲಿಡುತ್ತಿರುವ ಬೇಸಿಗೆಯ ಪ್ರತೀಕವೋ ಎಂಬಂತೆ ಮಾರ್ಚ್ ೨೦೧೨ರ ಮುಖಪುಟ ಮೂಡಿಬಂದಿದೆ. ರಾಜ್ಯವನ್ನು ಕಾಡು ತ್ತಿರುವ ನೀರಿನ ಕೊರತೆಯನ್ನು ಸಾಂಕೇತಿಕವಾಗಿ 'ಹೊಸತು' ನಿರೂಪಿಸಿದೆ.

ಎಂ. ಎಸ್. ವೇದಾ ಅವರ 'ಮಡಿದವರು' ತನ್ನ ವಿಶಿಷ್ಟ ಗ್ರಾಮ್ಯಭಾಷಾ ಪ್ರಯೋಗದಿಂದ ಗಮನ ಸೆಳೆಯುತ್ತದೆ. ಭಾಷೆಯನ್ನು ಸಮರ್ಥವಾಗಿ ಬಳಸಿ ಕೊಂಡು, ಉತ್ತಮ ಕಥೆ ನೀಡುವ ಕಲೆ ವೇದಾ ಅವರಿಗೆ ಒಲಿದಿದೆ.

ಭಾರತೀಯ ಸಂಗೀತ ಪ್ರಪಂಚದಲ್ಲಿ ಭೂಪೇನ್ ಹಜ್ಹಾರಿಕಾ ಎಂದೆಂದೂ ಮಾಸಲಾರದ ನಕ್ಷತ್ರ. ಅವರು ಚಿತ್ರಗೀತೆಯೊಂದನ್ನು ಹಾಡಿದಾಗ ಅದರಿಂದ ಹೆಚ್ಚು ಜನರನ್ನು ಮುಟ್ಟಿದರು. ಅವರ ಅಸ್ಸಾಮಿ ಗೀತೆಗಳು




ಹಾಗೂ ಹಿಂದಿಯಲ್ಲಿ ಬಂದಿರುವ ಅದರ ಧ್ವನಿಸುರಳಿ/ ಸಿ.ಡಿ.ಗಳು ಎರಡೂ ಭಾಷೆಗಳ ಶ್ರೋತೃಗಳನ್ನು ರಂಜಿಸಿವೆ. ಕಾನೂನು ಪಾಲಿಸುವುದಕ್ಕಲ್ಲ, ಅದನ್ನು ಉಲ್ಲಂಘಿಸಲು ಎಷ್ಟೆಲ್ಲ ದಾರಿಗಳಿವೆ ಅಂತ ಅಭ್ಯಾಸ ಮಾಡ್ತಿದ್ದೆ! ಪುಟ ೫೬ರ ವ್ಯಂಗ್ಯಚಿತ್ರ ಇತ್ತೀಚಿನ ವಕೀಲರ ವರ್ತನೆಗೆ ಹಿಡಿದ ಕನ್ನಡಿಯಂತಿದೆ.

ಮೈಸೂರು **ಕೊ. ಸು. ನರಸಿಂಹಮೂರ್ತಿ**

''ಲಿಂಗ ಸಮಾನತೆ ಮತ್ತು ಅಭಿವೃದ್ಧಿ'' ಕುರಿತು ಬರೆದ ಲೇಖನವು ಹಲವಾರು ಅಂಶಗಳ ಮೇಲೆ ಬೆಳಕು ಚೆಲ್ಲಿದೆ. ಒಂದಂಶವನ್ನು ಲೇಖಕರು ಕೈ ಬಿಟ್ಟಿರಬಹುದೆಂಬ ಅನಿಸಿಕೆ ನನ್ನದು. ಮಕ್ಕಳ (೦-೬ ವಯೋಮಾನದ) ಲಿಂಗ ಅನುಪಾತವು ಕರ್ನಾಟಕ ರಾಜ್ಯದಲ್ಲಿ ೧೯೯೧ರಲ್ಲಿ ೯೬೦, ೨೦೦೧ರಲ್ಲಿ ೯೪೬ ಮತ್ತು ೨೦೧೧ರಲ್ಲಿ ೯೪೩ಕ್ಕೆ ಇಳಿದಿದೆ. ಇದು ಮಾರಕ ಅಂಶ. ಇದಕ್ಕೆ ಹಲವಾರು ಕಾರಣಗಳಲ್ಲಿ ಒಂದಾದ ಪ್ರಸವ ಪೂರ್ವ ಭ್ರೂಣ ಲಿಂಗ ಪತ್ತೆ ನಿಷೇಧ ಕಾಯಿದೆಯನ್ನು ಪರಿಣಾಮಕಾರಿಯಾಗಿ ಜಾರಿಗೆ ತರುವ ಬಗ್ಗೆ ಮಾಹಿತಿ ಇಲ್ಲ, ಇದರ ಪರಿಣಾಮದಿಂದಲೂ ಮಕ್ಕಳ ಲಿಂಗ ಅನುಪಾತದಲ್ಲೂ ಅಸಮಾನತೆ ಉಂಟಾಗಿದೆಯೆಂದು ಊಹಿಸಬಹುದೇ?

ತುಮಕೂರು **ವಾಮನ ರಾವ್**

'ಸಂತಾಪ ಸೂಚಕ ಸಭೆ' ಹಾಸ್ಯ ಹಾಗೂ ವ್ಯಂಗ್ಯದ ಮೊನಚಿನಿಂದ ಓದಿಸಿಕೊಂಡು ಹೋಯಿತು, 'ಭಾಲಚಂದ್ರ ಜಯಶೆಟ್ಟಿ' ಎಂದು ಲೇಖಕರ ಹೆಸರು ಲೇಖನದಲ್ಲಿಯೂ, ವಿಳಾಸದಲ್ಲಿಯೂ ಪ್ರಕಟವಾಗಿದ್ದು ಅದು 'ಬಾಲಚಂದ್ರ' ಅಲ್ಲವೇ? (ಅಲ್ಲ, ಅವರು ಭಾಲಚಂದ್ರರೇ. – ಸಂ.) ಲೇಖನದಲ್ಲಿ 'ಗಾಂಧಿ ತಾತನಿಗೆ ಅವಮಾನ ಮಾಡಿದಂಗ ಆಗ್ತದ' ಅಂದಿದ್ರ ಸಾಕಿತ್ತು. ಅದು ಬಿಟ್ಟು 'ರಾಷ್ಟ್ರಪಿತ ಗಾಂಧಿ ತಾತನ ಮಾರಿಮ್ಯಾಲ ಚಪ್ಪಲಿ ತೊಗೊಂಡು ಹೊಡದ್ಹಾಗೇ ಅನ್ನಿ' ಎಂಬ ಬಿರುಸು ಮಾತು ಸಂಪಾದಕರಾದರೂ ಯಾಕೆ ಹೊಡೆದ್ಹಾಕಲಿಲ್ಲ! ಇದಕ್ಕ ನನ್ನ ಆಕ್ಷೇಪಣೆ ಅದ.

ವಿಜಾಪುರ **ಡಾ|| ಅಮೀರುದ್ದೀನ್ ಖಾಜಿ**

ನಾನು ಭಗವಾನ್ ಸಾಯಿಬಾಬರ ಕುರಿತು ಬರೆದ ಲೇಖನವನ್ನು ನೀವು ಪ್ರಕಟಿಸಲಿಲ್ಲ, ಪ್ರಕಟಿಸುವುದಿಲ್ಲ ಎಂದು ನನಗೆ ತಿಳಿದಿತ್ತು. ಬಾಬಾ ಅವರನ್ನು ಬೈದು ಲೇಖನ ಬರೆದಿದ್ದರೆ ಪ್ರಕಟಿಸುತ್ತಿದ್ದಿರಿ. ಅಲ್ಲವಾ? ಬಾಬ ಅವರ ಕುರಿತು ನನಗೆ ತಿಳಿದಿರುವಷ್ಟು ನಿಮಗಾಗಲಿ ಬಾಬ ಅವರನ್ನು ಟೀಕಿಸಿ ಬರೆದವರಿಗಾಗಲಿ ತಿಳಿಯದು.

ಬೆಂಗಳೂರು **ಬಿಳುಮನೆ ರಾಮದಾಸ್**

(ಕರ್ನಾಟಕದ ವಿಧಾನ ಪರಿಷತ್ ಸದಸ್ಯೆಯೊಬ್ಬರು ಶ್ರೀ. ವೀರಭದ್ರ ಚನ್ನಮಲ್ಲ ಸ್ವಾಮೀಜಿ ಅವರಿಗೆ ಬರೆದಿದ್ದ ಪತ್ರಕ್ಕೆ ಉತ್ತರವಾಗಿ ೧೫.೦೨.೨೦೧೨ರಂದು ಬರೆಯಲಾಗಿದ್ದ ಉತ್ತರ ಪ್ರಕಟಿಸುತ್ತಿದ್ದೇವೆ. – ಸಂ.)

ಪ್ರಜಾಪ್ರಭುತ್ವದ ವ್ಯವಸ್ಥೆಯಲ್ಲಿ ವೈಜ್ಞಾನಿಕ ಮನೋ ಧರ್ಮವನ್ನು ಪ್ರೋತ್ಸಾಹಿಸಬೇಕೆನ್ನುವ ಸಂವಿಧಾನದ ಮಾರ್ಗದರ್ಶಕ ಸೂತ್ರವನ್ನು ಒಪ್ಪಿಕೊಂಡಿರುವಾಗ, ಪಾಳೆಗಾರಿ ಸಮಾಜದಲ್ಲಿ ರೂಢಿಗೆ ಬಂದ ಅನೇಕ ಅಮಾನವೀಯ, ಅರ್ಥಹೀನ ನಂಬಿಕೆ-ಆಚರಣೆ ಗಳನ್ನು ಉಳಿಸಿಕೊಳ್ಳಬೇಕೆ ಎಂಬ ಬಗ್ಗೆ ನಾಗರಿಕರೆಲ್ಲರೂ ಯೋಚಿಸ ಬೇಕಾಗಿದೆ. ಪಾಳೆಗಾರಿಕೆ ಸಮಾಜಕ್ಕೂ ಆಧುನಿಕ ಪ್ರಜಾಪ್ರಭುತ್ವ ಸಮಾಜದ ಸಂದರ್ಭಕ್ಕೂ ವ್ಯತ್ಯಾಸವಿಲ್ಲವೆಂದು ತಾವು ಭಾವಿಸುವುದಾದರೆ ಪ್ರಜಾಪ್ರಭುತ್ವದ ಬಗ್ಗೆ ನಿಮಗಿರುವ ನಂಬಿಕೆಯನ್ನೇ ಪ್ರಶ್ನಿಸಬೇಕಾಗುತ್ತದೆ.

ಸಮುದಾಯಗಳು ಅನುಸರಿಸುವ ಪದ್ಧತಿಗಳ ಬಗ್ಗೆ ಬರೆದಿದ್ದೀರಿ. ಕೆಳಜಾತಿಗಳೂ ಆಚರಿಸುವ ಅನಿಷ್ಟ ಪದ್ಧತಿಗಳ ಬಗ್ಗೆ ಅವರಿಗೆ ಅರಿವಿಲ್ಲ ಎಂಬುದನ್ನು ತಾವು ವೈಭವೀಕರಿಸಿ ಮಾತನಾಡುತ್ತಿರುವುದು ಮೇಲ್ಜಾತಿಯಲ್ಲಿ ಹುಟ್ಟಿರುವ ತಮಗೆ ಸಹಜ ಎಂಬುದನ್ನು ನಾನು ಬಲ್ಲೆ. ನಿರಕ್ಷರಿಗಳು ಬಡವರು ಅಜ್ಞಾತ ನೆಲೆಗೆ ಸೇರಿದ ಬಹುಜನರನ್ನು ಇಂಥ ಸ್ಥಿತಿಗೆ ತಳ್ಳಿದವರು ಯಾರು? ಇವರ ಬಗ್ಗೆ ಅಂತಃಕರಣವಿಲ್ಲದೆ, ಇವರು ಅದೇ

ಸ್ಥಿತಿಯಲ್ಲಿ ಮುಂದುವರಿಯಬೇಕೆಂದು ಬಯಸುವುದು ಕ್ರೂರ ಸಮಾಜದ ಪರಿಕಲ್ಪನೆಯನ್ನು ಎತ್ತಿ ತೋರಿಸುತ್ತದೆ.

ನನ್ನ ಬಗ್ಗೆ ತಾವು ಮಾಡಿರುವ ವೈಯಕ್ತಿಕ ನಿಂದೆಗೆ ನಾನು ಉತ್ತರ ಕೊಡಲು ಹೋಗುವುದಿಲ್ಲ. ಇಂಥ ಮಾತುಗಳನ್ನು ಬರೆಯುವುದು ನಿಮ್ಮ ಅಭಿರುಚಿಯನ್ನು ಸೂಚಿಸುತ್ತದೆ ಎಂದು ನಾನು ತಿಳಿಸಿದ್ದೇನೆ. ಇಂಥ ವೃಥಾ ಆರೋಪಗಳಿಂದ ನಾನು ಕಿಂಚಿತ್ತೂ ವಿಚಲಿತನಾಗುವುದಿಲ್ಲ. ಹಾಗೆಯೇ ನನ್ನ ಧ್ಯೇಯದಿಂದ ಹಿಂದೆ ಸರಿಯುವುದೂ ಇಲ್ಲ ಎಂಬುದನ್ನು ಸ್ಪಷ್ಟಪಡಿಸುತ್ತೇನೆ. ವ್ಯಕ್ತಿಗಳ ಬಗ್ಗೆ ಅಥವಾ ಒಂದು ಜಾತಿಯ ಬಗ್ಗೆ ನನಗೆ ದ್ವೇಷ - ಅಸಹನೆ ಇರುವುದಕ್ಕೆ ಯಾವ ಕಾರಣವೂ ಇಲ್ಲ. ನನ್ನನ್ನು ಈ ರೀತಿ ನಿಂದೆಗೆ ಗುರಿಮಾಡುವ ಮೂಲಕ ನನ್ನನ್ನು ಹೆದರಿಸುವ ತಂತ್ರವನ್ನು ತಾವು ಅನುಸರಿಸುತ್ತಿದ್ದೀರೆಂದು ನಾನು ಅನಿವಾರ್ಯವಾಗಿ ಭಾವಿಸಬೇಕಾಗುತ್ತದೆ.

ಶ್ರೀ ನಾರಾಯಣ ಗುರುಗಳು ಹಾಗೂ ಶ್ರೀ ಪೆರಿಯಾರ್ ರಾಮಸ್ವಾಮಿ ಅವರಲ್ಲಿ ಭೇದವನ್ನು ಕಲ್ಪಿಸಿದ್ದೀರಿ. ಮೂಲತಃ ಈ ಇಬ್ಬರೂ ಮಹನೀಯರು ಬ್ರಾಹ್ಮಣಶಾಹಿಯನ್ನು ವಿರೋಧಿಸಿದವರು, ಬ್ರಾಹ್ಮಣೇತರರಿಗೆ ಆತ್ಮವಿಶ್ವಾಸವನ್ನು ತಂದುಕೊಟ್ಟವರು. ಅವರಿಬ್ಬರ ಗುರಿ ಒಂದೇ ಆದರೂ ದಾರಿ ವಿಭಿನ್ನ. ಅವರ ದಾರಿಯಲ್ಲಿ ಒಬ್ಬರು ಸಾತ್ತ್ವಿಕ ಮಾರ್ಗವನ್ನು ಅನುಸರಿಸಿದರೆ ಮತ್ತೊಬ್ಬರು ಆಗ್ರಹಪೂರ್ವಕ ಮಾರ್ಗವನ್ನು ಅನುಸರಿಸಿದರು. ಇಬ್ಬರ ಅನುಯಾಯಿಗಳೂ ಒಂದೇ ಮೂಲದವರು. ಇವರ ನಡುವೆ ನನಗೆ ವ್ಯತ್ಯಾಸ ಕಂಡುಬಂದಿಲ್ಲ. ನನ್ನ ದೃಷ್ಟಿಯಲ್ಲಿ ಇಬ್ಬರೂ ಸಮಾನರು. ಇವರಿಬ್ಬರ ಬಗ್ಗೆಯೂ ನನಗೆ ಗೌರವವಿದೆ. ಇವರಿಬ್ಬರ ನಡುವೆ ಭೇದವನ್ನು ಕಲ್ಪಿಸುವ ಬುದ್ಧಿ ಮೇಲ್ಜಾತಿಯ ಕುತಂತ್ರವಾಗಿ ನನಗೆ ಕಾಣುತ್ತದೆ. ನಾನು ಪೆರಿಯಾರ್ ದಾರಿ ತುಳಿಯುತ್ತಿರುವ ಬಗ್ಗೆ ನಿಮ್ಮ ಬಳಿ ಯಾವ ಆಧಾರಗಳಿವೆಯೋ ನನಗೆ ಗೊತ್ತಿಲ್ಲ. ಅವರ ಕಾಲ, ಸಂದರ್ಭಕ್ಕೂ ಇವತ್ತಿನ ಕಾಲ ಸಂದರ್ಭಕ್ಕೂ ವ್ಯತ್ಯಾಸವಿದೆ ಎಂಬುದರ ಅರಿವು ನನಗಿದೆ. ಆಧುನಿಕ ಭಾರತದ ಸಂದರ್ಭದಲ್ಲಿ ಡಾ॥ ಬಿ. ಆರ್. ಅಂಬೇಡ್ಕರ್ ಹಾಗೂ ಪೆರಿಯಾರ್ ಮಹಾನ್ ಕ್ರಾಂತಿಕಾರಿಗಳು. ಇವರ ಬಗ್ಗೆ ನನಗೆ ಅಪಾರ ಗೌರವವಿದೆ ಎಂಬುದನ್ನು ತಮಗೆ ಸ್ಪಷ್ಟವಾಗಿ ತಿಳಿಸಬಯಸುತ್ತೇನೆ.

ಸಾಹಿತ್ಯದ ದೃಷ್ಟಿಯಿಂದ ವೈಚಾರಿಕತೆಯನ್ನು ಎತ್ತಿ ಹಿಡಿದಿರುವ ಮಹಾಕವಿ ಕುವೆಂಪು ಅವರ ಬಗ್ಗೆ ನನಗೆ ಅಗಾಧವಾದ ಗೌರವವಿದೆ. ಸಾಮಾಜಿಕ ತಾರತಮ್ಯಗಳನ್ನು ಬೆಂಬಲಿಸುವ ಕೆಲವು ಲೇಖಕರ ಬಗ್ಗೆ ನನಗೆ ಗೌರವವಿಲ್ಲ. ಇಂಥ ಲೇಖಕರೊಂದಿಗಿನ ನನ್ನ ಅಭಿಪ್ರಾಯ ಭೇದ ತಾತ್ವಿಕವಾದುದೇ ವಿನಾ ವ್ಯಕ್ತಿಗತವಾದದ್ದಲ್ಲ; ಜಾತಿ ಧರ್ಮ ಆಧಾರಿತವಾದದ್ದಲ್ಲ ಎಂಬುದನ್ನು ತಮಗೆ ಸ್ಪಷ್ಟಪಡಿಸಲು ಇಚ್ಛಿಸುತ್ತೇನೆ.

'ನಿಷಿದ್ಧವಾದದ್ದೆಲ್ಲವೂ ನಿಂತು ಹೋಗಿಲ್ಲ' ಎಂಬ ನಿಮ್ಮ ಮಾತನ್ನು ನಾನೂ ಒಪ್ಪುತ್ತೇನೆ. ಕಾನೂನು ಒಂದು ಸಂಕೇತವೆಂದರೂ ಸಮಾಜ ಪರಿವರ್ತನೆಯಲ್ಲಿ ಅದರದು ಮುಖ್ಯಪಾತ್ರ. ಇದರ ಮೂಲಕವೇ ಎಲ್ಲವೂ ಸರಿಯಾಗುತ್ತದೆ ಎಂದು ಯಾರೂ ಭಾವಿಸಬೇಕಿಲ್ಲ. ಆದರೆ ಸರ್ಕಾರಕ್ಕೆ ತನ್ನ ಕರ್ತವ್ಯವೆಂಬುದಿದೆ. ಹಿಂದಿನ ಸರ್ಕಾರಗಳು ತಮ್ಮ ಕರ್ತವ್ಯಕ್ಕೆ ಬದ್ಧವಾಗಿ ಅನೇಕ ಅನಿಷ್ಟ ಆಚರಣೆಗಳನ್ನು ನಿಷೇಧ ಮಾಡಿವೆ. ಅದರಿಂದ ಸಮಾಜಕ್ಕೆ ಒಳ್ಳೆಯದೇ ಆಗಿದೆ. ಅದೇ ರೀತಿ ಈಗಿನ ಸರ್ಕಾರವು ತನ್ನ ಜವಾಬ್ದಾರಿಯನ್ನು ನಿರ್ವಹಿಸಲಿ ಎಂಬ ಸದಿಚ್ಛೆಯಿಂದ ಮಡೆಸ್ನಾನ, ಪಂಕ್ತಿಭೇದ ಮುಂತಾದ ಆಚರಣೆಗಳನ್ನು ನಿಷೇಧಿಸಬೇಕೆಂದು ಒತ್ತಾಯಿಸುತ್ತಿದ್ದೇನೆ. ನಿಷೇಧಕ್ಕೆ ಅರ್ಹವಾದ ಇತರ ಎಲ್ಲ ಆಚರಣೆಗಳ ಬಗ್ಗೆ ವರದಿ ಸಲ್ಲಿಸಲು ಪ್ರಾಜ್ಞರ ಸಮಿತಿಯನ್ನು ರಚಿಸಬೇಕೆಂದು ಆಗ್ರಹಿಸುತ್ತಿದ್ದೇನೆ. ಅದರ ಜತೆಯಲ್ಲಿ ಸಮಾಜವನ್ನು ಜಾಗೃತಿಗೊಳಿಸುವ ಪ್ರಯತ್ನವನ್ನೂ ನಡೆಸಿದ್ದೇನೆ. ಈ ವಿಚಾರದಲ್ಲಿ ಬಹುಜನರ ಆಶಯದಂತೆ ಸರ್ಕಾರವನ್ನೂ ವಿಶ್ವಾಸಕ್ಕೆ ತೆಗೆದುಕೊಳ್ಳಬೇಕು ಎಂಬ ಸದ್ಭಾವನೆಯನ್ನು ಹೊಂದಿದ್ದೇನೆ.

ಹಿಂದೊಮ್ಮೆ ಜನರೇ ಒಪ್ಪಿಕೊಂಡಿದ್ದರೂ, ಅವರು ಸ್ವಯಂಇಚ್ಛೆಯಿಂದ ಹೊರುತ್ತಿದ್ದರೂ, ಮಲ ಹೊರುವ ಪದ್ಧತಿಯನ್ನು ತಡೆಯಲಿಲ್ಲವೆ? ಸತಿಸಹಗಮನ, ಅಸ್ಪೃಶ್ಯತೆಯ ಆಚರಣೆ, ದೇವದಾಸಿ ಪದ್ಧತಿ, ಬೆತ್ತಲೆ ಸೇವೆ, ಬಾಲ್ಯವಿವಾಹಗಳನ್ನು ಜನರು ಸ್ವಯಂ ಇಚ್ಛೆಯಿಂದ ಮಾಡುತ್ತ ಬಂದಿದ್ದರೆಂದು ಅವನು ಮುಂದುವರಿಸಲು ಬರುತ್ತದೆಯೇ? ಮಡೆಸ್ನಾನವನ್ನು ಕೆಲವರು ವಿಶ್ವಾಸದಿಂದ ಆಚರಿಸಿಕೊಂಡು ಬಂದಿದ್ದಾರೆಂದು ಅದನ್ನು ಸಮರ್ಥಿಸಿಕೊಳ್ಳುವುದು ನಮ್ಮ ಸಮಾಜವನ್ನು ಮಧ್ಯಕಾಲೀನ ಯುಗಕ್ಕೆ ತೆಗೆದುಕೊಂಡು ಹೋಗುವ ಹುನ್ನಾರವಾಗುತ್ತದೆಯೇ ವಿನಾ ಪ್ರಜಾಪ್ರಭುತ್ವದ ವ್ಯವಸ್ಥೆಗೆ ಸಲ್ಲುವ ಮನಃಸ್ಥಿತಿಯಲ್ಲ.

ಮಡೆಸ್ನಾನ ಮತ್ತು ಉರುಳುಸೇವೆ ಇವೆರಡರ ನಡುವೆ ವ್ಯತ್ಯಾಸವಿಲ್ಲವೆಂಬಂತೆ ನೀವು ಬರೆದಿದ್ದೀರಿ. ಇವೆರಡರ ನಡುವೆ ಅಗಾಧವಾದ ವ್ಯತ್ಯಾಸವಿದೆ. ಉರುಳು ಸೇವೆಯಿಂದ ನೀವು ಮೂಕವಿಸ್ಮಿತರಾಗಿ ಸಂಭ್ರಮಗೊಂಡಿರುವುದನ್ನು ನಾನು ಅರ್ಥಮಾಡಿಕೊಳ್ಳಬಲ್ಲೆ. ನನಗೆ ಅಂಥ ಸಂಭ್ರಮ ಇಲ್ಲವಾದರೂ ಅದರ ಬಗ್ಗೆ ನನ್ನ ಆಕ್ಷೇಪಣೆ ಇಲ್ಲ. ನನ್ನ ಆಕ್ಷೇಪ ಇರುವುದು ಮೇಲುಜಾತಿಯ ಜನರ ಎಂಜಲಿನ ಮೇಲೆ ಕೆಳಜಾತಿಯ ಜನರು ಉರುಳಾಡುವ ಮಡೆಸ್ನಾನದ ಬಗ್ಗೆ, ಮೇಲುಜಾತಿಯ ಜನರ ಎಂಜಲು ಎಲೆಗಳನ್ನು ಕೆಳಜಾತಿಯವರು ತಲೆಮೇಲೆ ಹೊತ್ತು ಪ್ರದಕ್ಷಿಣೆ ಹಾಕುವ ಮಡೆ ಸೇವೆ ಬಗ್ಗೆ. ಹಾಗೆಯೇ ಮೇಲುಜಾತಿ ಜನರ ಎಂಜಲನ್ನು ಕೆಳಜಾತಿಯವರು ಪ್ರಸಾದವೆಂದು ಸ್ವೀಕರಿಸುವ ಮಡೆ ಸೇವನೆ ಬಗ್ಗೆ. ಒಂದು ವೇಳೆ ಮೇಲುಜಾತಿಯವರು ಮಡೆಸ್ನಾನವನ್ನು ಮಾಡುತ್ತಿದ್ದರೂ ಅದನ್ನೂ ಒಪ್ಪಿಕೊಳ್ಳಲು ಸಾಧ್ಯವಿಲ್ಲ. ಮಡೆಸ್ನಾನ ಮಾನವ ಘನತೆಗೆ ವಿರುದ್ಧವಾದದ್ದು. ಆದ್ದರಿಂದ ಮೇಲುಜಾತಿಯವರು ಕೆಳಜಾತಿಯವರು ಯಾರೇ ಮಡೆಸ್ನಾನ ಮಾಡಲಿ, ಅದು ಸರ್ವಥಾ ಸೂಕ್ತವಲ್ಲ.

ದೇವರನ್ನು ಪಲ್ಲಕ್ಕಿಯಲ್ಲೊ ರಥದಲ್ಲೊ ಮೆರೆಸುವುದರಲ್ಲಿ ಯಾವ ತಪ್ಪೂ ಇಲ್ಲ. ಆದರೆ ಮನುಷ್ಯರನ್ನು ಅಡ್ಡಪಲ್ಲಕ್ಕಿಯಲ್ಲಿ ಹೊರುವುದು ಸಹ್ಯವಲ್ಲ. ದೇವರಿಗೆ ಪೂಜೆ ಪ್ರಾರ್ಥನೆ ಮಾಡುವುದರಿಂದ ಹಾನಿಯಿಲ್ಲ. ಆದರೆ ದೇವರಿಗೆ ಪ್ರಾಣಿಗಳನ್ನು ಬಲಿಕೊಡುವುದು ಯೋಗ್ಯವಲ್ಲ. ದೇವರ ತೀರ್ಥವನ್ನೊ, ಲಿಂಗೋದಕವನ್ನೊ ತೆಗೆದುಕೊಂಡರೆ ತೊಂದರೆಯಿಲ್ಲ; ಮನುಷ್ಯರ ಪಾದೋದಕ ತೆಗೆದುಕೊಳ್ಳುವುದು ವಿಹಿತವಲ್ಲ. ವ್ಯಷ್ಟಿಗೆ, ಸಮಷ್ಟಿಗೆ ಹಾನಿಯನ್ನು ಉಂಟುಮಾಡದ ಅಪಮಾನವನ್ನು ಎಸಗದ ಯಾವುದೇ ನಂಬಿಕೆ ಆಚರಣೆಗಳನ್ನು ನಾನು ಖಂಡಿತ ಆಕ್ಷೇಪಿಸುವುದಿಲ್ಲ. ಆದರೆ ಸಮಾಜಕ್ಕೆ ಕೇಡು ಬಗೆಯುವ, ಮನುಷ್ಯ ಮನುಷ್ಯರ ನಡುವೆ ಭೇದವನ್ನು ಹುಟ್ಟುಹಾಕುವ, ಮಾನವ ಘನತೆಗೆ ಕಳಂಕ ತರುವ ಹೇಯ ಪದ್ಧತಿಗಳನ್ನು ಅಂತೆಯೇ ಹಿಂಸಾತ್ಮಕ ಕ್ರೂರ ಆಚರಣೆಗಳನ್ನು ಒಪ್ಪಿಕೊಳ್ಳುವುದು ಸಾಧ್ಯವಿಲ್ಲ.

'ಮತಾಂತರ ನಿಷೇಧ'ದ ಬಗ್ಗೆ ತಾವು ಪ್ರಸ್ತಾಪಿಸಿದ್ದೀರಿ. ಒತ್ತಾಯದ ಮತ್ತು ಆಮಿಷದ ಮತಾಂತರವನ್ನು ನಾನು ಖಂಡಿಸುತ್ತೇನೆ. ಬಲಾತ್ಕಾರದ ಹಾಗೂ ಆಮಿಷದ ಮತಾಂತರವನ್ನು ನಿಷೇಧಿಸುವುದಾದರೆ, ಅದಕ್ಕೆ ನನ್ನ ಬೆಂಬಲವೂ ಇದೆ. ಈಗಿರುವ ಕಾನೂನಿನಲ್ಲೇ ಈ ಅಂಶ ಗಳಿವೆ. ಆದರೆ ಸ್ವಯಂ ಇಚ್ಛೆಯಿಂದ, ತಮ್ಮ ವಿಮೋಚನೆಗಾಗಿ ಮತಾಂತರ ಆಗುವುದಾದರೆ ಅದಕ್ಕೆ ನನ್ನ ಪೂರ್ಣ ಸಹಮತವಿದೆ. ಭಾರತದ ಬಹುಪಾಲು ಧರ್ಮಗಳು ಮತಾಂತರಿತ ಧರ್ಮಗಳು. ನಿದರ್ಶನಕ್ಕೆ ನಾನು ಪ್ರತಿನಿಧಿಸುವ ಶಿವಧರ್ಮ ಕರ್ನಾಟಕದಲ್ಲಿ ಬಹು ಸಂಖ್ಯಾತರ ಧರ್ಮವಾಗಿರುವುದಕ್ಕೆ ಕಾರಣ ಮತಾಂತರ ಎಂಬುದನ್ನು ನಾನು ಮರೆತಿಲ್ಲ. ವೈದಿಕ ಧರ್ಮಕ್ಕೆ ಮತಾಂತರವಾಗಲು ಅವಕಾಶವಿಲ್ಲವೆಂದ ಮಾತ್ರಕ್ಕೆ ಎಲ್ಲ ಧರ್ಮಗಳನ್ನು ಸರಿಯಾದ ಮಾರ್ಗದಲ್ಲಿ ಬೆಳೆಯುವುದನ್ನು ಕಂಡು ಕರುಬುವುದು ಸೂಕ್ತವಲ್ಲ. ಭಾರತದ ಸಂದರ್ಭಕ್ಕೆ ಅನ್ವಯಿಸಿ ಹೇಳುವುದಾದರೆ ಮತಾಂತರಕ್ಕೆ ಮೇಲ್ಜಾತಿಗಳ ಶೋಷಣೆ, ಪುರೋಹಿತರ ದಬ್ಬಾಳಿಕೆ ಹೀಗೆ ಹಲವು ಕಾರಣಗಳಿದ್ದು, ಇಂಥ ಗಂಭೀರ ಪರಿಸ್ಥಿತಿಯನ್ನು ಅರ್ಥಮಾಡಿಕೊಳ್ಳಲು ಬೇಕಾದ ಮಾನವೀಯ ಅನುಕಂಪ ಮತ್ತು ಪ್ರಾಂಜಲ ಮನಸ್ಸು ಮೇಲ್ಜಾತಿಯವರಿಗೆ ಇಲ್ಲ

*ಮಾರ್ಚ್ ೨೦೧೨ರ ಸಂಚಿಕೆಯ ಮುಖಪುಟದ ಚಿತ್ರ ಶ್ರೀ. ರಾಜೇಶ ನಾಯಕ್ ಅವರು ಕಳಿಸಿದ್ದುದು. ಅದನ್ನು ಮುದ್ರಿಸಿಕೊಟ್ಟ ಸ್ಟುಡಿಯೋ ಹೆಸರನ್ನು ತಪ್ಪಾಗಿ ಛಾಯಾಚಿತ್ರಕಾರರ ಹೆಸರೆಂದು ನಮೂದಿಸಿದ್ದಕ್ಕೆ ಕ್ಷಮೆ ಇರಲಿ.*

**— ಸಂ.**

ಎನ್ನುವುದು ಕಟುವಾದರೂ ವಾಸ್ತವ ವಿಚಾರ.

''ಪರಿಶಿಷ್ಟ ಜಾತಿಯಲ್ಲಿ ಎಡಗೈ-ಬಲಗೈ ಎಂಬ ಭೇದ ನಿವಾರಣೆ ಆಗಬೇಡವೆ?'' – ಎಂದು ಕೇಳಿದ್ದೀರಿ. ಇನ್ನೂ ಕ್ರೂರವಾದ ಅಸ್ಪೃಶ್ಯತೆಯ ಬಗ್ಗೆ, ಜಾತಿ, ವರ್ಗ, ಲಿಂಗ ತಾರತಮ್ಯದ ಬಗ್ಗೆ, ತಾವು ಯೋಚಿಸದಿರುವುದಕ್ಕೆ ನನಗೆ ವಿಷಾದವಾಗುತ್ತಿದೆ. ಪರಿಶಿಷ್ಟ ಜಾತಿಗಳು ಮಾತ್ರವಲ್ಲ, ಎಲ್ಲ ಜಾತಿಗಳ ಮಧ್ಯೆಯೂ ಇರುವಂಥ ತಾರತಮ್ಯವನ್ನು ನಾನು ವಿರೋಧಿಸುತ್ತೇನೆ. ಪರಿಶಿಷ್ಟರ ಬಗ್ಗೆ ನಿಜವಾದ ಕಾಳಜಿ ಇಲ್ಲದೆ ಅವರ ಎಡಗೈ ಬಲಗೈ ವಿಚಾರವನ್ನು ಮಾತ್ರ ಎತ್ತಿಹೇಳುವ ಸಂಕುಚಿತ ಮನೋಭಾವದ ಬಗ್ಗೆಯೂ ನಾನು ಗಮನಿಸಿದ್ದೇನೆ.

ಸಂವಿಧಾನವನ್ನು ಉಲ್ಲಂಘಿಸುವವರನ್ನು ಉಪಾಯ ದಿಂದ ಸರಿದಾರಿಗೆ ತರಬೇಕೆಂಬ ತಮ್ಮ ಮಾತು ನನಗೆ ಒಪ್ಪಿಗೆಯಿಲ್ಲ. ಸ್ವತಂತ್ರ ಭಾರತದಲ್ಲಿ ಸಂವಿಧಾನವೇ ಪರಮೋಚ್ಚ. ಸಂವಿಧಾನವನ್ನು ಉಲ್ಲಂಘಿಸುವವರಿಗೆ ಕಾನೂನಿನ ಪ್ರಕಾರ ಶಿಕ್ಷೆಯಾಗಬೇಕೇ ಹೊರತು ಉಪಾಯವಾಗಿ ಅವರನ್ನು ಮನವೊಲಿಸುವ ಅಗತ್ಯವಿಲ್ಲ ಎಂಬುದು ನನ್ನ ದೃಢವಾದ ಅಭಿಪ್ರಾಯ.

*ಬೆಂಗಳೂರು* **ವೀರಭದ್ರ ಚನ್ನಮಲ್ಲ ಸ್ವಾಮೀಜಿ**

### ಉತ್ತರ ಪ್ರದೇಶ ಚುನಾವಣೆ ಮತ್ತು ಪ್ರಾಂತೀಯತೆ

ಉತ್ತರ ಪ್ರದೇಶದ ಚುನಾವಣೆಯಲ್ಲಿ ಹಿಂದೆ ಇಂಗ್ಲಿಷ್ ಮತ್ತು ಕಂಪ್ಯೂಟರ್ ವಿರೋಧಿ ಎಂದು ಹೆಸರು ಪಡೆದ ಸಮಾಜವಾದಿ ಪಕ್ಷ ತನ್ನ ಸ್ವಂತ ಬಲದ ಮೇಲೆ ಅಧಿಕಾರಕ್ಕೆ ಬಂದಿದೆ. ರಾಷ್ಟ್ರೀಯ ಪಕ್ಷಗಳಾದ ಕಾಂಗ್ರೆಸ್ ಮತ್ತು ಬಿಜೆಪಿ ಬಲಹೀನವಾಗಿವೆ ಎಂದೇ ಸಾಮಾನ್ಯವಾಗಿ ವ್ಯಾಖ್ಯಾನಿಸಲಾಗುತ್ತಿದೆ. ಸಹಜ ವಾಗಿಯೇ ಬಿಜೆಪಿ ಇದನ್ನು ಕಾಂಗ್ರೆಸ್ ವಿರೋಧಿ ಅಲೆ ಎಂದು ಭಾವಿಸಿದೆ. ಆದರೆ ವಾಸ್ತವದಲ್ಲಿ ಇದು ಕೇಂದ್ರದಲ್ಲಿನ ಶಕ್ತಿಪಲ್ಲಟವಾಗಿ ರಾಜ್ಯಗಳತ್ತ ಸರಿಯುವ ಸೂಚನೆಯೇ ಎಂಬ ಅನುಮಾನ ಯಾರನ್ನಾದರೂ ಕಾಡಬಹುದು. ಈ ಚುನಾವಣೆ ನಡೆಯುತ್ತಿರುವಾಗಲೇ ರಾಜ್ಯ ಅಧಿಕಾರಗಳ ಬಗೆಗೆ ದೊಡ್ಡದೊಂದು ಚರ್ಚೆ ನಡೆದು ರಾಷ್ಟ್ರೀಯ ಭಯೋತ್ಪಾದನಾ ನಿಗ್ರಹ ಕೇಂದ್ರದ (ಎನ್‌ಸಿಟಿಸಿ) ಬಗೆಗಿನ ಪ್ರಸ್ತಾಪ ಹಲವು ಅಡ್ಡಂಕಿಗಳನ್ನು ಎದುರಿಸುತ್ತಿದೆ. ಇದುವರೆಗೂ ಕೇಂದ್ರೀಕರಣದ ಪರವಾಗಿದ್ದ ಬಿಜೆಪಿಗೂ ಈ ಶಕ್ತಿ ಪಲ್ಲಟವಾಗುವುದರ ಬಗೆಗೆ ಅನುಮಾನ ಉಂಟಾದುದೇ ಅದರ ರಾಜ್ಯ ಪರ ಬದಲಾದ ನಿಲುವಿಗೆ ಕಾರಣವಾಗಿರ ಬಹುದು. ಈ ಬಗೆಗೆ ಹಿಂದಿನಂತೆ ಎಡಪಂಥೀಯರು ಮೂರನೆಯ ಶಕ್ತಿಯ ಬಗೆಗೆ ತಕ್ಷಣ ಆಸಕ್ತಿ ವಹಿಸಿ ಮಾತನಾಡಿಲ್ಲ. ಬದಲೀ ನೀತಿಗಳಿಗೆ (ಕೇವಲ ಆರ್ಥಿಕ ನೀತಿ?) ಒತ್ತುಕೊಡುವ ಅಗತ್ಯದೆಡೆ ಅವರು ಒಲಿಯ ಬಹುದು. ಹಾಗೆಯೆ ಹಿಂದೆ ಇದರಲ್ಲಿ ಪ್ರಮುಖ ಪಾತ್ರ ವಹಿಸಿದ ಸಮಾಜವಾದಿ ಪಕ್ಷದ ಮುಲಾಯಂ ಸಿಂಗ್ ಯಾದವ್ ಸಹ ತಕ್ಷಣ ಏನಾದರೂ ಹೇಳುವುದರ ಬಗೆಗೆ ಹಿಂಜರಿಯುತ್ತಿದ್ದಾರೆ. ಇದು ಅವರ ಹೆಚ್ಚಿದ ರಾಜಕೀಯ ಪಕ್ವತೆಯೋ ಅಥವಾ ಅವಕಾಶ ವಾದವೋ ಎಂದು ಈಗಲೇ ಹೇಳುವುದು ಕಷ್ಟ.

ಮುಂದಿನ ೨೦೧೪ರ ಸಾರ್ವತ್ರಿಕ ಚುನಾವಣೆಯ ಬಗ್ಗೆ ಏನನ್ನು ನಾವು ಊಹಿಸಬಹುದು ಎಂಬುದರ ಮುನ್ಸೂಚನೆ ಈಗಾಗಲೇ ನಮಗೆ ದೊರೆಯ ತೊಡಗಿದ್ದು, ಪ್ರಾಂತಿಯ ಪಕ್ಷಗಳ ಹೆಚ್ಚುತ್ತಿರುವ ಬಲದ ಸೂಚನೆಗಳು ನಿಚ್ಚಳವಾಗಿದೆ. ಒಟ್ಟಾರೆ ೫೪೩ ಪಾರ್ಲಿಮೆಂಟ್ ಸೀಟುಗಳಲ್ಲಿ ಸುಮಾರು ೨೫೦ಕ್ಕೂ ಕಡಿಮೆ ಸೀಟುಗಳಲ್ಲಿ ಅಥವಾ ಅರ್ಧಕ್ಕಿಂತ ಕಡಿಮೆ ಸೀಟುಗಳಲ್ಲಿಯಷ್ಟೇ ಕಾಂಗ್ರೆಸ್ ಮತ್ತು ಪ್ರಮುಖ ವಿರೋಧಿ ಪಕ್ಷವಾದ ಬಿಜೆಪಿ ನಡುವೆ ನೇರ ಹಣಾಹಣಿ ಇರುವ ಸಾಧ್ಯತೆ ಇದೆ. (ಮಧ್ಯಪ್ರದೇಶ - ೨೯, ಗುಜರಾತ್ - ೨೬, ರಾಜಸ್ಥಾನ - ೨೫, ಛತ್ತೀಸ್‌ಘರ್ - ೧೧, ಹರಿಯಾಣ - ೧೦, ನವದೆಹಲಿ - ೭, ಉತ್ತರಖಂಡ - ೫ ಮತ್ತು ಕರ್ನಾಟಕ - ೨೮; ಒಟ್ಟು ಮೊತ್ತ ೧೪೧, ಇಲ್ಲಿ ಕೇವಲ ಕಾಂಗ್ರೆಸ್ ಮತ್ತು ಬಿಜೆಪಿ ಮಾತ್ರ ಇದ್ದು. ಮಹಾರಾಷ್ಟ್ರ - ೪೮, ಜಾರ್ಖಂಡ್ - ೧೪, ಪಂಜಾಬ್ - ೧೩. ಹೀಗೆ ಒಟ್ಟು ೭೫ ಸೀಟುಗಳಲ್ಲಿ ಬಿಜೆಪಿ ಕಾಂಗ್ರೆಸ್‌ಅನ್ನು ಎದುರಿಸಲು ತನ್ನ ಗೆಳೆಯರನ್ನು ಅವಲಂಬಿಸಿದೆ.)

ಈ ಪ್ರಮುಖ ರಾಷ್ಟ್ರೀಯ ಪಕ್ಷಗಳ ಕೆಲವು ಗೆಳೆಯರು (ಉದಾಹರಣೆಗೆ ಜೆಡಿ-ಯು ಬಿಜೆಪಿ ಯಿಂದ ಅಥವಾ ಬಂಗಾಳದ ಟಿ.ಎಂ.ಸಿ. ಕಾಂಗ್ರೆಸ್ ನಿಂದ) ಸ್ವತಂತ್ರರಾಗಲು ಸಿದ್ಧರಿದ್ದಂತೆ ಕಾಣುತ್ತದೆ. (ಕೆಲವೆಡೆ ಪ್ರಾಂತೀಯತೆ ಬೇರುಗಳು ಗಟ್ಟಿಯಲ್ಲ. ಉದಾಹರಣೆಗೆ ಕರ್ನಾಟಕದಲ್ಲಿ ಪಾರ್ಲಿಮೆಂಟ್ ಚುನಾವಣೆಯಲ್ಲಿ ಪ್ರಾಂತೀಯ ಪಕ್ಷಗಳು ಗೆದ್ದಿಲ್ಲ. ಮುಂದೆ ಇಂತಹ ಸ್ಥಿತಿ ಬದಲಾಗಬಹುದೇ?) ಮೇಲ್ನೋಟಕ್ಕೆ ಬಿಜೆಪಿ ಅಥವಾ ಕಾಂಗ್ರೆಸ್ ಮಹತ್ವ ವಿಲ್ಲದ ರಾಜ್ಯಗಳು ಹೆಚ್ಚಾಗುತ್ತಿವೆ ಎಂದೇ ಅನಿಸುತ್ತದೆ (ಉತ್ತರ ಪ್ರದೇಶ - ೮೦, ಪಶ್ಚಿಮ ಬಂಗಾಳ - ೪೨, ಬಿಹಾರ - ೪೦, ತಮಿಳುನಾಡು - ೩೯, ಜಮ್ಮು ಮತ್ತು ಕಾಶ್ಮೀರ - ೬ ಒಟ್ಟು ಮೊತ್ತ - ೨೦೭). ಕಾಂಗ್ರೆಸ್ ಇತರರನ್ನು ನೂರಕ್ಕೂ ತುಸು ಕಡಿಮೆ ಸೀಟುಗಳಲ್ಲಿ ಎದುರಿಸುತ್ತಿದ್ದು ಅಲ್ಲಿ ಬಿಜೆಪಿ ಬಹುತೇಕ ಇಲ್ಲ (ಆಂಧ್ರಪ್ರದೇಶ - ೪೨, ಒಡಿಸ್ಸಾ - ೨೧, ಕೇರಳ - ೨೦, ಅಸ್ಸಾಮ್ - ೧೪, ಮೊತ್ತ - ೯೭). ಹೀಗಾಗಿ ಸ್ವತಃ ಮೆಜಾರಿಟಿ ಪಡೆಯಲು ಬಿಜೆಪಿ ಅಥವಾ ಕಾಂಗ್ರೆಸ್‌ಗೆ ಸಾಧ್ಯವಾಗುತ್ತದೆಯೇ ಎಂಬುದು ಪ್ರಶ್ನೆಯಾಗಿಯೇ ಉಳಿಯುತ್ತದೆ. ನೆನಪಿರಲಿ, ಬದಲಾಗುತ್ತಿರುವ ಸನ್ನಿವೇಶದ ಚಿತ್ರಣದ ಪ್ರಯತ್ನವಿದು. ಮುಂದೆ ಕರ್ನಾಟಕ ಭಾಗಶಃ ಆದರೂ ಪ್ರಾಂತೀಯತೆಯ ಕಡೆ ಒಲಿಯಬಹುದು ಅಥವಾ ಕಾಂಗ್ರೆಸ್‌ನ ಸ್ಥಿತಿ ಆಂಧ್ರ ಪ್ರದೇಶದಲ್ಲಿ ಇನ್ನೂ ಬಲಹೀನವಾಗಬಹುದು. ಹಿಂದೆ ಒಡಿಸ್ಸಾದಲ್ಲಿ ಬಿಜು ಜನತಾದಳ ಎನ್‌ಡಿಎಯಿಂದ ಹೊರನಡೆದಾಗ ಬಿಜೆಪಿ ಅಸಹಾಯಕವಾಗುವುದು ಅಥವಾ ಆಂಧ್ರಪ್ರದೇಶದ ಪ್ರಾಂತೀಯ ನಾಯಕ ರೊಬ್ಬರ ಕುಡಿಯ ಬಂಡಾಯ ಎದುರಿಸಲು (ಜಗನ್‌ಮೋಹನ್ ರೆಡ್ಡಿ) ಇನ್ನೊಬ್ಬ ಪ್ರಾಂತೀಯ ನಾಯಕನನ್ನು (ಚಿರಂಜೀವಿ) ಮೊರೆ ಹೋಗಬೇಕಾದ ಶೋಚನೀಯ ಸ್ಥಿತಿ ಕಾಂಗ್ರೆಸ್ ಎದುರಿಸುತ್ತಿರುವುದು ಈ ಶಕ್ತಿ ಕೇಂದ್ರ ಬದಲಾಗುತ್ತಿರುವ ಸೂಚನೆ ಇರಬಹುದು. ಇದರ ಅರ್ಥ ಪ್ರಮುಖ ರಾಷ್ಟ್ರೀಯ ಪಕ್ಷಗಳಾದ ಕಾಂಗ್ರೆಸ್, ಬಿಜೆಪಿ ತಮ್ಮ ಅಸ್ತಿತ್ವವನ್ನು ಪೂರ್ಣವಾಗಿ ಕಳೆದುಕೊಂಡಿವೆ ಎಂದಲ್ಲ. ಬಹುಶಃ ಮುಂದಿನ ಸಾರ್ವತ್ರಿಕ ಚುನಾವಣೆಯಲ್ಲಿ ಎರಡರಲ್ಲಿ ಒಂದು ಅಧಿಕಾರದೊಂದಿಗೆ ನಂಟು ಉಳಿಸಿಕೊಂಡಿರುವ ಸಾಧ್ಯತೆಯೇ ಹೆಚ್ಚು. ಆದರೆ, ಈ ಬದಲಾವಣೆಯ ದಿಕ್ಕು, ದೆಸೆ ಮಾತ್ರ ಪ್ರಾಂತೀಯತೆಯ ಕಡೆಗೆ ತುಡಿಯುತ್ತದೆ!

ಇದು ಎರಡು ಪ್ರಶ್ನೆಗಳನ್ನು ಮುನ್ನೆಲೆಗೆ ತರುತ್ತದೆ. ಒಂದು, ಈ ಸ್ಥಳೀಯತೆ ಅಥವಾ ಪ್ರಾಂತೀಯತೆ ಅನಿವಾರ್ಯವೇ? ಎರಡು, ಹೋಗುತ್ತಿರುವ ದಿಕ್ಕು ಸರಿ ಇದೆಯೇ? ಇದು ಮೌಲ್ಯ ನಿರ್ಧಾರದ ಅಂಶ. ಈ ಕಾರಣಕ್ಕೆ ಈ ವಾಸ್ತವವನ್ನು ಗುರುತಿಸುತ್ತಲೇ, ಈ ಪ್ರಾಂತೀಯ ಪಕ್ಷಗಳ ಪರವಾದ ವಾಲುವಿಕೆ ಪೂರ್ಣವಲ್ಲ ಎಂದು ದಿನೇಶ್ ಅಮೀನ್‌ಮಟ್ಟು ಸರಿಯಾಗಿಯೇ ಗುರುತಿಸುತ್ತಾರೆ (ಪ್ರಜಾವಾಣಿ, ೧೨ ಮಾರ್ಚ್). ಪ್ರಾಂತೀಯ ಶಕ್ತಿಗಳು ಬಲವಾಗುವುದು ಅನಿವಾರ್ಯವೇ ಆದರಿಲ್ಲಿ ಪ್ರಾಂತೀಯತೆಗೆ ಯಾವುದಾದರೂ ಮಾನದಂಡ ಇದೆಯೇ? ಈಗಿರುವ ಪಕ್ಷಗಳು ಇನ್ನೂ ಸಣ್ಣ ಪಕ್ಷಗಳಾಗಿ ಏಕೆ ಒಡೆಯಬಾರದು (ಉದಾಹರಣೆ : ಕರ್ನಾಟಕದಲ್ಲಿ ಜಾತಿಗಳಿಗೊಂದು ಪಕ್ಷ. ಲಿಂಗಾಯತರಿಗೆ ಒಂದು. ಒಕ್ಕಲಿಗರಿಗೆ ಒಂದು ಏಕೆ ಪ್ರಾರಂಭಿಸಬಾರದು? ಅಷ್ಟೇಕೆ, ಲಿಂಗಾಯತರಲ್ಲಿ ಬಣಜಿಗರಿಗೆ, ಪಂಚಮಸಾಲಿ ಗಳಿಗೆ ಬೇರೆ ಬೇರೆ ಸ್ವಾಮಿಗಳಿದ್ದರೆ ಸಾಕೇ, ಪಕ್ಷಗಳೂ ಬೇಡವೇ?) ಅಥವಾ ಆಂಧ್ರದ ತೆಲಂಗಾಣ ಪ್ರಶ್ನೆಯಂತೆ ಉತ್ತರ ಕರ್ನಾಟಕ ಪ್ರಶ್ನೆಯನ್ನು ಎತ್ತುವು ದರಲ್ಲಿ ತಪ್ಪೇನಿದೆ? ಬಾಂಬೆ ಕರ್ನಾಟಕ, ಹೈದ್ರಾಬಾದ್ ಕರ್ನಾಟಕ ಬೇರೆ ಬೇರೆ ರಾಜ್ಯಗಳೇಕಾಗಬಾರದು?

ಶಕ್ತಿಗುಂದಿದ ಕೇಂದ್ರದ ಪರಿಣಾಮವಾಗಿ ಶಕ್ತಿಯುತ ರಾಜ್ಯಗಳು ಹೊರಹೊಮ್ಮಿದಲ್ಲಿ, ರಾಜ್ಯದಲ್ಲಿ ಅಧಿಕಾರ ಹಿಡಿದ ಪಕ್ಷಗಳು (ಅವು ರಾಷ್ಟ್ರೀಯ ಪಕ್ಷಗಳೂ ಆಗಿರಬಹುದು) ಪ್ರಾಂತೀಯ ತತ್ವ ವೊಂದನ್ನು ಒಪ್ಪಿಕೊಂಡು ಸ್ಥಳೀಯ ಬೆಳವಣಿಗೆ, ಅಧಿಕಾರ ವಿಕೇಂದ್ರೀಕರಣ, ಪ್ರಾಂತೀಯ ಭಾಷೆಗಳ ಬೆಳವಣಿಗೆಗೆ ಪೂರಕವಾಗಿ ಪ್ರಜಾಪ್ರಭುತ್ವವನ್ನು ನಿಜಾರ್ಥದಲ್ಲಿ ಆಳಗೊಳಿಸಲೂಬಹುದು. ಅಥವಾ ತೀವ್ರ ಜನವಿರೋಧಿ, ಪ್ರಜಾಪ್ರಭುತ್ವ ವಿರೋಧಿ ಕೆಲಸಗಳನ್ನು ಮಾಡುತ್ತಲೇ ಅದು ರಾಜ್ಯಗಳ ಅಧಿಕಾರ ಎಂದು ಸಮರ್ಥಿಸಿಕೊಳ್ಳಬಹುದು ಸಹ. (ಉದಾಹರಣೆಗೆ ದಲಿತರ/ಅಲ್ಪಸಂಖ್ಯಾತರ ಮೇಲಿನ ಹಲ್ಲೆಯನ್ನು ಕಾನೂನು ಮತ್ತು ವ್ಯವಸ್ಥೆ ರಾಜ್ಯದ ಅಧಿಕಾರವೆಂತಲೂ ಅಥವಾ ರಾಜ್ಯದ ಸಂಪತ್ತಿನ ಲೂಟಿಯನ್ನು ತನಗೆ ಸಂದ ಜನಾದೇಶವೆಂತಲೋ ವಾದಿಸಬಹುದು).

ಪ್ರಗತಿಪರರಿಗೆ ಮತ್ತು ಎಡಪಂಥೀಯರಿಗೆ ಈ ಬಗೆಗೆ ನಿಚ್ಚಳ ನಿಲುವು ಇದ್ದಂತಿಲ್ಲ. ಉತ್ತರ ಪ್ರದೇಶದ ಸಮಾಜವಾದಿ ಪಕ್ಷದ ತಂದೆ ಮಕ್ಕಳ ಬಗೆಗೆ ದಿನೇಶ್ ಅಮೀನ್‌ಮಟ್ಟು ಅವರು ಹೇಳುವಾಗ ಕರ್ನಾಟಕದ ತಂದೆ-ಮಕ್ಕಳೂ ಮನಸ್ಸಿನಲ್ಲಿರಬಹುದು. ವಾಸ್ತವದಲ್ಲಿ ಮಟ್ಟು ಅವರು ಪ್ರಾಂತೀಯತೆಯನ್ನು ಕೇವಲ ವಂಶ ಪಾರಂಪರ್ಯದ ನೆಲೆಗಷ್ಟೇ ಒತ್ತುಕೊಟ್ಟು ವಿಮರ್ಶಿಸಿ ನೋಡುವುದು ನಮ್ಮನ್ನು ದಾರಿತಪ್ಪಿಸಲೂಬಹುದು. ಯಾವುದೇ ಪ್ರಾಂತೀಯ ತತ್ವ ಇಲ್ಲದಿದ್ದಲ್ಲಿ ಜಾತಿ ಬಣಗಳು ಪ್ರಜಾಪ್ರಭುತ್ವ ಪರ ನೆಲೆಯನ್ನು ಲಪಟಾಯಿಸಲು ಅವಕಾಶ ಮಾಡಿಕೊಟ್ಟಂತೆ ಆಗುತ್ತದೆ ಎಂದೆನಿಸುತ್ತದೆ. ಕನಿಷ್ಠ ಕಮ್ಯುನಿಸ್ಟರ ಇತಿಹಾಸದಲ್ಲಿ ಯಾದರೂ ಇಂತಹ ಪ್ರಾಂತೀಯತೆಗೆ ತಾತ್ವಿಕ ನೆಲೆ ಉಂಟೆ? ಇತಿಹಾಸ ಹೌದೆಂದು ಹೇಳುತ್ತದೆ. ಉದಾಹರಣೆಗೆ, ರಜನಿ ಪಾಮೆ ದತ್ತರು ತಮ್ಮ 'ಇಂಡಿಯಾ ಟುಡೆ'ಯಲ್ಲಿ ಭಾಷಿಕ ರಾಷ್ಟ್ರೀಯತೆಗಳ ಬಗೆಗೆ ಹೇಳುತ್ತಾ ಭಾರತ, ಪಾಕಿಸ್ತಾನ ರಾಷ್ಟ್ರಗಳಲ್ಲವೆಂದು ವಾದಿಸುತ್ತಾರೆ. ಅವರು ಗುರುತಿಸಿದ ಭಾರತ - ಪಾಕಿಸ್ತಾನದ ಹದಿನಾಲ್ಕು ಪ್ರಮುಖ ರಾಷ್ಟ್ರೀಯತೆಗಳಲ್ಲಿ ಕನ್ನಡ ತಮಿಳು ರಾಷ್ಟ್ರೀಯತೆಗಳು ಸಹ ಸೇರಿವೆ. (ಇಂಡಿಯಾ ಟುಡೆ, ಪು ೪೭೮). ಎಡಪಕ್ಷಗಳಲ್ಲಿ ಸಿಪಿಎಂ ಈ ಬಗೆಗೆ ಚರ್ಚಿಸುತ್ತಿತ್ತು. ಆದರೆ ಇತ್ತೀಚೆಗೆ ಆಸಕ್ತಿ ಕಳೆದು ಕೊಂಡಂತೆ ಕಾಣುತ್ತದೆ; ನೋಡಿ, ಸೋಶಿಯಲ್ ಸೈಂಟಿಸ್ಟ್ ಆಗಸ್ಟ್ ೧೯೭೫ ಮತ್ತು ಸೆಪ್ಟಂಬರ್- ಅಕ್ಟೋಬರ್ ೧೯೯೯. ಇಂತಹ ಸಾಧ್ಯತೆಯನ್ನು ಪ್ರಗತಿಪರರು ಪರಿಶೀಲಿಸಬೇಕಾದ ಅಗತ್ಯವಿದೆಯೇ ಅಥವಾ ರಾಷ್ಟ್ರೀಯ ಪಕ್ಷಗಳ ಈ ವಿಘಟನೆಯ ಬಗೆಗೆ ಚಿಂತಿತರಾಗಬೇಕೆ? ಸದ್ಯಕ್ಕೆ ಎಡಪಕ್ಷಗಳು ಈ ರಾಷ್ಟ್ರೀಯ ಪಕ್ಷಗಳು ಮೂಲೆ ಗೊತ್ತಲ್ಪಡುತ್ತಿರುವುದರ ಬಗೆಗೆ ಸಂತಸಪಡುತ್ತಿವೆ ಎಂದೇ ಕಾಣುತ್ತದೆ.

ಈ ಹಿನ್ನೆಲೆಯಲ್ಲಿ ಲೆನಿನ್ ಸಮಾಜವಾದಿ ಕರ್ತವ್ಯದ ಬಗೆಗಿನ ವ್ಯಾಖ್ಯಾನ ಅರ್ಥ ಪಡೆಯುತ್ತದೆ. 'ಇಂಗ್ಲಿಷ್ ಮತ್ತು ರಶಿಯನ್ ಸಮಾಜವಾದಿಗಳ ಸಾಮಾನ್ಯ ಬಲಹೀನತೆಯಾದ' ಬಲವಾದ ರಾಷ್ಟ್ರೀಯತೆಗಳ ಪರವಾದ ನಿಲುವುಗಳನ್ನು ತಿರಸ್ಕರಿಸುವ ಲೆನಿನ್ 'ಬಲಹೀನ ರಾಷ್ಟ್ರೀಯತೆಗಳ ಬಗೆಗಿನ ಸಮಾಜವಾದಿ ಕರ್ತವ್ಯಗಳ' ಕಡೆ ಬೊಟ್ಟುಮಾಡಿ ತೋರಿಸುತ್ತಾರೆ. ಇಲ್ಲಿ ನಾವು ಬಹುಶಃ ಲೆನಿನ್ ಅವರ ಈ ನಿಲುವಿನಲ್ಲಿನ ಇಂಗ್ಲಿಷ್ ಮತ್ತು ರಶಿಯನ್ ರಾಷ್ಟ್ರೀಯತೆಗಳ ಬದಲು ಇಂಗ್ಲಿಷ್ ಮತ್ತು ಹಿಂದಿ (ಅಥವಾ ಸಂಸ್ಕೃತ) ರಾಷ್ಟ್ರೀಯತೆಗಳಾಗಿ ಓದಿಕೊಳ್ಳಬೇಕಾಗಬಹುದು. ಆದರೆ ಇಲ್ಲಿ ಇನ್ನೊಂದು ಎಚ್ಚರಿಕೆಯೂ ಅಗತ್ಯ. ಹಿಂದಿಯನ್ನು ವಿರೋಧಿಸುವ ನೆಪದಲ್ಲಿ ಇಂಗ್ಲಿಷ್ ಪರ ಸಂಕಥನಕ್ಕೆ ನಾವು ಬಲಿಯಾಗಬಾರದಷ್ಟೆ. ಬದಲಾಗಿ ಹಿಂದಿಯನ್ನು ಭಾರತೀಯ ಉಪಖಂಡದ ಒಂದು ಕೇಂದ್ರ ಭಾಷೆಯಾಗಿ ಬೆಳೆಸಿ ಕೊಳ್ಳುವಲ್ಲಿ ಪ್ರಾಂತೀಯ ಭಾಷೆಗಳಿಗೆ ಹಲವು ಲಾಭಗಳಿವೆ. ಒಟ್ಟಾರೆ ಈ ಬಗೆಗೆ ಸಾಧ್ಯತೆಗಳ ಬಗೆಗೆ ಮರು ಪರಿಶೀಲಿಸುವ ಅಗತ್ಯ ಎಂತಾದರೂ ಇದೆ ಎನ್ನಿಸುವುದಲ್ಲವೇ? ಈ ಬಗೆಗಿನ ತಪ್ಪು ನಿಲುವು ಪ್ರಗತಿಪರ ಶಕ್ತಿಗಳು ಮತ್ತು ಭಾರತೀಯ ಕಮ್ಯುನಿಸ್ಟರನ್ನು ಇನ್ನೂ ಹಲವು ದಶಕಗಳ ಕಾಲ ಜನತೆಯಿಂದ ದೂರ ಮಾಡಬಹುದು.

ಕೊಪ್ಪಳ **ಬಿ. ಎಂ. ಪ್ರದೀಪ್**

### ಭಾರತದಲ್ಲಿ ಮತ ಧರ್ಮ ಇತ್ಯಾದಿ

ಕಳೆದ ಸುಮಾರು ಎರಡೂವರೆ ದಶಕಗಳ ಹಿಂದಿನ ಮತ್ತು ಈಗಿನ ಭಾರತದ ಸಾಮಾಜಿಕ ಸಂದರ್ಭವನ್ನು ಹೋಲಿಸುವಾಗ ಸಾಮಾಜಿಕರ ಚಿಂತನೆ ಮತ್ತು ಕ್ರಿಯೆಯಲ್ಲಿ ಅಂದಿನಿಂದ ಇಂದಿಗೆ ಆಗಿರುವ ಸಾಮಾಜಿಕ ವಿಕಾಸ ಏನು ಎನ್ನುವುದು ಈ ಹೊತ್ತು ನನ್ನ ಮುಂದೆ ಇರುವ ಪ್ರಶ್ನೆ. ವಿಕಾಸ ಎನ್ನುವ ಪದವನ್ನು ನಾವು ಬಳಸುವುದು ಯಾವಾಗಲೂ ಸಕಾರಾತ್ಮಕ ಬದಲಾವಣೆ ಎಂಬುದಾಗಿಯೇ ಹೊರತು ನಕಾರಾತ್ಮಕ ಬದಲಾವಣೆ ಎಂಬುದಾಗಿ ಅಲ್ಲ. ಈ ದೃಷ್ಟಿಯಿಂದ ನೋಡಿದಾಗ, ಆಗಿರುವ ಸಕಾರಾತ್ಮಕ ಸಾಮಾಜಿಕ ವಿಕಾಸವೇನೂ ಎದ್ದು ತೋರುತ್ತಿಲ್ಲ. ಬದಲಾವಣೆ ಲೋಕ ನಿಯಮ. ಆದ್ದರಿಂದ ಹೊರಗೆ ಕಾಣಿಸದಿದ್ದರೂ ಸಮಾಜದ ಒಳಗೆ ಬದಲಾವಣೆ ಆಗಿಯೇ ಆಗಿರುತ್ತದೆ ಮತ್ತು ಈ ಬದಲಾವಣೆ ಆರ್ಥಿಕ, ಸಾಂಸ್ಕೃತಿಕ ಮುಂತಾದ ಆಯಾಮಗಳಲ್ಲಿ ಆಗಿರುವ ಬದಲಾವಣೆಗಳೊಂದಿಗೇ ಆಗಿರುತ್ತದೆ ಎಂದು ತಿಳಿದುಕೊಳ್ಳಬೇಕಾಗುತ್ತದೆ. ಮುಖ್ಯ ವಿಷಯ, ಅದು ಎಷ್ಟು ಎನ್ನುವುದು ಮತ್ತು ಎಷ್ಟಾಗಿದ್ದರೆ ಚೆನ್ನಾಗಿತ್ತು, ಅಷ್ಟು ಯಾಕಾಗಲಿಲ್ಲ ಎನ್ನುವುದು. ಎರಡು ದಶಕಗಳಲ್ಲಿ ಬಹಳ ವಿಕಾಸ ಆಗಬಹುದಿತ್ತು. ಆಗದಿರಲು ಏನು ಕಾರಣ ಎನ್ನುವ ಯೋಚನೆ ಮಾಡಿದಾಗ ಸಿಗುವ ಕಾರಣಗಳು ಹೆಚ್ಚು ವಿಷಾದ ಉಂಟುಮಾಡುತ್ತವೆ. ಕಳೆದ ಎರಡು ದಶಕಗಳಲ್ಲಿ ವಿದ್ಯಾವಂತರ ಸಂಖ್ಯೆ ಹಲವು ಪಟ್ಟು ಜಾಸ್ತಿಯಾಗಿದೆ. ಆದರೆ ವಿಚಾರವಂತಿಕೆ ಮತ್ತು ಸ್ವಂತಿಕೆ ಕಡಿಮೆಯಾಗಿದೆ. ಮೂಢನಂಬಿಕೆಯುಳ್ಳ ಜನರ ಸಂಖ್ಯೆಯಲ್ಲಿ ಕಡಿಮೆಯಾದಂತೆ ತೋರುತ್ತದೆ. ಆದರೆ ವಿಚಾರ ಮಾಡುವ ಗುಣ ಬೆಳೆಯದ್ದರಿಂದ ಕಂದಾಚಾರಗಳು ಮುಂದುವರಿದಿವೆ. ಮಾತ್ರವಲ್ಲ, ಹೊಸ ಹೊಸ ಕಂದಾಚಾರಗಳು ಹುಟ್ಟಿಕೊಂಡಿವೆ. ಕಂದಾಚಾರಗಳ ಸಂಖ್ಯೆ ಕೂಡ ಜಾಸ್ತಿಯಾಗಿದೆ. ಜೀವನ ಮಟ್ಟ ಏರುವುದರ ಜೊತೆಗೆ ಹಣ ಖರ್ಚು ಮಾಡಲು ಅವಕಾಶ ಕಲ್ಪಿಸುವ ಹೊಸ ಹೊಸ ಆಚಾರಗಳು ಹುಟ್ಟಿಕೊಳ್ಳುವುದು ಮತ್ತು ಹಳೆಯ ಆಚಾರಗಳು ಹೊಸ ಆಯಾಮಕ್ಕೆ ವಿಸ್ತಾರಗೊಳ್ಳುವುದು ನಮ್ಮ ದೇಶದ ಸಾಮಾಜಿಕ ಅವಲಕ್ಷಣ ಎನ್ನದೆ ವಿಧಿಯಿಲ್ಲ. ಯಾಕೆಂದರೆ, ಇದರಿಂದ ಯಾವುದೇ ಸಕಾರಾತ್ಮಕ ಬೆಳವಣಿಗೆಯಾಗಲಿ, 'ವಿಕಾಸ' ಎನ್ನುವುದಾಗಲಿ ಉಂಟಾಗುವುದಿಲ್ಲ. ಹೊಸದಾಗಿ ಗಳಿಸಿದ ಸಿರಿವಂತಿಕೆಯ ಪ್ರದರ್ಶನದ ಪಕ್ಕದಲ್ಲೇ ಹಳೆಯ ದಾರಿದ್ರ್ಯ ಮುಂದುವರಿಯುತ್ತದೆ. ಸಾಮಾಜಿಕ ಬದುಕಿನಲ್ಲಿ ಜಾತೀಯ ಭಾವನೆ ಕಡಿಮೆಯಾಗಿದೆ. ಆದರೆ ಹೊಸ ಹೊಸ ಜಾತಿ ಸಂಘಗಳೂ ಹುಟ್ಟಿಕೊಳ್ಳುತ್ತಿವೆ. ಜಾತಿ-ಮತಗಳ ಮೂಲಕ, ಲಾಂಛನಗಳ ಮೂಲಕ ಗುರುತಿಸಿಕೊಳ್ಳುವಿಕೆಗೆ ಹೆಚ್ಚು ಉತ್ತೇಜನ ನೀಡಲಾಗುತ್ತದೆ. ಇದರ ಹಿಂದೆ ಕೆಲಸ ಮಾಡುವುದು ಹಣ ಮತ್ತು ಹಣವನ್ನು ಉಪಯೋಗಿಸಿಕೊಂಡು ಮೆರೆಯಬೇಕೆಂಬ ಒಂದು ಸಣ್ಣ ಸಂಖ್ಯೆಯ ಮಂದಿಯ ಅವೈಚಾರಿಕ ದಾಹ. ಇದಕ್ಕೆ ಬಲಿಯಾಗುವುದು ಬಡವರು. ಆದರೆ ಈ ಅವೈಚಾರಿಕ ಸಾಂಘಿಕ ಬೆಳವಣಿಗೆ ಸಾಮಾಜಿಕ ಸಂಘರ್ಷಕ್ಕೆ ಕಾರಣ ವಾಗಬಹುದು. 'ಶ್ರೇಷ್ಠ' ಎಂದು ವ್ಯಕ್ತಿಗಳನ್ನು ಅವರ ಜಾತಿ-ಮತದ ಮೂಲಕ ಗುರುತಿಸಿ 'ನಮ್ಮವನು' ಎಂದು ಸನ್ಮಾನಿಸುವ 'ಆಚಾರಗಳು' ಈಗ ಅಧಿಕವಾಗಿವೆ. 'ಶ್ರೇಷ್ಠ' ಎಂದು ಗುರುತಿಸಿ ವಿಜ್ಞಾನಿಗಳು, ಲೇಖಕರು, ಕಲಾವಿದರು, ಸಮಾಜ ಸೇವಕರು ಮುಂತಾದವರನ್ನು 'ನಮ್ಮವನು' ಎಂದು ಗುರುತಿಸಿ ಸನ್ಮಾನಿಸುವುದು ಬಹಳ ಕೆಟ್ಟದ್ದು. ಈ ರೀತಿ ಅಧಿಕಾರಿಗಳನ್ನು, ಆಡಳಿತಗಾರರನ್ನು, ರಾಜಕಾರಣಿಗಳನ್ನು ಸನ್ಮಾನಿಸುವುದು ಇನ್ನೂ ಕೆಟ್ಟದ್ದು. ಇದು ಸೆಕ್ಯೂಲರ್ ವಿರೋಧಿ ಮಾತ್ರವಲ್ಲ, ಪ್ರಜಾತಂತ್ರ ವಿರೋಧಿ.

ಜೀವನ ಮಟ್ಟ ಮೇಲಕ್ಕೇರಿ, ಹೆಚ್ಚು ಹಣ ಗಳಿಕೆಯಾಗುತ್ತಿರುವುದೇನೋ ನಿಜ. ಆದರೆ ಅದರ ಸದ್ಬಳಕೆಯ ಬಗ್ಗೆ ಅರಿವು ಕಡಿಮೆ. ಆದ್ದರಿಂದಲೇ ಹೊಸ ಹೊಸ ಸಮಾರಂಭಗಳು, ಪೂಜೆಗಳು ಸೃಷ್ಟಿಯಾಗಿರುವುದು; ಮ್ಯಾರೇಜ್ ಇಂಡಸ್ಟ್ರಿ ಎಂಬ ಒಂದು ಉದ್ಯಮ ಉಂಟಾಗಿರುವುದು. ಶಿಕ್ಷಣ ಎಂದೋ ಇಂಡಸ್ಟ್ರಿ ಆಗಿಯಾಗಿದೆ. ಸಾಮಾಜಿಕರಲ್ಲಿ ಹಣದ ಸದ್ಬಳಕೆಯ ಬಗ್ಗೆ ಅರಿವು ಮೂಡದಿದ್ದರೆ ಇನ್ನೂ ಹಲವು ಹೊಸ ಇಂಡಸ್ಟ್ರಿಗಳು ಹುಟ್ಟಿಕೊಳ್ಳುತ್ತವೆ.

ಜೀವನ ಮಟ್ಟ ಏರಿದಂತೆಲ್ಲ, ಮನುಷ್ಯ ತನ್ನ ಬಗ್ಗೆ ಮಾತ್ರ, ತನ್ನ ಏಳಿಗೆಯ ಬಗ್ಗೆ ಮಾತ್ರ, ಯೋಚಿಸುವುದು ಅಧಿಕವಾಗುತ್ತಾ ನಡೆದಿದೆ. ಇತರರ ಸ್ಥಿತಿಯ ಬಗ್ಗೆ ಯೋಚನೆ ಇಲ್ಲ. ವಿದ್ಯೆ ಮತ್ತು ಜ್ಞಾನ ಧೈರ್ಯವನ್ನು ನೀಡಬೇಕು. ಆದರೆ ಅದು ನೀಡುತ್ತಿರುವುದು ಭಯ.

**ಪ್ರಕಟಣೆ**

ಸಾಹಿತಿ ಮಾಹಿತಿ ಕೋಶ ಭಾಗ - ೯ರ ಮುದ್ರಣ ಸಿದ್ಧತೆ ಮಾಡಲಾಗುತ್ತಿದೆ. ಒಂದಾದರೂ ಗ್ರಂಥ ಪ್ರಕಟವಾಗಿರುವ ದೇಶ-ವಿದೇಶಗಳ ಹಿರಿಯ, ಕಿರಿಯ, ಲೇಖಕರು ಮಾಹಿತಿ ಕಳುಹಿಸಬಹುದು. ಮಾಹಿತಿ ಕಳುಹಿಸಬಯಸುವ ಲೇಖಕರು ರೂ. ೫/- ಅಂಚೆ ಚೀಟಿ ಹಚ್ಚಿದ '೯ x ೪' ಆಕಾರದ ಸ್ವವಿಳಾಸದ ಕವರನ್ನು

**ಸಂಪಾದಕರು, ೫೩/೪ ಡಬ್ಲ್ಯೂ, ೨೩ನೇ ಅಡ್ಡರಸ್ತೆ, ಸೋಮೇಶ್ವರ ಬಡಾವಣೆ, ಹುಳಿಮಾವು, ಬನ್ನೇರು ಘಟ್ಟರಸ್ತೆ, ಬೆಂಗಳೂರು - ೫೬೦ ೦೭೬**

ಇವರಿಗೆ ಕಳುಹಿಸಲು ಕೋರಿದೆ.

*ಬೆಂಗಳೂರು* **ಬಿ. ಜಿ. ಸತ್ಯಮೂರ್ತಿ**

ಗಳಿಸಿದ್ದು ಎಲ್ಲಿ ಕಳೆದುಹೋಗುವುದೋ ಎನ್ನುವ ಭಯ. ಅದನ್ನು ಉಳಿಸಿಕೊಳ್ಳಲು ದೇವರಿಗೆ ವಿವಿಧ ರೀತಿಯಲ್ಲಿ ಮೊರೆ.

ಪವಾಡಗಳಲ್ಲಿ ಜನರಿಗೆ ನಂಬಿಕೆಯಿಲ್ಲ, ಅದು ಮ್ಯಾಜಿಕ್, ಮೋಸ ಅಂತ ಎಲ್ಲರಿಗೂ ಗೊತ್ತಾಗಿದೆ. 'ಆದರೆ ಒಂದು ಶಕ್ತಿ ಇದೆ' ಎಂದು, ಅದು ತನಗೆ ಮಾತ್ರ ಗೊತ್ತಿರುವುದು ಎಂದು ಪ್ರತಿಯೊಬ್ಬರೂ ಹೇಳುವುದು ದೊಡ್ಡ ತಮಾಷೆ! 'ವಿಜ್ಞಾನ ಎಲ್ಲವನ್ನೂ ಕಾಣದು' ಎಂದು ವಿಜ್ಞಾನ ಎಂದರೆ ಏನು ಎಂದು, ವಿಜ್ಞಾನದಿಂದ ದೂರ ಉಳಿಯುವಂಥ ಉದಾಸೀನ ಭಾವ ಹೊಂದಿರುವ ಮಂದಿ ಕೂಡ ಹೇಳುವುದು ಇನ್ನೊಂದು ತಮಾಷೆ! ಆಸ್ತಿಕರು ಮತ್ತು ನಾಸ್ತಿಕರ ಬದುಕಿನ ರೀತಿಯಲ್ಲಿ ವ್ಯತ್ಯಾಸ ಇಲ್ಲ, ಆದರೆ ಯಾಕೆಂದು ತಿಳಿಯದೆ, ತಮ್ಮ ನಂಬಿಕೆಗಳನ್ನು ಇತರರು ನಂಬಬೇಕೆಂದು ಹಟ ಹಿಡಿಯುವುದು ಮತ್ತೊಂದು ತಮಾಷೆ!

ದೇಶದಲ್ಲಿ ನಡೆಯುತ್ತಲೇ ಇರುವ ಎಲ್ಲಕ್ಕಿಂತ ದೊಡ್ಡ ತಮಾಷೆಯೆಂದರೆ, ನೂರು ಮಂದಿ ಬುದ್ಧಿವಂತರು ಒಂದು ಕೋಟಿ ಜನರ ಸಮಸ್ಯೆಯ ಕುರಿತು ಶಬ್ದಗಳ ಸಮರ ನಡೆಸುತ್ತಾರೆ. ಈ ಸಮರದಲ್ಲಿ ಒಂದಷ್ಟು ಗದ್ಯ, ಒಂದಿಷ್ಟು ಪದ್ಯ. ಆ ಒಂದು ಕೋಟಿ ಜನರಿಗೆ ಈ ಸಮರದ ವಿಚಾರವೇ ತಿಳಿಯದು. ಅವರನ್ನು ಈ ಬುದ್ಧಿವಂತರು ಕಂಡೇ ಇರುವುದಿಲ್ಲ. ಈ ಸಮರದ ಯಾವುದೇ ಫಲ ಅವರನ್ನು ಮುಟ್ಟುವುದೂ ಇಲ್ಲ. ಈ ಸಮರ ರಿಟೈರ್‌ಮೆಂಟ್ ಇಲ್ಲದ ಒಂದು ಉದ್ಯೋಗದಂತೆ ನಡೆಯುತ್ತಾ ಇರುತ್ತದೆ. ವಾಸ್ತವದಲ್ಲಿ, ಬಹಳ ಸಲ, ಯಾವ ಸಮಸ್ಯೆಯ ಬಗ್ಗೆ ಶಬ್ದ ಸಮರ ನಡೆಯುತ್ತದೋ, ಆ ಸಮಸ್ಯೆಯೇ ಅಲ್ಲಿರುವುದಿಲ್ಲ, ಇದ್ದರೂ ಸಮರ ಕೊನೆಗೊಳ್ಳುವ ಮೊದಲೇ ಅದು ತನ್ನಿಂತಾನೇ ಪರಿಹಾರಗೊಂಡಿರುತ್ತದೆ!

ಉಜಿರೆ **ಕೆ. ಟಿ. ಗಟ್ಟಿ**

**ಮಡೆಸ್ನಾನ : ಮಡಿವಂತರು ಆಚರಿಸಲಿ**

ಶತಶತಮಾನಗಳಿಂದ ಈ ನಾಡಿನಲ್ಲಿ ಅಸ್ಪೃಶ್ಯತೆ ಎಂಬ ಘೋರ ವ್ಯಾಘ್ರ ಘರ್ಜಿಸುತ್ತಿದೆ. ೨೧ನೇ ಶತಮಾನದಲ್ಲಿಯೂ ರುದ್ರತಾಂಡವ ನೃತ್ಯವನ್ನು ಪ್ರದರ್ಶಿಸುತ್ತಿದೆ. ದಲಿತರನ್ನು ಅಸ್ಪೃಶ್ಯತೆಯ ಆಚರಣೆಗಳ ಕರಿ ಛಾಯೆಯ ಮುಷ್ಟಿನಿಂದ ಹೊರಬರಲು ಬಿಟ್ಟಿಲ್ಲ. ಇಡಿಯಾದ ಭಾರತವನ್ನು ಜಾತಿಯೆಂಬ ಕ್ರೂರ ಜಂತು ಗ್ರಹಿಸಿದೆ. ೧೯೨೨ರಲ್ಲಿ ವಿ. ಎಸ್. ಶಾಸ್ತ್ರಿಗಳು ಒಂದು ಚಿಕ್ಕ ಪ್ರಬಂಧವನ್ನು ಬರೆದು ಅದರಲ್ಲಿ ತಾತ್ವಿಕ ತುಡಿತವನ್ನು ಉಲ್ಲೇಖಿಸಿದ್ದರು. ಅದೇನೆಂದರೆ, ಒಂದು ಕಾಲದಲ್ಲಿ ಶೂದ್ರರು ಕೂಡ ವೈದಿಕ ಕ್ರಮವನ್ನು ಆಚರಿಸುವುದು ರೂಢಿಯಲ್ಲಿತ್ತೆಂದು ಪ್ರತಿಪಾದಿಸಿದ್ದರು. ಶೂದ್ರರು ಗುಲಾಮ ರಾಗಿರಲಿಲ್ಲ ಎಂಬ ವಿಚಾರವನ್ನು ಜಿ. ಎಸ್. ಇಲ್ಯನ್ ಎಂಬ ರಷ್ಯನ್ ಲೇಖಕ ೧೯೫೦ರಲ್ಲಿ ಧರ್ಮ ಶಾಸ್ತ್ರವನ್ನು ಆಧಾರವಾಗಿಟ್ಟುಕೊಂಡು ಉಲ್ಲೇಖಿಸಿರುತ್ತಾರೆ. ೧೯೪೬ರಲ್ಲಿ ಅಂಬೇಡ್ಕರ್ ಶೂದ್ರರ ಉಗಮದ ಕುರಿತು ಗ್ರಂಥ ತಂದರು. ಶೂದ್ರರು ಇಂದು, ಅಂದರೆ ಆಧುನಿಕತೆಯ ಬೆಳಕಿನಲ್ಲಿಯೂ ಮುಟ್ಟಿಸಿಕೊಳ್ಳದವರಾಗಿದ್ದಾರೆ. ಇವರು ಆಚರಿಸುವ ಆಚರಣೆಗಳಾದ ಮಡೆಸ್ನಾನ, ಬಸವಿ ಪದ್ಧತಿ, ಚಂದ್ರಗುತ್ತಿಯಲ್ಲಿ ನಡೆಯುವ ಬೆತ್ತಲೆ ಸೇವೆ, ತೆರಡಿಸೇವೆ, ಜೋಗ ಜೋಗತಿಯರ ಆಚರಣೆ, ಸಿಡಿಪದ್ಧತಿ ಮುಂತಾದ ಘೋರವಾದ ಆಚರಣೆಗಳು ಇಂದಿಗೂ ಜೀವಂತವಾಗಿದ್ದು, ಅಸ್ಪೃಶ್ಯತೆಯನ್ನು ಭೂಮಿ ಆಕಾಶ ಇರುವವರೆಗೂ ಆಚರಿಸುವಂತೆ ಮಾಡುವ ಹುನ್ನಾರವನ್ನು ಮುಂದುವರಿಸುವಂತೆ ಮಾಡುತ್ತಿದ್ದಾರೆ.

ಒಂದು ಕಾಲಘಟ್ಟದಲ್ಲಿ ಬ್ರಾಹ್ಮಣರು ಮತ್ತು ಶೂದ್ರರ ನಡುವೆ ಅವಿನಾಭಾವ ಸಂಬಂಧವಿತ್ತೆಂದು ಹೇಳಬಹುದು. ಏಕೆಂದರೆ ಬ್ರಾಹ್ಮಣ ಪುರುಷನೋ, ಸ್ತ್ರೀಯೋ ಸತ್ತಾಗ ಶವಸಂಸ್ಕಾರ ಮಾಡುವ ಮುನ್ನ ಹೆಣದ ಮುಂದೆ ಮಣ್ಣಿನ ಮಡಕೆಯಲ್ಲಿ ಬೆಂಕಿ ಉರಿಯಬೇಕು. ಈ ಆಚರಣೆ ಇಂದಿಗೂ ರೂಢಿಯಲ್ಲಿದೆ. ಆ ಬೆಂಕಿಯನ್ನು ಯಾರ ಹತ್ತಿರ ತರಬೇಕಿತ್ತು ಎಂಬ ಪ್ರಶ್ನೆ? ಈ ವಿಚಾರ ಬ್ರಾಹ್ಮಣರ ಅನೇಕ ಬಂಧುಗಳಿಗೆ ತಿಳಿದಿದೆ. ಉರಿಯುವ ಬೆಂಕಿಯನ್ನು ಅಸ್ಪೃಶ್ಯರ ಹಟ್ಟಿಗಳ ಮನೆಯ ಅಡುಗೆ ಕೋಣೆಯಲ್ಲಿರುವ ಒಲೆಯ ಬೆಂಕಿ ಕೆಂಡ ಅಥವಾ ಕೊಳ್ಳಿಯನ್ನು ಅಸ್ಪೃಶ್ಯರು ಬ್ರಾಹ್ಮಣರ ಸತ್ತ ದೇಹದ ಮುಂದೆ ಹೋಗಿ ಮಡಕೆಯೊಳಗೆ ಹಾಕುತ್ತಿದ್ದರಂತೆ. ಅದು ಉರಿಯಲು ಆರಂಭವಾದ ಮೇಲೆಯೇ ಮುಂದಿನ ಕಾರ್ಯ ಜರುಗುತ್ತಿತ್ತೆಂದು ಕೆಲವು ಬ್ರಾಹ್ಮಣ ಬಂಧುಗಳು ಇಂದಿಗೂ ಹೇಳುತ್ತಾರೆ.

ಇನ್ನೊಂದು ಸೂಕ್ಷ್ಮ ವಿಚಾರವನ್ನು ನೋಡಬಹುದು. ಬ್ರಾಹ್ಮಣರು ಸತ್ತಾಗ ಶವಶ್ರಾದ್ಧ, ಸಂಸ್ಕಾರ ಮಾಡುವ ಪುರೋಹಿತರನ್ನೂ ಊರಿನ ಹೊರಗೆ ಅಥವಾ ಹೊಳೆಯಿಂದ ದೂರದಲ್ಲಿಡುವ ಪದ್ಧತಿಯಿತ್ತು. ಅಂದರೆ ಬ್ರಾಹ್ಮಣರ ಶ್ರಾದ್ಧಕರ್ಮವನ್ನು ಮಾಡುವ ಬ್ರಾಹ್ಮಣರನ್ನು ಬ್ರಾಹ್ಮಣರೇ ಮುಟ್ಟಿಸಿಕೊಳ್ಳುತ್ತಿರಲಿಲ್ಲ. ಯಾವುದೇ ಸಂಬಂಧವನ್ನು ಇರಿಸಿಕೊಂಡಿರಲಿಲ್ಲ. ಜೊತೆಗೆ ಅವರನ್ನು ಅಸ್ಪೃಶ್ಯರನ್ನಾಗಿ ಕಾಣುತ್ತಿದ್ದರು. ಅಂಥವರಿಗೆ ಊರಿನ ಒಳಗೆ ಪ್ರವೇಶವಿರಲಿಲ್ಲ. ಇಲ್ಲಿ ನನ್ನ ತರ್ಕವಿಷ್ಟೆ. ಬ್ರಾಹ್ಮಣರೇ ತಮ್ಮ ಬಂಧುಗಳನ್ನು ಅಸ್ಪೃಶ್ಯತೆಯಿಂದ ಕಾಣುವ ಪದ್ಧತಿ ಎಲ್ಲಿಗೆ ಹೋಯಿತು? ಹೇಗೆ ಮರೆಯಾಯಿತು? ಅಸ್ಪೃಶ್ಯತೆ ಕಂಡು ಉಂಡ ಬ್ರಾಹ್ಮಣರು ಮಡೆಸ್ನಾನ, ದೇವದಾಸಿ ಪದ್ಧತಿ, ತೆರಡಿ ಸೇವೆಯಂತಹ ಇನ್ನೂ ಅನೇಕ ಆಚರಣೆ ಗಳನ್ನು ತಂದು ತಮ್ಮ ಕೊಳಕು ಮುಚ್ಚಿಕೊಂಡಿರುವಿರಲ್ಲ, ಅವರ ಮನಃಸಾಕ್ಷಿ ಎಲ್ಲಿ ಹೋಯಿತು? ತಮ್ಮ ಕೊಳಕನ್ನು ಮುಚ್ಚಿಕೊಂಡು ಶತಶತಮಾನಗಳಿಂದ ಮಡೆಸ್ನಾನದಂತಹ ಆಚರಣೆಗಳನ್ನು ಸಮಾಜದಲ್ಲಿ ರೂಢಿಯಲ್ಲಿ ಇರುವಂತೆ ಮಾಡಿ ತಮ್ಮ ಭದ್ರತೆಯನ್ನು ಭದ್ರಪಡಿಸಿಕೊಳ್ಳಲು ಅಥವಾ ಪುನರ್‌ಸ್ಥಾಪಿಸುವಲ್ಲಿ ಶತಾಯ ಗತಾಯ ಪ್ರಯತ್ನಪಡುತ್ತಿದ್ದಾರೆ.

ಇಲ್ಲಿ ಮತ್ತೊಂದು ವಿಚಾರವನ್ನು ಅವಲೋಕಿಸಬಹುದು. ವೇದಗಳಲ್ಲಿ ವೈದಿಕ ಸಾಹಿತ್ಯದಲ್ಲಿ 'ನಾಯಿಗಳು' ಎಂಬ ಪ್ರಾಣಿಗಳ ಹೆಸರಿರುವ ಮಾನವರಿದ್ದರು ಎಂಬ ಉಲ್ಲೇಖಗಳಿವೆ. ಪ್ರಾಚೀನ ಸಾಹಿತ್ಯದಲ್ಲಿ ನಾಯಿಗಳು; ಉದಾಹರಣೆ: ಕೌಟಿಲ್ಯನ ಅರ್ಥಶಾಸ್ತ್ರದಲ್ಲಿ 'ನಾಯಿಗಳು' ಎಂದು ಕರೆಯುವ ಜನರಿದ್ದರು. ಅವರು ರಾಜ್ಯ ಶಬ್ದೋಪ ಜೀವಿ ಗಣದವರು. ಅಂದರೆ ರಾಜನ ಆಜ್ಞಾಪಾಲಕರಾಗಿ ಕೆಲಸ ನಿರ್ವಹಿಸುತ್ತಿದ್ದರು. ಹರಿವಂಶದ ೩೮ನೆಯ ಅಧ್ಯಾಯದಲ್ಲಿ ಒಂದು ಪೂರ್ಣ ಪ್ರಸಿದ್ಧ ಮನೆತನವು 'ನಾಯಿ'ಯ ಕುರಿತು ಹೇಳಲಾಗಿದೆ. ಅದು ನಾಯಿ ವಂಶವೆನ್ನಲಾಗಿದೆ. ಮಹಾಭಾರತದಲ್ಲಿ ಬರುವ ಯಾದವರ ಒಂದು ಬಣಕ್ಕೆ ನಾಯಿಗಳೆಂಬ ಹೆಸರಿತ್ತು ಎಂಬುದರ ಬಗ್ಗೆ ಕನಿಷ್ಠ ಪಕ್ಷ ಮೂರು ಬಾರಿಯಾದರೂ ಉಲ್ಲೇಖವಿದೆ. ಮಹಾಭಾರತದ ಅನೇಕ ಪಾತ್ರೆಗಳಿಗೆ ಪ್ರಾಣಿಗಳ ಹೆಸರಿರುವುದು ಕಂಡುಬರುತ್ತದೆ. ಅವುಗಳಲ್ಲಿ ಗೂಬೆ, ಚೇಳು, ಕಾಗೆ, ನರಿ, ಕತ್ತೆ, ಆನೆ, ಮೊಲ, ಆಮೆ, ಹಂದಿ, ಟಗರು, ಹುಲಿ, ಹಂಸ, ಕುದುರೆ, ಕೋಳಿ, ಮೀನು ಇನ್ನೂ ಅನೇಕವುಗಳಿವೆ. ಕರಂಡವ್ಯೂಹ ಎಂಬ ಗ್ರಂಥದಲ್ಲಿ 'ಕುಕ್ಕರರು' ಎಂಬ ಮಿಶ್ರಜಾತಿಯವರ ಪ್ರಸ್ತಾಪವಿದೆ. ಅಲ್ಲದೆ, ವಿಷ್ಣು ಪುರಾಣದಲ್ಲಿ 'ಕುಕ್ಕರರು' ಬರುತ್ತಾರೆ. ಏಕೆ ಈ ವಿಷಯವನ್ನು ಪ್ರಸ್ತಾಪ ಮಾಡಲಾಗಿದೆ ಅಂದರೆ, 'ನಾಯಿ' ಅಂತ ಕರೆಸಿಕೊಂಡು ರಾಜನ ಆಜ್ಞೆಯಲ್ಲಿ ಕೆಲಸ ನಿರ್ವಹಿಸುತ್ತಿದ್ದಂತಹ ಮನುಷ್ಯರನ್ನು ಶ್ರೇಷ್ಠರೆಂದು ಸಮಾಜ ಸ್ವೀಕರಿಸಿತ್ತು. ಇವರಂತೆಯೇ ಮನುಷ್ಯರಾಗಿರುವ ದಲಿತರನ್ನು, ಶೂದ್ರರನ್ನು ಅಂದು-ಇಂದು ನಾಯಿಗಿಂತ ಕಡೆಯಾಗಿ ಈ ನಾಡು ಕಂಡುಕೊಳ್ಳುತ್ತಿದೆ. ಇವರು ಮನುಷ್ಯರಲ್ಲವೆ? ಇಂತಹವರಿಗೆ ಮಾತ್ರ ಗೊಡ್ಡು ಸಂಪ್ರದಾಯಗಳನ್ನು ಹುಟ್ಟುಹಾಕಿರುವರೇ?

ಮಡೆಸ್ನಾನದ ಬಗ್ಗೆ ಪತ್ರಿಕೆಗಳಲ್ಲಿ, ಟಿ.ವಿ./ಮಾಧ್ಯಮದಲ್ಲಿ ಅನೇಕ ವಿಚಾರಗಳು ಬಂದು ಹೋಗಿವೆ. ಕೆಲವು ದಿನಗಳ ಹಿಂದೆ ಪ್ರಜಾವಾಣಿಯಲ್ಲಿ ಮಡೆಸ್ನಾನದ ಪೂರಕವಾದ ವಿಚಾರ ಓದಿದೆ. ಒಂದು ರೀತಿಯಲ್ಲಿ ಆಶ್ಚರ್ಯ, ನೋವು, ತಿರಸ್ಕಾರದ ಅನಿಸಿಕೆಗಳು ಮೂಡಿ ಬಂದವು. ಹಾಸನ ಜಿಲ್ಲೆ, ಅರಕಲಗೂಡು ತಾಲೂಕಿನ

ಮಾರ್ಚ್ ೨೦೧೨ರ ಸಂಚಿಕೆಯಲ್ಲಿನ ಪುಟ ೫೫ರ ಡಾ|| ಬಿ. ಸಿ. ನಾಗೇಂದ್ರ ಕುಮಾರರ ಲೇಖನ ''ಕನ್ನಡಕ್ಕೆ ಬಂದ ತಮಿಳಿನ ವೈರಮುತ್ತು – ೩೩ ಕವಿತೆಗಳು'' ಮೊದಲ ಸಾಲಿನಲ್ಲೇ 'ತುಳು ಭಾಷಿಕರಾದ ಮಲರ್‌ವಿಳಿ' ಎಂದು ಕಣ್ತಪ್ಪಿನಿಂದಾಗಿ ಅಚ್ಚಾಗಿದೆ. ಅದನ್ನು ದಯವಿಟ್ಟು ತಮಿಳು ಭಾಷಿಕರಾದ ಮಲರ್‌ವಿಳಿ'' ಎಂದು ತಿದ್ದಿ ಓದಿಕೊಳ್ಳಬೇಕಾಗಿ ವಿನಂತಿ.

ರಾಮನಾಥಪುರ ಹೋಬಳಿಯಲ್ಲಿ ಶ್ರೀರಾಮಸ್ವಾಮಿ ಪುಣ್ಯಕ್ಷೇತ್ರವಿದೆ. ಸಾವಿರಾರು ವರ್ಷಗಳಿಂದಲೂ ಶ್ರೀರಾಮಸ್ವಾಮಿ ಜಾತ್ರೆ ನಡೆಯುತ್ತಾ ಬಂದಿದೆ. ಬ್ರಾಹ್ಮಣ ಪೂಜಾರಿಗಳೇ ಶ್ರೀರಾಮ ದೇವರನ್ನು ಪೂಜೆ ಮಾಡುತ್ತಾ ಬಂದಿರುವರು. ಅಲ್ಲಿನ ಮುಖ್ಯ ಪೂಜಾರಿಯವರ ಪ್ರಕಾರ ಮಡೆಸ್ನಾನ ಇಂದಿನದಲ್ಲ, ನೂರಾರು ವರ್ಷಗಳಿಂದಲೂ ನಮ್ಮ ಪೂರ್ವಿಕರು ಈ ಆಚರಣೆಯನ್ನು ಆಚರಿಸುತ್ತಾ ಬಂದಿದ್ದಾರೆ. ಅದನ್ನು ನಾವುಗಳು ಮುಂದುವರಿಸಿಕೊಂಡು ಹೋಗುತ್ತಿದ್ದೇವೆ. ಅಂತಹ ಮಡೆಸ್ನಾನವನ್ನು ಬ್ರಾಹ್ಮಣರು ಮಾತ್ರ ಮಾಡುತ್ತಿದ್ದರು. ರಾಮಸ್ವಾಮಿ ದೇವಸ್ಥಾನದ ಪಕ್ಕದ ಕಟ್ಟಡದ ಮೇಲಂತಸ್ತಿನಲ್ಲಿ ಭೋಜನ ವ್ಯವಸ್ಥೆ ಮಾಡುವ ಕೊಠಡಿ ಇತ್ತು. ಅಲ್ಲಿ ಎಲ್ಲರೂ ಶ್ರೀ ರಾಮಸ್ವಾಮಿಯ ಪೂಜೆ ಮಾಡಿದ ನಂತರ ಹರಕೆ ಹೊತ್ತ ಬ್ರಾಹ್ಮಣರು ಮೇಲಂತಸ್ತಿನ ಭೋಜನಾ ಮಂದಿರಕ್ಕೆ ತೆರಳಿ ಊಟ ಮಾಡುವ ಪ್ರತೀತಿ ಇತ್ತು. ಬ್ರಾಹ್ಮಣರು ಊಟ ಮಾಡಿದನಂತರ ಕೆಲವು ಬ್ರಾಹ್ಮಣರು 'ಎಂಜಲೆಲೆಯ ಮೇಲೆ' ಉರುಳು ಸೇವೆ ಮಾಡುತ್ತಿದ್ದರು. ಈ ಉರುಳು ಸೇವೆ ಮಾಡುವುದರಿಂದ ಕುಷ್ಟರೋಗ, ಕಜ್ಜಿ, ಇನ್ನಿತರ ಚರ್ಮ ರೋಗಗಳು ವಾಸಿ ಯಾಗುತ್ತವೆ ಎಂಬುದನ್ನು ಓದಿದೆ. ಇದು ಒಳ್ಳೆ ವಿಚಾರವೇ. ಇಂತಹ ಆಚರಣೆಯನ್ನು ಬ್ರಾಹ್ಮಣರು 'ಎಂಜಲೆಲೆಯ' ಉರುಳು ಸೇವೆ ಮಾಡಿ ಸ್ವರ್ಗ ಸಂಪಾದಿಸುವುದನ್ನು ಬಿಟ್ಟು ಈ ನಾಡಿನಲ್ಲಿರುವ ದಲಿತರಿಗೆ ಬಿಟ್ಟರೆ ತಾವು ಅದರಿಂದ ವಂಚಿತರಾದಂತೆ ಅಲ್ಲವೆ? 'ಎಂಜಲ ಎಲೆ' ಮೇಲೆ ಉರುಳು ಸೇವೆ ಮಾಡಿದರೆ ಸ್ವರ್ಗ ಸಿಕ್ಕುತ್ತದೆ, ಪುಣ್ಯ ಪ್ರಾಪ್ತಿ ಆಗುತ್ತದೆ ಎಂಬ ನಂಬಿಕೆ ನಮ್ಮ ಬ್ರಾಹ್ಮಣ ಬಂಧುಗಳಿಗೆ ಇದೆ. ಹಾಗಾದರೆ, ಈ ಮಡೆಸ್ನಾನದಂತಹ ಅನೇಕ ಆಚರಣೆಗಳು ಭಾರತದ ಇತರೆಡೆ ಇರುವುದರಿಂದ ಅಲ್ಲಿಯೂ ಅವರೇ ಆಚರಿಸಿದರೆ ಹೆಚ್ಚು ಅರ್ಥಗರ್ಭಿತ ಅಲ್ಲವೇ?

ಬ್ರಾಹ್ಮಣ ಬಂಧುಗಳು ಭೋಜನ ವ್ಯವಸ್ಥೆ ಮಾಡುವಾಗ ದಲಿತ ಅಸ್ಪೃಶ್ಯರನ್ನು, ಹಿಂದುಳಿದವರನ್ನು, ಅಲ್ಪ ಸಂಖ್ಯಾತರನ್ನು, ಭಿಕ್ಷೆ ಬೇಡುವವರನ್ನು, ಲಕ್ವಾ, ತೊನ್ನು, ಕುಷ್ಟ, ಹುಳು ಉದುರುತ್ತಿರುವ ರೋಗಿಗಳನ್ನು, ಕೇವಲ ಒಂದು ಹೊತ್ತಿಗಾಗಿ ಊಟಕ್ಕೆ ಅಲೆದಾಡುತ್ತಿರುವವರನ್ನು ಆಹ್ವಾನಿಸಿ ಅವರಿಗಾಗಿ ವಿಶೇಷ ಪೂಜೆ, ಹಬ್ಬ, ತೇರು, ತೆಪ್ಪಾ, ಇನ್ನಿತರ ಸಂದರ್ಭಗಳಲ್ಲಿ ಭೋಜನ ಏರ್ಪಡಿಸಬೇಕು. ಇವರೆಲ್ಲರೂ ಊಟ ಮಾಡಿದ ನಂತರ ನಮ್ಮ ಬ್ರಾಹ್ಮಣ ಬಂಧುಗಳು ಅವರ ಎಂಜಲ ಎಲೆ ಮೇಲೆ ಉರುಳಾಡಿದರೆ ಬ್ರಾಹ್ಮಣರ ಎಲ್ಲಾ ಅನಿಷ್ಟ ರೋಗಗಳು ಕಣ್ಣುಮುಚ್ಚಿ ಬಿಡುವುದರೊಳಗೆ ಮಂಗಮಾಯವಾಗಿ ಬಿಡುತ್ತದೆ. ಅನಂತರ ಆರೋಗ್ಯದಿಂದ ಇರಬಹುದು. ಇದುವರೆಗೂ ಮೃಷ್ಟಾನ್ನ ಭೋಜನ ಮಾಡದವರಿಗೆ ಒಂದು ದಿನವಾದರೂ ಒಳ್ಳೆ ಊಟದ ರುಚಿ ಸವಿದಂತೆ ಆಗುತ್ತದೆ. ಅದರ ಪುಣ್ಯವು ನಮ್ಮ ಈ ನಾಡಿನ ಬ್ರಾಹ್ಮಣರಿಗೆ ಸಲ್ಲಲಿ.

ಮಡೆಸ್ನಾನದ ವಿಚಾರ ಮಡಿವಂತರ ಮನೆಗಳಲ್ಲಿ, ಮುಟ್ಟಿಸಿಕೊಳ್ಳಲಾದವರ ಕೇರಿಗಳಲ್ಲಿ, ಗುರುಮಠಗಳಲ್ಲಿ, ಅರಮನೆಗಳಲ್ಲಿ, ಗದ್ದಿಗೆಗಳಲ್ಲಿ, ಪತ್ರಿಕೆಗಳಲ್ಲಿ, ದೇವಸ್ಥಾನಗಳಲ್ಲಿ, ಮಠಗಳಲ್ಲಿ, ಮಾಧ್ಯಮಗಳಲ್ಲಿ, ವೈಚಾರಿಕರಲ್ಲಿ, ಬುದ್ಧಿವಂತರಲ್ಲಿ, ಸ್ವಾಮಿಗಳು, ಬುದ್ಧಿವಂತರು ಮತ್ತು ಚಾಣಕ್ಷರಲ್ಲಿ ಆಗಿಂದಾಗ್ಗೆ ಚರ್ಚೆಗೆ ಬಂದಿದೆ. ನಾನು ಅಲ್ಲಿ ಇಲ್ಲಿ ತಿರುಗಾಡುವಾಗ, ಕೇಳಿದಾಗ, ಆಲಿಸಿದಾಗ ನನಗೆ ಆಶ್ಚರ್ಯವಾಯಿತು. ಅಗೋಚರವಾದಂತಹ ವಿಚಾರಗಳು ಗೋಚರಿಸಿದ್ದರೂ ಈ ನಾಡೇ ಕೊಳಕಿನಿಂದ ತುಂಬಿಕೊಂಡಿದೆ. ಅಂದ ಮೇಲೆ ಪ್ರತಿಕ್ರಿಯಿಸಿದರೂ ಮಮ್ಮಲ ಮರುಗುವುದು ನಮ್ಮ ಜಾಯಮಾನ ಅಂದುಕೊಂಡಿದ್ದೆ. ಕಾರಣವಿಷ್ಟೆ! ಮಹಾಮಾನವತಾವಾದಿಗಳೂ ಕಂಡುಂಡ ಈ ನಾಡಿನಲ್ಲಿ ಅವರೇ ಸೋತು ಸುಣ್ಣವಾಗಿ ಅವರ ಚಿಂತನಮಂಥನಗಳು, ತತ್ವಗಳನ್ನು ಇಂದು ನೆನಸುವವರೇ ಇಲ್ಲದಂತಾಗಿದೆ. ಆದರೂ ನಾನು ಬ್ರಾಹ್ಮಣರಿಂದ ಲೋಕ ಕಲ್ಯಾಣವಾಗುತ್ತದೆ ಎಂದು ನಂಬಿದ್ದೆ. ಆದರೆ ಇಂತಹ ಆಚರಣೆಗಳು ಪುನಾರಾವರ್ತನೆ ಆಗುವುದನ್ನು ನೋಡಿದರೆ ಬ್ರಾಹ್ಮಣರು ರೋಚಿತವಾಗಿಯೇ ಅವುಗಳನ್ನು ಮುಂದುವರೆಸಿಕೊಂಡು ಹೋಗಲು ಎಡೆಮುರಿ ಕಟ್ಟಿ ನಿಂತಿರುವುದು ವಿಪರ್ಯಾಸದ ಸಂಗತಿ.

ಮಡೆಸ್ನಾನದಂತಹ ಆಚರಣೆಗಳನ್ನು ಇನ್ನೆಷ್ಟು ದಿನ, ವಾರ, ವರ್ಷ, ದಶಕ, ಶತಮಾನಗಳ ಕಾಲ ದಲಿತರು ಆಚರಿಸಬೇಕು, ಅನ್ನುವುದರತ್ತ ಗಮನಹರಿಸಿದಾಗ ದಲಿತರ ಹಸಿ ಹಸಿಯಾದ ಪಾಚಿಯು ಇನ್ನು ಈ ನಾಡಿನಲ್ಲಿ ಬಿಳಿಹಾಳೆ ಮೇಲೆ ನೀಲಿ ಶಾಯಿಯಿಂದ ಬರೆಯುತ್ತಿದ್ದಾಗ ರಕ್ತದ ಹರಿವು ಇಡೀ ಒಡಲಿನಾದ್ಯಂತ ಹರಿದು ಜಗತ್ತೇ ಶೂನ್ಯ ವೆನ್ನಿಸುವಂತೆ ಮಾಡಿತು.

ಉಡುಪಿ ಪೇಜಾವರ ಸ್ವಾಮಿ ಅವರಿಗೆ ೮೦ ವರ್ಷ ದಾಟಿದೆ. ಅನೇಕ ವರುಷಗಳಿಂದ ಮಡೆಸ್ನಾನ, ಪಂಕ್ತಿಭೇದ, ಉಷ್ಣ ವಿದ್ಯುತ್‌ಸ್ಥಾವರ ಸ್ಥಾಪನೆ, ವಿಶೇಷ ಆರ್ಥಿಕ ವಲಯ ರಚನೆ, ಅಸ್ಪೃಶ್ಯತೆ, ರಾಜ್ಯ, ರಾಷ್ಟ್ರ, ರಾಜಕೀಯ ಕುರಿತು ಮಾಧ್ಯಮಗಳಲ್ಲಿ ಪ್ರತಿಕ್ರಿಯಿಸುತ್ತಾ ವಿವಾದದ ಸುಳಿಯಲ್ಲಿ ರಾರಾಜಿಸುವುದು ಅವರ ಹುಟ್ಟುಗುಣವಾಗಿ ಬಂದಿರಬಹುದು. ಆದರೆ ಅದು ದಲಿತರಿಗೆ ಬಂದಿರುವುದಿಲ್ಲ. ಮಡೆಸ್ನಾನದಂತಹ ಆಚರಣೆಯನ್ನು ಮಾಡಬೇಕು ಅಂತ ಯಾವ ಸಂವಿಧಾನದ ಪರಿಚ್ಛೇದದಲ್ಲಿ ಮೂಢ ಆಚರಣೆಗಳು ಉಲ್ಲೇಖಿತವಾಗಿವೆ ಎಂಬ ವಿಚಾರವನ್ನು ಶ್ರೀ ಪೇಜಾವರ ಸ್ವಾಮಿಗಳು ತಿಳಿಸಿದರೆ ಒಳಿತು.

ಈ ಆಚರಣೆಗೆ ಮುಂದುವರಿದ ಸಮರ್ಥನೆ ಅಂದರೆ ಪುರಾಣ. ಪುರಾಣಗಳು ಮೊದಲೇ ಕಟ್ಟುಕಥೆಗಳು. ಮಾರ್ಕ್ಸ್ ಹೇಳಿದ ಹಾಗೆ ಅವು ಭೂತಕಾಲದವು. ಸ್ಕಾಂದ ಪುರಾಣದಲ್ಲಿ ಶ್ರೀಕೃಷ್ಣನ ಹೆಂಡತಿ ಜಾಂಬವತಿ ತನ್ನ ಮಗ ಜಂಬನಿಗೆ ಕುಷ್ಟರೋಗ ಬಂದಾಗ ಅದರ ನಿವಾರಣೆಗಾಗಿ ಈ ಎಂಜಲೆಲೆಯ ಸ್ನಾನವನ್ನು ಮಾಡಿಸಿದ್ದಳಂತೆ. ಇದರಿಂದ ಈ ಎಂಜಲೆಲೆಯ ಆಚರಣೆಯನ್ನು ಮುಂದೆ ಬಂದಂತಹ ವೈದಿಕ ಪಂಥದವರು/ಪುರೋಹಿತಶಾಹಿಗಳು ತಮ್ಮ ಹಿತಾಸಕ್ತಿಗೋಸ್ಕರ ಸಾಂಪ್ರದಾಯಿಕವಾಗಿ ಆಚರಣೆಯನ್ನು ತಂದಿರಬಹುದಾಗಿದೆ ಅಂತ ಬಡಬಡಿಸುತ್ತಾರೆ. ಅದರಲ್ಲಿ ಕುಷ್ಟರೋಗಗಳು ವಾಸಿಯಾಗುತ್ತವೆ ಅನ್ನೋ ಮೂಢತೆ ಅಡಗಿದೆ. ಇಂತಹ ಅಂಧ ಆಚರಣೆಗಳನ್ನು ಆಚರಿಸುವುದರಿಂದ ರೋಗಗಳು ವಾಸಿಯಾಗುತ್ತವೆ ಅಂದರೆ ವಿಜ್ಞಾನ ಕ್ಷೇತ್ರದಲ್ಲಿ ಇದ್ದು ತಮ್ಮ ಬದುಕನ್ನು ಸವೆಸುತ್ತಿರುವ ವೈದ್ಯರ ಗತಿ ಅಧೋಗತಿ. ಇನ್ನೂ ಮುಂದುವರಿದು ಹೇಳುವುದಾದರೆ, ಮೇಲ್ವರ್ಗದವರಲ್ಲಿ ಗುಪ್ತರೋಗಗಳು ಹೆಚ್ಚಾಗಿ ಕಂಡುಬರುತ್ತವೆ. ಹಾಗಾದರೆ ಅವರು ಈ ಮಡೆಸ್ನಾನ ಆಚರಣೆ ಮಾಡಲಿ.

ಹಂಪಿ **ಡಾ|| ಹೆಬ್ಬಾಲೆ ಕೆ. ನಾಗೇಶ್**

ಕೆ. ಎಸ್. ಪಾರ್ಥಸಾರಥಿ

# ನಾನು ಕಯ್ಯೂರಿಗೆ ಹೋಗಿದ್ದೆ!



ಸ್ಮಾರಕದ ಬಳಿ, ಪಾರ್ಥಸಾರಥಿ, ಭೂಮಿಗೌಡ, ಮೋಹನ್, ಬಾಬು

ಕಯ್ಯೂರಿನ ಹುತಾತ್ಮರನ್ನು ಆಧರಿಸಿ ನಿರಂಜನರಿಂದ ರಚಿತವಾದ 'ಚಿರಸ್ಮರಣೆ' ಕಾದಂಬರಿ ಕನ್ನಡ ಸಾಹಿತ್ಯಾಸಕ್ತರಿಗೆಲ್ಲಾ ಸುಪರಿಚಿತ. ಅದು ಮೊದಲಿಗೆ ೧೯೫೫ರಲ್ಲಿ ಪ್ರಕಟವಾಗಿ, ಪುನಃ ೧೯೭೫ರಿಂದ ಈಚೆಗೆ ಹನ್ನೆರಡು ಮರುಮುದ್ರಣಗಳನ್ನು ಕಂಡಿದೆ. ೬೦-೭೦ರ ದಶಕದಲ್ಲಿ ಪ್ರಗತಿಶೀಲ ಚಳವಳಿಗಳು ಪ್ರಗಲ್ಭವಾಗಿದ್ದಾಗ, ಅಂದಿನ ಯುವಕರು ಈ ಕಾದಂಬರಿಯಿಂದ ಸ್ಫೂರ್ತಿ ಪಡೆದಿದ್ದರು, ಎಡಪಂಥದ ತತ್ವಗಳನ್ನು ಸ್ವೀಕರಿಸಿದ್ದರು. ಅಂದಿನಿಂದಲೂ ನನಗೆ ಕಯ್ಯೂರಿಗೆ ಹೋಗಿಬರಬೇಕೆಂಬ ಹಂಬಲ ಕಾಡಿತ್ತು. ಕಳೆದ ತಿಂಗಳು ಕೊನೆಯ ವಾರ ಗೆಳೆಯ ಪ್ರೊ॥ ಭೂಮಿಗೌಡರ ಕೃಪೆಯಿಂದ ಇದು ಸಾಧ್ಯವಾಯ್ತು. ನನ್ನೊಡನೆ ಯುವ ಮಿತ್ರ, ಮಂಗಳಗಂಗೋತ್ರಿಯ ಕನ್ನಡ ಎಂ.ಎ. ವಿದ್ಯಾರ್ಥಿ ಶ್ರೇಯಾಂಶ್ ರಾನಡೆಯೂ ಬಂದಿದ್ದ. ಅವನಿಗೂ, ಭೂಮಿಗೂ ನನಗೆ ಚಿಕ್ಕಂದಿನಲ್ಲಿ ಆಗಿದ್ದ ಅನುಭವವೇ ಆಗಿರಲಿಕ್ಕೆ ಸಾಕು. ಕಯ್ಯೂರಿನ ಭಾರತ ಕಮ್ಯೂನಿಸ್ಟ್ ಪಕ್ಷದ ಕಾರ್ಯದರ್ಶಿ ಯುವ ಬಾಬು ಮತ್ತು ಚೆರ್ವತ್ತೂರಿನ ಶಾಖೆಯ ಕಾರ್ಯದರ್ಶಿ ಮೋಹನ್ ಇಬ್ಬರೂ ನಮ್ಮೊಡನೆ ಬಹಳ ಸಂಭ್ರಮದಿಂದ ಬಂದು, ನಮಗೆ ವಿಸ್ತಾರವಾಗಿ ನೋಡಿ ತಿಳಿಯಲು ಸಹಾಯವಾಯಿತು.

ಕಯ್ಯೂರನ್ನು ಬಳಸಿ ತೇಜಸ್ವಿನಿ ನದಿ ಈ ಸುಡುಬೇಸಗೆಯಲ್ಲೂ ತುಂಬಿ ಹರಿಯುತ್ತ, ಕಡಲು ಸೇರುವ ಜಾಗ ಭತ್ತಗದ್ದೆಯ ತೀರ. ಅಲ್ಲೇ ಈ ಹುತಾತ್ಮರಿಗೆ ಸ್ಮಾರಕ ನಿರ್ಮಿಸಿದ್ದಾರೆ. ಅದಕ್ಕೆ ಹೋಗುವ ಮಾರ್ಗದಲ್ಲಿ ಮೊದಲಿಗೆ ಸಿಕ್ಕಿದ್ದು ಸಂಗಾತಿ ಚಿರಕುಂಡನ್ ಕೃಷ್ಣನ್ ನಾಯರ್‌ರವರ ಸಮಾಧಿ. ಅದು ಅವರ ಮನೆಯ ನಿವೇಶನದಲ್ಲೇ ಇದೆ. ಅದರ ಹಿಂದೆ ಅವರ ಸಾಧಾರಣ ಮನೆ, ಮನೆಯಲ್ಲಿ ಅವರ ವೃದ್ಧೆ ಮಡದಿ ಶ್ರೀಮತಿ ಮಾಧವಿಯಮ್ಮಾಳ್ ವಾಸವಾಗಿದ್ದಾರೆ. ಸಂಗಾತಿ ನಾಯರ್‌ಗೂ, ಗಲ್ಲಿಗೇರಿದ ಉಳಿದ ನಾಲ್ವರೊಡನೆ ಫಾಸಿ ಶಿಕ್ಷೆಯಾಗಿತ್ತು. ಆದರೂ ಅವರು ಅಪ್ರಾಪ್ತ ವಯಸ್ಕರೆಂದು ಶಿಕ್ಷೆ ಮನ್ನಾ ಆಗಿ, ನೇಣುಗಂಬವನ್ನು ತಪ್ಪಿಸಿಕೊಂಡರು. ಮುಂದೆ ಕಮ್ಯುನಿಸ್ಟ್ ಪಕ್ಷದ ನಾಯಕರಾಗಿ ೨೦೦೧ರವರೆಗೂ ಕೆಲಸ ಮಾಡಿದವರು. ಚೆರ್ವತ್ತೂರಿಗೆ ೧೫ ಕಿ.ಮೀ. ದೂರದಲ್ಲಿ, ಮಂಗಳೂರಿಗೆ ಬರುವಾಗ, ನೆಲ್ಲಿಕಾಟ್ಟು ಎನ್ನುವ ಸ್ಥಳದಲ್ಲಿ ಸಂಗಾತಿ ಕೆ. ಮಾಧವನ್ ಇನ್ನೂ ವಾಸವಿದ್ದಾರೆ. ಇವರಿಗೆ ೯೭ ವರ್ಷ! ನಮ್ಮ ಸಂಗಾತಿ ಬಿ. ವಿ. ಕಕ್ಕಿಲ್ಲಾಯ ಅವರಿಗಿಂತ ಈತ ಹಿರಿಯರು. ಅವರೂ ಕಯ್ಯೂರು ಪ್ರಕರಣದಲ್ಲಿ ಭಾಗವಹಿಸಿ, ಪೊಲೀಸರ ಕೈಗೆ ಕೊನೆಗೂ ಸಿಗದೆ ಚಳ್ಳೆಹಣ್ಣು ತಿನ್ನಿಸಿದವರು. ಇವರೂ ಸಿಪಿಐ ನಾಯಕರಾಗಿ ಇತ್ತೀಚಿನವರೆಗೂ ಸಕ್ರಿಯರಾಗಿದ್ದವರು. ಇವರು ೧೯೮೫ರಲ್ಲಿ ಮಲೆಯಾಳ ಭಾಷೆಯಲ್ಲಿ ರಚಿಸಿದ್ದ ''ತೇಜಸ್ವಿನೀ ತೀರದಲ್ಲಿ'' ಎಂಬ ಆತ್ಮಕಥೆಯನ್ನು ೨೦೧೧ರಲ್ಲಿ ನ್ಯಾಷನಲ್ ಬುಕ್ ಟ್ರಸ್ಟ್ ''ಗಾಂಧಿವಾದಿ ಕಮ್ಯುನಿಸ್ಟನ ಆತ್ಮಕತೆ'' (ಇಂಗ್ಲಿಷ್) ಎನ್ನುವ ಹೆಸರಿನಲ್ಲಿ ಪ್ರಕಟಿಸಿದೆ. 'ಚಿರಸ್ಮರಣೆ'ಯಲ್ಲಿ ಬರುವ ಮಾಸ್ತರ ಪಾತ್ರ ಇವರನ್ನೇ ಆಧರಿಸಿದ್ದು. ಇವರನ್ನು ನಾವು ಸಂಧಿಸಿ, ಮಾತನಾಡಿಸಿದ್ದು ಒಂದು ಸ್ಫೂರ್ತಿದಾಯಕ ಅನುಭವವಾಗಿತ್ತು. ಕಯ್ಯೂರಿನ ಸಿಪಿಐ ಶಾಖೆಯ ಸಂಗಾತಿ ಬಾಬು ಕಿರಿಯ ವಯಸ್ಸಿನವರು, ವೃತ್ತಿಯಲ್ಲಿ ಬಡಗಿ. ತಮ್ಮ ಕಛೇರಿಯನ್ನು ಒಪ್ಪ ಓರಣದಿಂದ ಇಟ್ಟುಕೊಂಡಿದ್ದಾರೆ. ಇಲ್ಲಿಂದಲೇ ನೆಹರೂ ಯುವಕೇಂದ್ರದ ಚಟುವಟಿಕೆಗಳನ್ನು ಗೆಳೆಯರು ನಡೆಸುತ್ತಾರೆ ಹಾಗೂ ಇಲ್ಲಿಂದಲೇ ಸರ್ಕಾರೀ ಸಾರ್ವಜನಿಕ ಲೈಬ್ರರಿಯ



*ಸಂಗಾತಿ ಚಿರಕುಂಡನ್ ಕೃಷ್ಣನ್ ನಾಯರ್ ಅವರ ಸಮಾಧಿ*

ಶಾಖೆಯನ್ನು ನಡೆಸುತ್ತಾರೆ. ಈ ಸಣ್ಣ ಸಣ್ಣ ಊರುಗಳಲ್ಲಿ ಸಿಪಿಐ ಪಕ್ಷದ ಸಂಘಟನೆ ಜನಜೀವನದ ಹಾಸುಹೊಕ್ಕಾಗಿರುವುದು ಒಂದು ವಾಸ್ತವ. ಬೀದಿಯಲ್ಲಿ ಟೀ ಅಂಗಡಿಯವನಿಗೂ ಇಂದಿನ ಯುವಕನಿಗೂ ಕಯ್ಯೂರಿನ ಪ್ರಕರಣ, ಆ ಹುತಾತ್ಮ ವೀರರ ಹೆಸರು ಗೊತ್ತು. ಆ ಕತೆ ಜಾನಪದ ಕಲೆಯಲ್ಲಿ ಕತೆಗಳಲ್ಲಿ ಮಿಳಿತವಾಗಿಬಿಟ್ಟಿದೆ. ಆ ಚಳುವಳಿಯ ಸಾರ್ವಕಾಲಿಕತೆ ಅಷ್ಟೊಂದು ದಟ್ಟವಾದದ್ದು. ನಮ್ಮ ಗೆಳೆಯ ಫಕೀರ್ ಅಹಮದ್ ಕಟ್ಪಾಡಿಯವರು ಕಯ್ಯೂರಿನ ವೀರರನ್ನು ಕುರಿತು ವಿಸ್ತಾರವಾದ ಸಂಶೋಧನೆ ನಡೆಸಿ, ಆ ಪ್ರಕರಣದ ೭೫ನೇ ವರ್ಷದ ನೆನಪಿಗೆ ಬರೆದುಕೊಟ್ಟ ''ಕಯ್ಯೂರಿನ ರೈತವೀರರು'' ಹೊತ್ತಿಗೆ ನವಕರ್ನಾಟಕದ ಹೆಮ್ಮೆಯ ಪ್ರಕಟಣೆ. 'ಚಿರಸ್ಮರಣೆ'ಯೊಡನೆ, ಈ ಇತಿಹಾಸಮಯ ಪುಸ್ತಕವನ್ನು ಓದಬೇಕು. ಒಂದರಲ್ಲಿ ಇತಿಹಾಸದ ವರದಿ, ರಾಜಕೀಯ ಚರ್ಚೆ ಇದ್ದರೆ, ಮತ್ತೊಂದರಲ್ಲಿ ಹೇಗೆ ಒಂದು ಇತಿಹಾಸದ ಪ್ರಸಂಗ, ಕಲಾಕೃತಿಯಾಗಿ ಮಾರ್ಪಡುತ್ತದೆ ಎನ್ನುವುದು ಅನುಭವವಾಗುತ್ತದೆ.

ಮಾರ್ಚ್ ೨೯, ೧೯೪೩ರಂದು ಕಯ್ಯೂರಿನ ನಾಲ್ವರು ಕಣ್ಣಾನೂರ್ ಜೈಲಿನಲ್ಲಿ ಗಲ್ಲಿಗೇರಿದರು. ''ಇನ್‌ಕ್ವಿಲಾಬ್ ಜಿಂದಾಬಾದ್'' ಘೋಷಣೆ ಅವರ ಕೊನೆಯ ದನಿಯಾಗಿತ್ತು. ವಸ್ತುಸ್ಥಿತಿಯೊಂದಿಗೆ ಒಂದು ಕ್ಷುಲ್ಲಕ ಪ್ರಸಂಗ ಈ ದುರಂತದ ಹಿಂದೆ ಇರುವುದು. 'ಜನ್ಮಿ'ಗಳು ಎನ್ನುವ ಸಾಂಪ್ರದಾಯಿಕ ಭೂಮಾಲೀಕರು ಅಂದಿನ ಬ್ರಿಟಿಷ್ ಸರ್ಕಾರದ ಭಂಟರಾಗಿದ್ದುಕೊಂಡು, ತಮ್ಮದೇ ಪುಂಡಾಟಿಕೆಯಲ್ಲಿ ತಮ್ಮ ತಮ್ಮ ಕ್ಷೇತ್ರವನ್ನು ಆಳುತ್ತಿದ್ದರು. ತಮ್ಮ ಒಕ್ಕಲನ್ನು ಅಮಾನುಷವಾಗಿ ನಡೆಸಿಕೊಳ್ಳುತ್ತಿದ್ದರು. ಈ ಜನ್ಮಿಗಳೇನೂ ತಲೆತಲಾಂತರದಿಂದ ಜಮೀನ್ದಾರರಾಗಿದ್ದವರಲ್ಲ. ೧೯ನೆಯ ಶತಮಾನದಲ್ಲಿ, ಟಿಪ್ಪೂ ಸುಲ್ತಾನನ ಪತನಾನಂತರ, ಮಲಬಾರ್ ಜಿಲ್ಲೆ ಬ್ರಿಟಿಷರ ಕೈವಶವಾಯ್ತು. ಟಿಪ್ಪೂ ಕಾಲದಲ್ಲೂ, ಅದರ ಹಿಂದಿನ ರಾಜರುಗಳ ಕಾಲದಲ್ಲೂ ಜಮೀನಿನ ಒಡೆತನ ದೇಶದಲ್ಲಿ ಬಹುಭಾಗದಲ್ಲಿದ್ದಂತೆ ಪ್ರಭುತ್ವದ್ದು, ಅಂದಿನ ರಾಜರದ್ದೂ ಆಗಿತ್ತು. ಅಲ್ಲಲ್ಲೇ ರಾಜಪ್ರತಿನಿಧಿಗಳಾಗಿ ಕೆಲವರು ಪ್ರಭುತ್ವದ ಪರವಾಗಿ ಗೇಣಿ ವಸೂಲಿ ಮಾಡುತ್ತಿದ್ದವರು. ಪ್ರಜೆ ನೇರವಾಗಿ ಪ್ರಭುವಿಗೆ ಇವರ ಹಿಂಸೆಯ ವಿರುದ್ಧ ಪುಕಾರು ನೀಡಬಲ್ಲ ವ್ಯವಸ್ಥೆಯೂ ಇದ್ದಿತು. ಆದರೆ ಬ್ರಿಟಿಷರು ತಮ್ಮ ಸ್ವಾಧೀನ ಪಡೆದ ಪ್ರದೇಶಗಳಲ್ಲಿ, ಈ ಗೇಣಿ ವಸೂಲಿ ಮಾಡುವವರಿಗೆ ಆಯಾಯ ಪ್ರದೇಶದ ಒಡೆತನವನ್ನು ನೀಡಿ, ಅವರು ತಮಗೆ ತಾವು ಬಯಸುವ ಗೇಣಿ ವಸೂಲಿ ಮಾಡಿದರಾಯ್ತು, ಅವರು ಹೇಗೆ ಅದನ್ನು ಮಾಡುತ್ತಾರೆ, ಅವರು ಉಳುವವನನ್ನು ಹಿಂಸಿಸುತ್ತಾರೆಯೆ ಎನ್ನುವುದರ ಗೋಜಿಗೆ ಹೋಗಲಿಲ್ಲ. ಬ್ರಿಟಿಷರು ತಮ್ಮ ವಸಾಹತುವಿನಲ್ಲಿ ಈ ಫ್ಯೂಡಲ್ ಪದ್ಧತಿಯನ್ನು ನಾಟಿ ಹಾಕಿ ಭದ್ರ ಮಾಡುತ್ತಿದ್ದ ಕಾಲದಲ್ಲಿ ಬ್ರಿಟನ್ನಿನಲ್ಲಿ ಕೈಗಾರಿಕಾ ಕ್ರಾಂತಿ ಪ್ರಾರಂಭವಾಗಿ, ಉಳುವವನ ಮಾಲೀಕತ್ವ ಜಾರಿಗೆ ಬರುತ್ತಿತ್ತು ಎನ್ನುವುದನ್ನು ಗಮನಿಸಿದರೆ ತಿಳಿಯುವ ವಿಷಯ : ಇಷ್ಟು ದೊಡ್ಡ ರಾಷ್ಟ್ರವನ್ನು ಆಳಲು ಅವರಿಗೆ ಸ್ಥಳೀಯ ಏಜೆಂಟರುಗಳ ಅಗತ್ಯವಿತ್ತು ಎನ್ನುವುದು. ದುರದೃಷ್ಟವೆಂದರೆ ಸ್ವಾತಂತ್ರ್ಯದ ನಂತರವೂ ಈ ಭೂಮಾಲೀಕತ್ವವನ್ನು ನಮ್ಮದೇ ಸರ್ಕಾರ ಕಿತ್ತೊಗೆಯದ್ದು. ೧೮೫೭ರ ಸಿಪಾಯಿ ಪ್ರತಿಭಟನೆಯ ಕಾಲದಲ್ಲೂ ಈ



ಸಂಗಾತಿ ಚಿರಕುಂಡನ್ ಕೃಷ್ಣನ್ ನಾಯರ್ ಅವರ ಪತ್ನಿ ಶ್ರೀಮತಿ ಮಾಧು ಅಮ್ಮಾಳ್ ಅವರೊಡನೆ (ಎಡದಿಂದ) ಬಾಬು, ಭೂಮಿಗೌಡ, ಪಾರ್ಥಸಾರಥಿ, ಮೋಹನ್



ಕೆ. ಮಾಧವನ್ ಅವರು ತಮ್ಮ ಆತ್ಮಕತೆ ''ಗಾಂಧಿಯನ್ ಕಮ್ಯುನಿಸ್ಟ್ ಒಬ್ಬನ ಆತ್ಮಕತೆ''ಗೆ ಹಸ್ತಾಕ್ಷರ ಹಾಕುತ್ತಿರುವುದು

ಭೂಮೀಲಿಕರು ಬ್ರಿಟಿಷರ ಪರವಿದ್ದದ್ದು ಇದೇ ವಿಷಯವನ್ನು ಹೇಳುತ್ತದೆ.

ಈ ಜನ್ಮಿಗಳು ನೀಡುತ್ತಿದ್ದ ಹಿಂಸೆಗೆ ರೈತಾಪಿ ವರ್ಗ ಕಂಗಾಲಾಗಿದ್ದ ಕಾಲ ಕಳೆದ ಶತಮಾನದ ಮೂವತ್ತು-ನಾಲ್ವತ್ತರ ದಶಕ. ಮರ್ಯಾದೆಯಿಂದ ಬದುಕುವುದೇ ಕಷ್ಟವಾಗಿದ್ದ ಪ್ರಾಣಿಸಮ ಜೀವನ. ಇದನ್ನೆಲ್ಲಾ ಕಟ್ಪಾಡಿಯವರ ಕೃತಿ ವಿಸ್ತಾರವಾಗಿ ವರ್ಣಿಸುತ್ತದೆ. ರಾಷ್ಟ್ರೀಯ ಸ್ವಾತಂತ್ರ್ಯ ಚಳುವಳಿಯ ಜತೆ ಜತೆಗೆ ಬೆಳೆದು ಬಂದ ಎಡಪಂಥ, ೧೯೪೦ರ ಆಜುಬಾಜಿಗೆ ಭಾರತ ಕಮ್ಯುನಿಸ್ಟ್ ಪಕ್ಷವಾಗಿ ಜನರ ಮಧ್ಯೆ ಬೆಳೆಯುತ್ತಿದ್ದ ಕಾಲ. ಕಾಂಗ್ರೆಸ್ ಪಕ್ಷದ ಒಳಗೂ ಈ ಪಕ್ಷದವರು ಮುಕ್ತವಾಗಿ ಪ್ರವೇಶ ಪಡೆದಿದ್ದ ಕಾಲ. ಕೇರಳದಲ್ಲಿ ಭಾರತ ಕಮ್ಯುನಿಸ್ಟ್ ಪಕ್ಷ ಗ್ರಾಮೀಣ ಪ್ರದೇಶದಲ್ಲಿ ಈ ರೈತರ ಬವಣೆಗೆ ಪರಿಹಾರ ನೀಡಬಲ್ಲ ಹೋರಾಟಗಳನ್ನು ರಚಿಸಲು ಸಮರ್ಥವಾಗಿತ್ತು. ಇದರ ಗಾಳಿ ಕಾಸರಗೋಡಿನ ಪ್ರದೇಶವನ್ನು ಆಳವಾಗಿ ವ್ಯಾಪಕವಾಗಿ ಆವರಿಸಿತ್ತು. ಆ ಹಿನ್ನೆಲೆಯಲ್ಲಿ ಅಲ್ಲಿಯ ಕೆಳಸ್ತರದ ರೈತರು, ಕೃಷಿಕರು, ಭೂರಹಿತ ಕೃಷಿಕಾರರು ಕ್ರಾಂತಿಕಾರಿ ತತ್ವಗಳನ್ನು ಸುಲಭವಾಗಿ ಅರಗಿಸಿಕೊಳ್ಳಲು ಸಮರ್ಥರಾದರು. ಅಲ್ಲಿ ಹಳ್ಳಿ ಹಳ್ಳಿಯಲ್ಲಿ 'ಕೃಷಿಕ ಸಂಘಂ' ಜನತೆಗೆ ಸೈದ್ಧಾಂತಿಕ, ಸಂಘಟನಾತ್ಮಕ ಶಿಕ್ಷಣ ನೀಡಿ, ಹೋರಾಟಕ್ಕೆ ಹಚ್ಚಲು ಸಮರ್ಥವಾಯ್ತು. ಹೋರಾಟದಲ್ಲಿನ ಬೇಡಿಕೆಗಳು ಬಹಳ ಸರಳವಾದುವೆ. ಜನ್ಮಿಗಳ ದಬ್ಬಾಳಿಕೆಯಿಂದ, ಶೋಷಣೆಯಿಂದ ಬಿಡುಗಡೆ; ಸರ್ಕಾರದಿಂದ ಜನಪರ ನ್ಯಾಯಕ್ಕಾಗಿ ಒತ್ತಾಯ. ಆದರೆ ಇದರ ವಿರುದ್ಧ ರೊಚ್ಚಿಗೆದ್ದ ಜನ್ಮಿಗಳಿಗೆ ಪೊಲೀಸ್ ಪಡೆಯ ಬೆಂಬಲ ಸಂಪೂರ್ಣವಾಗಿತ್ತು. ಅದರಲ್ಲೂ ಆ ಕಾಲದಲ್ಲೂ ಮಲಬಾರ್ ಪೊಲೀಸ್ ಎಂದರೆ ಒಂದು ಕ್ರಿಮಿನಲ್ ಗ್ಯಾಂಗ್ ಅಂತಹ ಭಯೋತ್ಪಾದಕ ಪ್ರಭುತ್ವದ ಅಂಗ ಸಂಸ್ಥೆ. ತಮ್ಮ ಎಂದಿನ ಸಾಧಾರಣ ಪ್ರತಿಭಟನೆಯ, ಸಂಘಟನೆಯ ಮೆರವಣಿಗೆಗಳು ನಡೆಯುತ್ತಿದ್ದ ಸಂದರ್ಭ. ಕಯ್ಯೂರಿನ ತೇಜಸ್ವಿನಿ ನದಿಯ ತಟದ ಇಕ್ಕಟ್ಟಿನ ಕಾಲುದಾರಿಯಂಥ ಮಾರ್ಗದಲ್ಲಿ ಮುಂದುವರಿಯುತ್ತಿದ್ದ ಕೆಂಪು ಧ್ವಜ ಹಿಡಿದು, ಘೋಷಣೆಗಳನ್ನು ಕೂಗುತ್ತಾ ಮುಂದುವರಿಯುವ ಒಂದು ಮೆರವಣಿಗೆ. ಹಿಂದಿನ ರಾತ್ರಿಯೇ ಪೊಲೀಸ್ ಪ್ರತಿನಿಧಿ ಪ್ಯಾದೆ ಸುಬ್ಬಯ್ಯ ಎನ್ನುವಾತ ಜನ್ಮಿಗಳ ಮನೆಯಲ್ಲಿ ಬಂದು ಮೊಕ್ಕಾಂ ಹೂಡಿದ್ದ. ರಾತ್ರಿಯೆಲ್ಲ ಭೂರಿ ಭೋಜನ, ಕುಡಿದು ತಾರಾಡುತ್ತ, ಈ ಮೆರವಣಿಗೆಯ ಸನಿಹಕ್ಕೆ ಬಂದ. ತನ್ನ ಮಾಮೂಲಿ ಪೊಲೀಸ್ ಭಾಷೆಯಲ್ಲಿ, ಆದರೆ ಅರೆ ಪ್ರಜ್ಞಾವಸ್ಥೆಯಲ್ಲಿ ಮೆರವಣಿಗೆಯಲ್ಲಿದ್ದವರನ್ನು ಯದ್ವಾತದ್ವಾ ಬೈದ. ಇದೆಲ್ಲ ಜನಕ್ಕೆ ರೂಢಿಯಲ್ಲಿ ಇದ್ದದ್ದೆ. ಆದರೆ ಹುರುಪಿನಲ್ಲಿದ್ದ ಕೆಲವರು ಅವನನ್ನು ಸುತ್ತುಗಟ್ಟಿ, ಅವನನ್ನು ಕೆಂಬಾವುಟವನ್ನು ಕೈಯಲ್ಲಿ ಹಿಡಿದು ತಮ್ಮ ಮೆರವಣಿಗೆಯ ಮುಂದೆ ನಡೆಯುವಂತೆ ಮಾಡಿದರು. ಇದರಿಂದ ಕಕ್ಕಾಬಿಕ್ಕಿಯಾದ ಪ್ಯಾದೆ ಓಡಿಹೋಗಿ ತಪ್ಪಿಸಿಕೊಳ್ಳುವ ಪ್ರಯತ್ನ ಮಾಡಿದ ತಾರಾಡುತ್ತಲೆ. ಆದರೆ ಅದೇ ಸಮಯ ಅದೇ ದಾರಿಯಲ್ಲಿ ಎದುರಾಗಿ ಅಂಥದೇ ಮತ್ತೊಂದು ಮೆರವಣಿಗೆ ಬಂತು. ಇದರಿಂದ ಅವನಿಗೆ ಇನ್ನಷ್ಟು ಗೊಂದಲವಾಯ್ತು. ಏನು ಮಾಡಲೂ ಅರಿಯದೆ ತಡವರಿಸುತ್ತ, ಮುಗ್ಗರಿಸಿ, ಓಡಿ, ದಾರಿ ಬದಿಯ ತೇಜಸ್ವಿನಿ ನದಿಗೆ ಬಿದ್ದ. ಬಹುಶಃ ಅವನಿಗೆ ಪ್ರಾಣಭಯ, ಈಜಿ ಹೋಗೋಣವೆಂದುಕೊಂಡಿದ್ದ.

ಮೆರವಣಿಗೆಯಲ್ಲಿದ್ದ ಯಾರೋ ಅವನತ್ತ ಹಲವು ಕಲ್ಲುಗಳನ್ನು ಬೀರಿದರು. ಪೆಟ್ಟು ಬಿತ್ತು, ಆ ಪ್ಯಾದೆ ನೀರಿನಲ್ಲಿ ಮುಳುಗಿ ಸತ್ತ. ಇದು ಮೂಲ ಪ್ರಕರಣ. ಈ ಕಾಲದಲ್ಲೂ ಇಂಥ ಪೊಲೀಸ್ ಪ್ರಕರಣದಲ್ಲಿ ಆಗುವಂತೆ ರೊಚ್ಚಿಗೆದ್ದ ಪೊಲೀಸ್ ಪಡೆ ಮುಂದಿನ ಒಂದು ತಿಂಗಳು ಕಯ್ಯೂರಿನ ಸುತ್ತಮುತ್ತ ಮೊಕ್ಕಾಂ ಹೂಡಿ, ಕಂಡ ಕಂಡವರನ್ನು ಥಳಿಸಿತು; ಹೆಣ್ಣು ಮಕ್ಕಳನ್ನು ಕೆಡಿಸಿತು; ಗುಡಿಸಲುಗಳಿಗೆ ಬೆಂಕಿ ಹಾಕಿತು. ಗಂಡಸರಲ್ಲಿ ಬಹಳ ಜನ ಪಕ್ಕದ ಬೆಟ್ಟಕ್ಕೆ ಓಡಿ ತಲೆಮರೆಸಿಕೊಂಡರು. ಸುಮಾರು ೬೦ ಜನರನ್ನು ಸೆರೆಹಿಡಿದು ಅವರ ಮೇಲೆ ಅತ್ಯುಗ್ರ ಶಿಕ್ಷೆ ಆಗುವ ಆಪಾದನೆಗಳನ್ನು ಹೊರೆಸಿದರು. ೧೯೪೫ರ ಅಂತ್ಯಕ್ಕೆ ಐವರಿಗೆ ಗಲ್ಲು ಶಿಕ್ಷೆ, ಸಾಕಷ್ಟು ಜನಕ್ಕೆ ತೀವ್ರ ಸಜಾ ವಿಧಿಸಲಾಯ್ತು. ಐವರಲ್ಲಿ ಚೂರಿಕ್ಕಾಡನ್ ಕೃಷ್ಣನ್ ನಾಯರ್ ಅಪ್ರಾಪ್ತ ವಯಸ್ಕರೆಂದು ಬದುಕುಳಿದರು. ನಾಲ್ವರನ್ನು ಮಾರ್ಚ್ ೨೯, ೧೯೪೬ರಂದು ಕಣ್ಣಾನೂರಿನ ಜೈಲಿನಲ್ಲಿ ಗಲ್ಲಿಗೇರಿಸಿದರು. ಅವರೇ ಕಯ್ಯೂರಿನ ಹುತಾತ್ಮರು. ಅವರ ಹೆಸರುಗಳು ಮಡತ್ತಿಲ್ ಅಪ್ಪು, ಪೊಡವರ ಕುಂಞಂಬು ನಾಯರ್, ಚಿರಕುಂಡನ್, ಅಬುಬಕ್ಕರ್ ಪಳಕ್ಕಲ್. ಕಟ್ಪಾಡಿಯವರ ಪುಸ್ತಕ ನವಕರ್ನಾಟಕದಲ್ಲಿ ಲಭ್ಯ. ಹಾಗೆಯೇ 'ಚಿರಸ್ಮರಣೆ'ಯೂ. ಆಸಕ್ತರು ಈ ಪುಸ್ತಕಗಳಿಂದ ವಿಸ್ತಾರವಾದ ವಿವರ ಪಡೆಯಬಹುದು.

ಈ ಪ್ರಕರಣದ ವಿಶಿಷ್ಟತೆಯೇನು? ಇಂಥ ಎಷ್ಟೋ ಪ್ರಸಂಗಗಳು ಸ್ವಾತಂತ್ರ್ಯ ಹೋರಾಟ ಕಾಲದಲ್ಲಿ ನಡೆದಿವೆಯಲ್ಲವೇ? ಹೌದು, ನಡೆದಿವೆ. ಅವೆಲ್ಲವನ್ನು ಅಲ್ಲಲ್ಲಿ ಪ್ರಸ್ತಾಪಿಸಿ, ದಾಖಲಿಸಿದ್ದಾರೆ. ನಿರಂಜನರು ಇದನ್ನು ಕಲಾತ್ಮಕವಾಗಿ ಮರು ಸೃಷ್ಟಿಸಿದ್ದಾರೆ. ಅಲ್ಲಿ ರಷ್ಯಾದ ಮಹಾನ್ ಸಾಹಿತಿಗಳಾದ ಟಾಲ್‌ಸ್ಟಾಯ್, ಶೋಲಕೋವ್ ಮುಂತಾದವರ ಛಾಯೆ ಕಾಣುತ್ತದೆ. ಕ್ರಾಂತಿ ಎಂದರೇನು, ಸಂಘಟನೆ ಎಂದರೇನು, ಅನಕ್ಷರಸ್ಥರೋ-ಅಶಿಕ್ಷಿತರೋ ಆದ ಜನರೂ ಕ್ರಾಂತಿಕಾರಿಗಳಾಗಬಲ್ಲರು, ಅಥವಾ ಅವರಿಂದಲೇ ಸಾಧ್ಯ, ಅವರೊಡನೆ ಬೌದ್ಧಿಕತೆ ಕೆಲಸ ಮಾಡಬೇಕು ಎನ್ನುವುದು ಭಾಸವಾಗುತ್ತದೆ. ಭಾಗವಹಿಸುವ




ವೀರರಿಗೆ ಸ್ಮಾರಕ



ಕೆ. ಮಾಧವನ್ ಅವರೊಡನೆ ಶ್ರೇಯಾಂಶ್ ರಾನಡೆ, ಮಾಧವನ್ ಅವರ ಪುತ್ರ ಸೇತುಮಾಧವನ್, ಪಾರ್ಥಸಾರಥಿ

ಅಪ್ರಬುದ್ಧರು ಮೊದಮೊದಲಿಗೆ ತಮ್ಮ ಸದ್ಯದ ಹಿತಾಸಕ್ತಿಗಳ ಪರಿಹಾರವನ್ನು ಬಯಸಿ ಭಾಗವಹಿಸಬಹುದು. ಆದರೆ ಅವರ ನಡುವೆ ಪ್ರೇರಕವಾಗಿ ಕೆಲಸ ಮಾಡುವವನ ಜವಾಬ್ದಾರಿ ಅವರ ಭಾಗವಹಿಸುವಿಕೆಯನ್ನು ಹಂತ ಹಂತವಾಗಿ ಗುಣಾತ್ಮಕವಾಗಿ ಹೆಚ್ಚಿಸುವ, ಚಿಂತನೆಗೂ, ಭೂಮಿಕೆಗೂ ಸಂಬಂಧವನ್ನು ಗ್ರಹಿಸುವ ತಿಳುವಳಿಕೆ ನೀಡುವ ಜವಾಬ್ದಾರಿ ಪಡೆದಿರುತ್ತಾನೆ. ಸ್ಥಳೀಯ ಸದ್ಯದ ಸಮಸ್ಯೆ ಹೇಗೆ ಪ್ರಾದೇಶಿಕ, ರಾಷ್ಟ್ರೀಯ, ಜಾಗತಿಕ ಸಮಸ್ಯೆಗಳಿಗೆ ಸಂಬಂಧಿಸಿದ್ದು ಎನ್ನುವ ತಿಳುವಳಿಕೆ ಮೂಡುವಂತೆ ಮಾಡಬೇಕು. ಸಂಘಟನೆಯನ್ನು, ಮುಂಚೂಣಿಯವರನ್ನು ಉಳಿಸಿಕೊಳ್ಳುತ್ತಲೇ ಹೋರಾಡುವುದು ಹೇಗೆ ಇಡೀ ಪ್ರತಿಭಟನೆಯ ಅಂತಿಮಘಟ್ಟದಲ್ಲಿ, ಮುಂದೆ ಇರುವ ನಾಯಕರು ಕೆಲವರಾದರೂ ಜೀವ ತೆರುವ ಪ್ರಸಂಗ ಬಂದಾಗ, ಇಡೀ ಚಳವಳಿಯಲ್ಲಿ ಭಾಗವಹಿಸಿದವರಲ್ಲಿ ಯಾರೂ ಹೋರಾಟದ ಬಗೆಗೇ ವಿಮುಖರಾಗದಂತೆ, ಪ್ರತಿಯೊಂದು ದಬ್ಬಾಳಿಕೆಯ ಸಮಯದಲ್ಲಿ, ಬಂದೇ ಬರುವ ಪ್ರಭುತ್ವದ ವರ್ಗದ ದಬ್ಬಾಳಿಕೆ, ಹಿಂಸೆಯ ಪ್ರಸಂಗಗಳು, ಮತ್ತಿಷ್ಟು ಕೆಚ್ಚು, ಕಿಚ್ಚು ಉಂಟುಮಾಡುವಂತೆ, ಇನ್ನೂ ದೃಢವಾಗುವಂತೆ ಗುಂಪನ್ನು ಬೆಸೆಯುವುದು ಹೇಗೆ ಇವೆಲ್ಲ ಈ ಬರವಣಿಗೆಗಳಲ್ಲಿ ವ್ಯಕ್ತವಾಗುತ್ತದೆ. ಲೆನಿನ್ ಹೇಳುವ 'ಕ್ರಾಂತಿಯ ಸಂಘಟನೆ ಒಂದು ಕಲೆ' ಎಂದರೆ ಏನು ಎಂದು ಅನುಭವವಾಗುತ್ತದೆ. ಇಲ್ಲಿ ಬರುವ ಮಾಸ್ತರು, ಎಲ್ಲೂ ದೀರ್ಘ ಉಪನ್ಯಾಸ ನೀಡುವುದಿಲ್ಲ. ಸಂದರ್ಭ ಬೆಳೆದಂತೆಲ್ಲ, ಆಗಾಗ್ಗೆ, ಒಂದು ಸಣ್ಣ ವಾಕ್ಯದಲ್ಲಿ ಒಂದೊಂದು ತಾತ್ವಿಕ ವಿಷಯವನ್ನು ಅಕಸ್ಮಾತ್ ಎನ್ನುವಂತೆ ಹೇಳುತ್ತಾರೆ. ಅದರ ಸಂಪೂರ್ಣ ಅರ್ಥವನ್ನು ಗ್ರಹಿಸುವಷ್ಟು ಭಾಗವಹಿಸುವವರು ಅನುಭವದಿಂದ ಆಗ ಪಕ್ವವಾಗಿರುತ್ತಾರೆ. ಬೆಳೆಯುತ್ತಾ ಹೋಗುತ್ತಾರೆ. ಈ ಮಾಸ್ತರು ಒಂದು ಸಾರ್ವಕಾಲಿಕ ಪಾತ್ರ. ಈ ಕ್ರಾಂತಿ ಪ್ರಕ್ರಿಯೆಯನ್ನು ತಿಳಿಯುವುದಕ್ಕೆ ಕಯ್ಯೂರಿನ ಈ ಪ್ರಸಂಗ ಮತ್ತು ಈ ಬರಹಗಳು ಎಲ್ಲ ಕಾಲಕ್ಕೂ ಅಭ್ಯಸನೀಯ. ಕೆ. ಮಾಧವನ್‌ರವರು ತಮ್ಮ ಆತ್ಮಕತೆಗೆ ''ತೇಜಸ್ವಿನಿ ತೀರದಲ್ಲಿ'' ಎಂದರೆ, ಸಿ. ಕೃಷ್ಣನ್ ನಾಯರ್‌ರವರ ಕುರಿತ ಪುಸ್ತಿಕೆಯೊಂದು ''ತೇಜಸ್ವಿನಿ ನೀನೆ ಸಾಕ್ಷಿ'' ಎನ್ನುತ್ತದೆ. ಈ ಸಂದರ್ಭದಲ್ಲಿ ಪಕ್ಷದ ಕಾರ್ಯಕರ್ತರೂ, ಪತ್ರಕರ್ತರೂ, ನ್ಯಾಯಾಲಯದ ಕಟ್ಲೆಯ ವರದಿಗಾರರೂ ಆಗಿ ಭಾಗವಹಿಸಿದ ನಿರಂಜನರು ತಮ್ಮ ಪ್ರೀತಿಯ ಮಗಳಿಗೆ 'ತೇಜಸ್ವಿನಿ' ಎಂದು ಹೆಸರಿಸುತ್ತಾರೆ. ಈಗಲೂ ಈ ವಿಚಾರಗಳ ತಿಳಿವಿನಿಂದ ಈ ಸ್ಮಾರಕದ ಹತ್ತಿರ ಹೋದಾಗ ಈ ತೇಜಸ್ವಿನಿ ನಮಗೂ ಅದೇ ಸೆಳೆತ ಉಂಟುಮಾಡುವಷ್ಟು ಪ್ರಭಾವಿ ರೂಪಕವಾಗಿ ಕಾಣುತ್ತಾಳೆ. ತನ್ನ ಆಳ ಬಿಟ್ಟುಕೊಡದ, ಮಂದಗತಿಯೇ ಎನಿಸುವ ಗಾಂಭೀರ್ಯವಿದೆ ಆಕೆಯ ಹರಿವಿನಲ್ಲಿ. ಕೇರಳದಲ್ಲಿ ಎಡಪಂಥದ ಬೇರೂರುವಿಕೆಗೆ ಕಯ್ಯೂರಿನ ಕೊಡುಗೆ ಅವಿಸ್ಮರಣೀಯ.

**ಕೆ. ಎಸ್. ಪಾರ್ಥಸಾರಥಿ**
ನಂ. ೨೪೭, 'ಬೆಳಕು', ವನಸಿರಿ ಬಡಾವಣೆ, ವಿದ್ಯಾನಗರ, ಬೆಟ್ಟಹಲಸೂರು ಅಂಚೆ
ಬೆಂಗಳೂರು - ೫೬೨ ೧೫೭



ಗೊಂಬೆ ಕುಣಿಸುತ್ತಾ, ಹಾಡು ಹೇಳುತ್ತಾ ಗರ್ದಿ ಗಮ್ಮತ್ತು ತೋರಿಸುವವ

ಗರ್ದಿ ಗಮ್ಮತ್ತಿನ ಪೆಟ್ಟಿಗೆ

# ಗರ್ದೀ ಗಮ್ಮತ್ತ್ ನೋಡಾ...

"ಗರ್ದಿ ಗಮ್ಮತ್ತ್ ನೋಡಾ, ಹುಡ್ಗಿ ತಾರೀಪ್ ನೋಡಾ, ಒಡ್ಡರ ನಾಗವ್ವ ಬಂದಾಳ್ ನೋಡಾ, ಎಂಟು ಇಲಿ ಹೋಡ್ದು ಹ್ಯಾಂಗ ಕುಂತಾಳ ನೋಡಾ, ದಿಲ್ಲಿ ಶಾರಾ ನೋಡ, ಮುಂಬೈ ಬಜಾರ್ ನೋಡಾ, ಮುನ್ರಾಬಾದ್ ಡ್ಯಾಮ್ ನೋಡಾ,..." – ಹೀಗೆಂದು ಹಾಡುತ್ತಾ ಮಕ್ಕಳ ಮನಸ್ಸನ್ನು ರಂಜಿಸುವ ಆ ಗರ್ದಿ ಗಮ್ಮತ್ತಿನ ಜನ ಈಗ ಕಾಲನ ದಾಳಿಗೆ ಸಿಕ್ಕು ಕಣ್ಮರೆಯಾಗಿದ್ದಾರೆ. ಗರ್ದಿ ಗಮ್ಮತ್ತಿನವರು ಬಂದರೆಂದರೆ ಮಕ್ಕಳಿಗೆ ಎಲ್ಲಿಲ್ಲದ ಹುರುಪು, ಸಂತಸ. ಪುಟ್ಟದಾದ ಕಟ್ಟಿಗೆ ಡಬ್ಬಿಯನ್ನು ಹೊಂದಿಸಿ, ಅದಕ್ಕೆ ಕೊಳವೆಯಾಕಾರದ ಎರಡು ಮೂರು ಕಿಂಡಿಗಳನ್ನು ಜೋಡಿಸಿಕೊಂಡು ಅದರ ಮೇಲೆ ಪುಟ್ಟದಾದ ಬೊಂಬೆಯನ್ನು ಇಟ್ಟು, ಈ ಪುಟ್ಟದಾದ ಪೆಟ್ಟಿಗೆಯನ್ನು ಸಣ್ಣದಾದ ಸ್ಟ್ಯಾಂಡಿನ ಮೇಲಿಟ್ಟಿರುತ್ತಾರೆ. ಡಬ್ಬದ ಒಳಗೆ ದೀಪದ ಬೆಳಕು ಇರುತ್ತದೆ. ಆ ಬೆಳಕಿನಲ್ಲಿ ಒಳಗಿದ್ದ ಬಣ್ಣ ಬಣ್ಣದ ಚಿತ್ರಗಳನ್ನು ಮೇಲಿನ ದಾರದಿಂದ ಎಳೆದಾಗ ಅವು ಒಳಗಡೆ ಸುಂದರವಾಗಿ ಕಾಣಿಸುತ್ತವೆ. ನೋಡುವವರಿಗೆ ಸಿನೆಮಾದಂತೆ ರಂಜನೀಯವಾಗಿ ಕಾಣಿಸುತ್ತವೆ.

ಇದನ್ನು ತಂದ ಗರ್ದಿ ಗಮ್ಮತ್ತಿನವರು ತಲೆಗೆ ಜುಟ್ಟನ್ನು ತಿರುಗಿಸುತ್ತಾ, ಡಬ್ಬದ ಮೇಲಿರುವ ಗೊಂಬೆಯನ್ನು ಕೈಯಿಂದ ಕುಣಿಸುತ್ತಾ, ಆ ಕಟ್ಟಿಗೆಯ ಡಬ್ಬದ ಮೇಲೆ ತಾಳದಿಂದ ಬಾರಿಸುತ್ತಾ, ಮೇಲಿನ ಹಾಡನ್ನು ಹಾಡುತ್ತಾರೆ. ಮಕ್ಕಳು ಅದಕ್ಕೆ ಹೊಂದಿದ ಕೊಳವೆಯಲ್ಲಿ ಕಣ್ಣಿಟ್ಟು ನೋಡುತ್ತಾರೆ. ಅದು ಬಲು ರಂಜನೀಯವಾಗಿರುತ್ತದೆ. ಗರ್ದಿ ಎಂದರೆ ದೊಡ್ಡ, ಸಡಗರ, ವೈಭವ, ಭಾರಿಯಾದ, ಗಮ್ಮತ್ತು ಎಂದರೆ ತಮಾಷೆ, ವಿನೋದ, ಮೋಜು, ಗತ್ತು ಎಂಬ ಅರ್ಥವಿದೆ. ಸಡಗರದಿಂದ ಮಕ್ಕಳಿಗೆ ವಿನೋದವನ್ನುಂಟುಮಾಡುವುದರಿಂದ ಈ ಹೆಸರು ಬಂದಿರಬೇಕು. ಅಂದು ಸಿನಿಮಾ ಈ ನೆಲಕ್ಕೆ ಕಾಲಿಡದ ಸಂದರ್ಭದಲ್ಲಿ ಇದು ಗ್ರಾಮೀಣರ ಪಾಲಿಗೆ ಸಿನಿಮಾ ಆಗಿತ್ತು. ಈ ದೇಶೀಯ ಕಲೆಯು ಸಿನಿಮಾ ಆವಿಷ್ಕಾರದ ಪ್ರೇರಣೆಗೆ ಕಾರಣವಾದ ಸಸಿ. ಇದನ್ನು ಹೊತ್ತು ತಿರುಗುವ ಅಲೆಮಾರಿಗಳಾದ ಈ ಕಲಾವಿದರು ಊರೂರು ಸುತ್ತುತ್ತಾ ಓಣಿಓಣಿಗಳಲ್ಲಿ ಇದನ್ನಿಟ್ಟು ಮಕ್ಕಳಿಗೆ ಮನರಂಜನೆಯನ್ನು ಒದಗಿಸುತ್ತಿದ್ದರು. ಈ ಕಲೆಯು ಅವರ ಬದುಕಿಗೆ ಆಸರೆಯಾಗಿತ್ತು. ಆದರೆ ಇಂದು ಸಿನಿಮಾ, ಟಿ.ವಿ.ಗಳಲ್ಲಿನ ಚಿತ್ರಗಳನ್ನು ನೋಡಿದವರಿಗೆ ಇದು ನೀರಸವಾಗಿ ಕಾಣುವುದರಿಂದ ನೋಡುಗರಿಲ್ಲದೆ ಈ ಕಲೆಯು ಮೂಲೆಗುಂಪಾಗಿದೆ. ಅದನ್ನು ವೃತ್ತಿಯಾಗಿ ಮಾಡಿಕೊಂಡವರು ಹೊಟ್ಟೆಪಾಡಿಗಾಗಿ ಬೇರೆ ಬೇರೆ ವೃತ್ತಿಗಳಿಗೆ ಮೊರೆಹೋದದ್ದರಿಂದ ಅನಿವಾರ್ಯವಾಗಿ ಕಾಲನ ದಾಳಿಗೆ ಗುರಿಯಾಗಿ ಅದು ಕಣ್ಮರೆಯಾಗಿದೆ.

**ಡಾ॥ ಮಲ್ಲಿಕಾರ್ಜುನ ಕುಂಬಾರ**
'ವಚನ', ರಾಜೂರ - ೫೮೨ ೨೩೦, ರೋಣ ತಾಲೂಕು, ಗದಗ ಜಿಲ್ಲೆ



ಗರ್ದಿ ಗಮ್ಮತ್ತನ್ನು ನೋಡುತ್ತಿರುವ ಮಕ್ಕಳು

# ಬೂದಿ ಮಾತ್ರ ಬಲ್ಲದು ಬೇಯುವ ಬೇಗೆಯನ್ನು

ಬೂದಿ ಮಾತ್ರ ಬಲ್ಲದು ಬೇಯುವ ಬೇಗೆಯನ್ನು. ಕಡತದ ಹೊಟ್ಟೆಯೊಳಗೆ ಅವಿತು ಕೂತಿದ್ದ ಕಾಗದದ ಮೇಲಿನ ಅಂಕಿಅಂಶಗಳು ರೋಚಕ ಕತೆಗಳನ್ನು ಹೇಳುತ್ತಿದ್ದರೆ, ವಾಸ್ತವ ಮಾತ್ರ ತನ್ನ ಎಂದಿನ ವಿಕೃತ ಮುಖವನ್ನೇ ಹೊದ್ದು ಕುಣಿಯುತ್ತಿತ್ತು. ಶೋಷಿತರಿಗೆ ದೇವಾಲಯ ಪ್ರವೇಶದ ಹೆಸರಿನಲ್ಲಿ ಹೆಸರೇ ಇಲ್ಲದೆ ಶಿಥಿಲಗೊಂಡ, ಕುಸಿದುಬೀಳುತ್ತಿರುವ, ಯಾರೂ ಹೋಗದ ಪಾಳು ದೇವಾಲಯಗಳು ಮಹಾತ್ಮನಿಗೆ ಬೆಂಬಲ ತೋರಿಸುವ ನೆಪದಲ್ಲಿ ಸೇರಿಕೊಂಡಿದ್ದನ್ನು ಗುರುತಿಸಿದ ಅಂಬೇಡ್ಕರ್, ಅದರಲ್ಲಿ ಗಾಂಧೀಜಿಯ ಕ್ರಿಯಾಕ್ಷೇತ್ರವಾದ ಗುಜರಾತಿನ ಒಂದೇ ಒಂದು ದೇವಾಲಯವೂ ಇಲ್ಲವೆಂದು, ಅದು ಅಂದಿಗೂ ಸಾಮಾಜಿಕವಾಗಿ ಅಷ್ಟೇ ಗಡುಸಾಗಿ, ಪ್ರತಿಗಾಮಿಯಾಗಿ ಉಳಿದಿರುವುದನ್ನು ಗುರುತಿಸಿದ್ದರು. ಅಂಬೇಡ್ಕರ್‌ಗೆ ಎಂದೋ ಗೊತ್ತಾಗಿದ್ದ 'ಹಿಂದು ಧರ್ಮ ಮತ್ತು ಅಸ್ಪೃಶ್ಯರ ವಿಮೋಚನೆ ಒಟ್ಟೊಟ್ಟಿಗೆ ಚಲಿಸಲಾರವು' ಎಂಬ ಕಠಿ ಸತ್ಯವನ್ನು ಗಾಂಧಿ ಪಾಳಯ ಒಪ್ಪಿಕೊಳ್ಳಲು ಸಿದ್ಧವಿರಲಿಲ್ಲ. ಹಿಂದು ಧರ್ಮದ ಮೂಲಕವೇ ಅಸ್ಪೃಶ್ಯತೆಯನ್ನು ತೊಡೆದುಹಾಕುವೆನೆಂಬ ಹುಂಬ ವಿಶ್ವಾಸದಲ್ಲಿ ಗಾಂಧಿ ನಿಂತಿದ್ದರು. ನಂತರ ನಡೆದ ವಿದ್ಯಮಾನಗಳು 'ಪೂನಾ ಒಪ್ಪಂದಕ್ಕೆ ಸಹಿ ಮಾಡಿದ್ದು ನನ್ನ ಜೀವನದಲ್ಲಿ ಮಾಡಿದ ದೊಡ್ಡ ತಪ್ಪು' ಎಂದು ಅಂಬೇಡ್ಕರ್ ಪರಿತಪಿಸುವಂತೆ ಮಾಡಿದವು.



೧೯೩೨ ಸೆಪ್ಟೆಂಬರ್, ೨೪ರಂದು ಹಿಂದು ಮುಖಂಡರು ಹಾಗೂ ಅಂಬೇಡ್ಕರ್ ಸೇರಿದಂತೆ ಶೋಷಿತ ವರ್ಗಗಳ ಮುಖಂಡರ ನಡುವೆ ಏರ್ಪಟ್ಟ 'ಪೂನಾ ಒಪ್ಪಂದ'ವು ಐತಿಹಾಸಿಕ ಎಂದು ಪರಿಗಣಿಸಲ್ಪಟ್ಟಿದೆ. ಅದು ಐತಿಹಾಸಿಕವಾಗಿದ್ದು ಹಲವಾರು ಕಾರಣಗಳಿಗೆ. ಹಿಂದೂ ಧರ್ಮದ ಅಸ್ಪೃಶ್ಯತೆ ಕಳಂಕವನ್ನು ತೊಡೆದುಹಾಕಲು ಮತ್ತು ಮೇಲ್ಜಾತಿ ಹಿಂದುಗಳ ಧಾರ್ಮಿಕ ಪ್ರಜ್ಞೆ ಜಾಗೃತಗೊಳಿಸಬೇಕೆಂದು ೧೯೩೨ರ ಸೆಪ್ಟೆಂಬರ್ ೨೦ರಂದು ಗಾಂಧಿ ಪೂನಾದ ಯರವಾಡಾ ಜೈಲಿನಲ್ಲಿ ಆಮರಣಾಂತ ಉಪವಾಸ ಶುರು ಮಾಡಿದರು. ಎರಡನೆಯ ದುಂಡು ಮೇಜಿನ ಪರಿಷತ್ತಿನಲ್ಲಿ ಶೋಷಿತ ಸಮುದಾಯಗಳಿಗೆ ಹಿಂದುಗಳಿಂದ ಪ್ರತ್ಯೇಕ ಮತದಾನ ವ್ಯವಸ್ಥೆ ನೀಡಿದ್ದನ್ನು ಅವರು ಒಪ್ಪಿರಲಿಲ್ಲ. ಅದರ ರದ್ದತಿಗೆ ಅಂಬೇಡ್ಕರ್ ಮತ್ತಿತರ ನಾಯಕರ ಮನವೊಲಿಸುವುದು ಉಪವಾಸದ ಹಿಂದಿದ್ದ ಮತ್ತೊಂದು ಉದ್ದೇಶವಾಗಿತ್ತು. ಕೊನೆಗೆ ಸೆಪ್ಟೆಂಬರ್ ೨೪ನೇ ತಾರೀಕು ಹಿಂದು ಮುಖಂಡರು ಮತ್ತು ಅಂಬೇಡ್ಕರ್ ಸಹವರ್ತಿಗಳ ನಡುವೆ ಒಪ್ಪಂದವೇರ್ಪಟ್ಟು ಪ್ರತ್ಯೇಕ ಮತದಾನ ವ್ಯವಸ್ಥೆಯ ಬದಲಾಗಿ ಶೋಷಿತ ಸಮುದಾಯಗಳಿಗೆ ಸ್ಥಾನ ಮೀಸಲು, ಮೀಸಲು ಕ್ಷೇತ್ರಗಳಲ್ಲಿ ಎರಡು ಹಂತದ ಚುನಾವಣೆ, ಕೆಲ ಕಾಲಾವಧಿಯ ನಂತರ ಪ್ರಾಥಮಿಕ ಚುನಾವಣೆ ರದ್ದತಿ, ಮೀಸಲು ಸ್ಥಾನಗಳ ಏರಿಕೆ ಮಾಡಲಾಯಿತು. ಗಾಂಧಿ ಉಪವಾಸ ಕೂತ ನಂತರ ಹಿಂದು ದೇವಾಲಯಗಳು ದಲಿತರಿಗೆ ಪ್ರವೇಶ ನೀಡಬೇಕೆಂಬ ಶೋಷಿತರ ಕೂಗಿಗೆ ಜೀವ ಬಂದು ದೇಶದ ಅಲ್ಲಲ್ಲಿ ಅಸ್ಪೃಶ್ಯತೆ ಆಚರಿಸುವುದಿಲ್ಲವೆಂದು ಪಣತೊಟ್ಟ ಸಾರ್ವಜನಿಕ ಪ್ರಕಟಣೆಗಳು ಹೊರಬಿದ್ದವು. ದೇಶಾದ್ಯಂತ ಅಸ್ಪೃಶ್ಯತೆ ಪಾಪ ಎಂದು ಸವರ್ಣೀಯ ಹಿಂದುಗಳೆಲ್ಲ ಭಾವಿಸಿ ಅದಿನ್ನು ಮಾಯವಾಗೇ ಬಿಟ್ಟಿತೇನೋ ಎಂಬಂತಹ ವಾತಾವರಣವು ಕೆಲಕಾಲ ಮೂಡಿತು.

ಬೂದಿ ಮಾತ್ರ ಬಲ್ಲದು ಬೇಯುವ ಬೇಗೆಯನ್ನು. ಕಡತದ ಹೊಟ್ಟೆಯೊಳಗೆ ಅವಿತು ಕೂತಿದ್ದ ಕಾಗದದ ಮೇಲಿನ ಅಂಕಿಅಂಶಗಳು ರೋಚಕ ಕತೆಗಳನ್ನು ಹೇಳುತ್ತಿದ್ದರೆ, ವಾಸ್ತವ ಮಾತ್ರ ತನ್ನ ಎಂದಿನ ವಿಕೃತ ಮುಖವನ್ನೇ ಹೊದ್ದು ಕುಣಿಯುತ್ತಿತ್ತು. ಶೋಷಿತರಿಗೆ ದೇವಾಲಯ ಪ್ರವೇಶದ ಹೆಸರಿನಲ್ಲಿ ಹೆಸರೇ ಇಲ್ಲದೆ ಶಿಥಿಲಗೊಂಡ, ಕುಸಿದುಬೀಳುತ್ತಿರುವ, ಯಾರೂ ಹೋಗದ ಪಾಳು ದೇವಾಲಯಗಳು ಮಹಾತ್ಮನಿಗೆ ಬೆಂಬಲ ತೋರಿಸುವ ನೆಪದಲ್ಲಿ ಸೇರಿಕೊಂಡಿದ್ದನ್ನು ಗುರುತಿಸಿದ ಅಂಬೇಡ್ಕರ್, ಅದರಲ್ಲಿ ಗಾಂಧೀಜಿಯ ಕ್ರಿಯಾಕ್ಷೇತ್ರವಾದ ಗುಜರಾತಿನ ಒಂದೇ ಒಂದು ದೇವಾಲಯವೂ ಇಲ್ಲವೆಂದು, ಅದು ಅಂದಿಗೂ ಸಾಮಾಜಿಕವಾಗಿ ಅಷ್ಟೇ ಗಡುಸಾಗಿ, ಪ್ರತಿಗಾಮಿಯಾಗಿ ಉಳಿದಿರುವುದನ್ನು ಗುರುತಿಸಿದ್ದರು. ಅಂಬೇಡ್ಕರ್‌ಗೆ ಎಂದೋ ಗೊತ್ತಾಗಿದ್ದ 'ಹಿಂದು ಧರ್ಮ ಮತ್ತು ಅಸ್ಪೃಶ್ಯರ ವಿಮೋಚನೆ ಒಟ್ಟೊಟ್ಟಿಗೆ ಚಲಿಸಲಾರವು' ಎಂಬ ಕಠಿ ಸತ್ಯವನ್ನು ಗಾಂಧಿ ಪಾಳಯ ಒಪ್ಪಿಕೊಳ್ಳಲು ಸಿದ್ಧವಿರಲಿಲ್ಲ. ಹಿಂದು ಧರ್ಮದ ಮೂಲಕವೇ ಅಸ್ಪೃಶ್ಯತೆಯನ್ನು ತೊಡೆದು ಹಾಕುವೆನೆಂಬ ಹುಂಬ ವಿಶ್ವಾಸದಲ್ಲಿ ಗಾಂಧಿ ನಿಂತಿದ್ದರು. ನಂತರ ನಡೆದ ವಿದ್ಯಮಾನಗಳು 'ಪೂನಾ ಒಪ್ಪಂದಕ್ಕೆ ಸಹಿ ಮಾಡಿದ್ದು ನನ್ನ ಜೀವನದಲ್ಲಿ ಮಾಡಿದ ದೊಡ್ಡ ತಪ್ಪು' ಎಂದು ಅಂಬೇಡ್ಕರ್ ಪರಿತಪಿಸುವಂತೆ ಮಾಡಿದವು. ಅಂಬೇಡ್ಕರ್ ಹಾಗೆ ಭಾವಿಸಲು ಕಾರಣವಾದ ಘಟನೆಗಳನ್ನು ಒಪ್ಪಂದದ ನಂತರದ ಘಟನೆಗಳಲ್ಲಿ ಹುಡುಕಬೇಕು. ಸೆಪ್ಟೆಂಬರ್ ಕೊನೆಯಿಂದ ೧೯೩೩ ಏಪ್ರಿಲ್‌ವರೆಗೆ ನಡೆದಿದ್ದನ್ನು ಅವರ ಜೀವನಚರಿತ್ರೆಯಿಂದ ನೋಡಿದರೆ ಇದು ಸ್ಪಷ್ಟವಾಗುತ್ತದೆ.

---

**ಡಾ|| ಎಚ್. ಎಸ್. ಅನುಪಮಾ**

**ಕೆ. ಎಲ್. ಚಂದ್ರಶೇಖರ್ ಐಜೂರ್**

೧೯೩೦ರಲ್ಲಿ ನಾಸಿಕ್‌ನ ಕಾಳಾರಾಮ್ ದೇವಾಲಯ ಪ್ರವೇಶ, ೧೯೩೧ರಲ್ಲಿ ಕೇರಳದ ಕೇಳಪ್ಪನ್ ಅವರ ಗುರುವಾಯೂರು ದೇವಾಲಯ ಪ್ರವೇಶಕ್ಕೆ ನಡೆಸಿದ ಪ್ರಯತ್ನಗಳು ಕಾಂಗ್ರೆಸ್ಸಿನ ಗಮನ ಸೆಳೆಯದೇ ಹೋಗಿದ್ದವು. ಗಾಂಧಿ ಉಪವಾಸ ಶುರು ಮಾಡಿದ ಮರುದಿನವೇ ಮಲಬಾರ್‌ನ ಕೇಳಪ್ಪನ್ ಅಸ್ಪೃಶ್ಯರ ದೇವಾಲಯ ಪ್ರವೇಶ ಕುರಿತು ಗುರುವಾಯೂರು ದೇವಸ್ಥಾನದೆದುರು ಉಪವಾಸ ಕುಳಿತರು. ಅವರಿಗೆ ಗಾಂಧಿ ತಾವಿಬ್ಬರೂ ೧೯೩೩, ಜನವರಿ ೧ರಿಂದ ಒಟ್ಟಿಗೆ ಉಪವಾಸ ಶುರು ಮಾಡೋಣವೆಂದು ಹೇಳಿದ್ದರಿಂದ, ದೇವಾಲಯ ಪ್ರವೇಶಕ್ಕಿಂತ ಅವರ ಜೀವವೇ ದೊಡ್ಡದೆಂದೂ, ಉಪವಾಸ ನಿಲ್ಲಿಸಬೇಕೆಂದೂ ಅಂಬೇಡ್ಕರ್ ಕೇಳಿಕೊಂಡಿದ್ದರಿಂದ ಉಪವಾಸ ನಿಲ್ಲಿಸಿದ್ದರು.

**೧೯೩೨ ಸೆಪ್ಟೆಂಬರ್, ೨೬ :** ನಾಸಿಕ್ ದೇವಾಲಯ ಪ್ರವೇಶ ಹೋರಾಟ ಮಾಡಿದ್ದರೂ ಅಂಬೇಡ್ಕರ್ ಈ ವೇಳೆಗೆ ತಮ್ಮ ನಿಲುವನ್ನು ಬದಲಿಸಿಕೊಂಡಿದ್ದರು. ತನ್ನ ಜನ ದೇವಾಲಯ ಪ್ರವೇಶಕ್ಕಿಂತ ರಾಜಕೀಯ ಅಧಿಕಾರ ಪಡೆಯಲು, ಲೌಕಿಕ ಸವಲತ್ತುಗಳನ್ನು ಪಡೆಯಲು ಮೊದಲು ಶ್ರಮಿಸಬೇಕು ಎಂದು ಭಾವಿಸಿದ್ದರು. ಮುಂಬಯಿಯ ಸಭೆಯೊಂದರಲ್ಲಿ ಮಾತನಾಡುತ್ತ, ''ಕುತ್ತಿಗೆಯ ಸುತ್ತಲಿನ ತುಳಸಿಮಾಲೆ ನಿಮ್ಮನ್ನು ಸಾಲಗಾರರ ಕೈಯಿಂದ ಪಾರುಮಾಡುವುದಿಲ್ಲ, ರಾಮಭಜನೆ ಹಾಡಿದರೆ ಮನೆ ಬಾಡಿಗೆ ಕಡಿಮೆಯಾಗುವುದಿಲ್ಲ, ಪಂಢರಾಪುರ ಯಾತ್ರೆ ತಿಂಗಳ ಕೊನೆಗೆ ಸಂಬಳ ತರುವುದಿಲ್ಲ, ದೇವಾಲಯ ಪ್ರವೇಶ ನಿಮ್ಮ ಆಹಾರಕ್ಕೆ, ಉಡುವ ಬಟ್ಟೆಗೆ, ಶಿಕ್ಷಣಾವಕಾಶಕ್ಕೆ, ರೋಗದ ಮದ್ದಿಗೆ ಹಣ ನೀಡುವುದಿಲ್ಲ, ಬಹುಪಾಲು ಜನ ಅರ್ಥವಾಗದ ಬದುಕಿನ ನಿಗೂಢಗಳ ಕುರಿತು ಮೂಢನಂಬಿಕೆಗಳಲ್ಲಿ ಮುಳುಗಿರುವುದರಿಂದ ಕೆಲವರು ಅದೇ ಅವಕಾಶ ಬಳಸಿ ಸಮಾಜವಿರೋಧಿ ಕೆಲಸದಲ್ಲಿ ತೊಡಗಿದ್ದಾರೆ. ಆದ್ದರಿಂದ ನಿಮ್ಮ ಹೋರಾಟ ರಾಜಕೀಯ ಮತ್ತು ಆರ್ಥಿಕ ಶಕ್ತಿ ಬೆಳೆಸಿಕೊಳ್ಳುವತ್ತ ಇರಲಿ'' ಎಂದು ಸ್ಪಷ್ಟವಾಗಿ ಹೇಳಿದರು.

**ಅಕ್ಟೋಬರ್ ೧೯ :** ಮುಖ್ಯವಾದ ಕ್ರಿಮಿನಲ್ ಕೇಸೊಂದರ ಸಲುವಾಗಿ ಸಾವಂತವಾಡಿಯ ಕೋರ್ಟಿಗೆ ಹೊರಟಿದ್ದ ಅಂಬೇಡ್ಕರ್ ದಾರಿಯಲ್ಲಿ ಗಾಂಧೀಜಿಯನ್ನು ಯರವಾಡಾ ಜೈಲಿನಲ್ಲಿ ಭೇಟಿಯಾದರು. ಅಸ್ಪೃಶ್ಯತೆ ವಿರೋಧಿ ಸಂಘದಲ್ಲಿರಬೇಕಾದ ವ್ಯಕ್ತಿಗಳ ಕುರಿತು ಮಾತನಾಡುತ್ತಾ ಅದರ ವಿವಿಧ ಸಮಿತಿಗಳಲ್ಲಿ ಅಸ್ಪೃಶ್ಯರೇ ಹೆಚ್ಚು ಸಂಖ್ಯೆಯಲ್ಲಿರುವಂತೆ ನೋಡಿಕೊಳ್ಳಬೇಕೆಂದು ಹೇಳಿದರು. ಗಾಂಧೀಜಿ ಬಳಿ ಶೋಷಿತ ಸಮುದಾಯಗಳ ಸಬಲೀಕರಣ ಯತ್ನಗಳು ಇತ್ತೀಚೆಗೆ ಕಡಿಮೆಯಾಗಿರುವ ಬಗ್ಗೆ, ವಿಶೇಷ ಗಣತಿಯ ಅವಶ್ಯಕತೆ ಕುರಿತು ಗಮನ ಸೆಳೆದರು. ಅಸ್ಪೃಶ್ಯತೆ ವಿರೋಧಿ ಸಂಘದ ಚಟುವಟಿಕೆಗಳು ಮುಖ್ಯವಾಗಿ ಆರ್ಥಿಕ, ಶೈಕ್ಷಣಿಕ, ಸಾಮಾಜಿಕ ಉನ್ನತಿಗೆ ಶ್ರಮಿಸುವಂಥವಾಗಿರಬೇಕೆಂದು ಸೂಚಿಸಿದರು.

**ಅಕ್ಟೋಬರ್ ೨೮ :** ಮುಂಬಯಿಯ ಮತ್ತೊಂದು ಸಭೆಯಲ್ಲಿ ಮಾತನಾಡುತ್ತಾ, ''ದೇವಾಲಯ ಪ್ರವೇಶ ಮತ್ತು ಸಹಪಂಕ್ತಿ ಭೋಜನದ ಸಂಭ್ರಮದಲ್ಲಿ ಕಳೆದು ಹೋಗಬೇಡಿ. ನಿಮ್ಮ ಕಷ್ಟಗಳು ಪೂರ್ವಜನ್ಮದ ಕರ್ಮ ಎಂದು ನೀವು ಭಾವಿಸದೇ ಇದ್ದರೆ ಒಳ್ಳೆಯದು. ನಿಮ್ಮ ಬಡತನ ಅನಿವಾರ್ಯವೆಂಬ ಭಾವನೆ ತಪ್ಪು. ನಿಮ್ಮನ್ನೇ ನೀವು ಗುಲಾಮರೆಂದು ಭಾವಿಸಿಕೊಳ್ಳುವುದನ್ನು ಮೊದಲು ನಿಲ್ಲಿಸಿ'' ಎಂದರು.

**ನವೆಂಬರ್ ೭ :** ಮೂರನೆಯ ದುಂಡುಮೇಜಿನ ಪರಿಷತ್ತಿನ ಸಲುವಾಗಿ ಲಂಡನ್ನಿಗೆ ಹೊರಟರು. ಹಡಗಿನಲ್ಲಿ ಪ್ರಯಾಣಿಸುವಾಗ ಮಿತ್ರನಿಗೆ ಬರೆದ ಪತ್ರವೊಂದರಲ್ಲಿ, ''ನನಗೆ ಶುಭ ವಿದಾಯ ಹೇಳಲು ಅಪಾರ ಜನ ಸೇರಿದ್ದರು. ನನ್ನ ಮನಸ್ಸು ಏಕಾಂತ ಮತ್ತು ಪ್ರಶಾಂತ ವಾತಾವರಣಕ್ಕಾಗಿ ಹಾತೊರೆಯುತ್ತಿದೆ. ಅಭಿಮಾನಿಗಳ ಈ ತೆರನ ಮೂರ್ತಿಪೂಜೆ ಉಸಿರು ಕಟ್ಟಿಸುತ್ತಿದೆ'' ಎಂದು ಬರೆದರು. ಆ ವೇಳೆಗೆ ಹರಿಜನ ಚಳುವಳಿಯ ಕುರಿತು ಗಾಂಧೀಜಿ ನೀಡಿದ ಹೇಳಿಕೆಗಳನ್ನು ತಿಳಿದುಕೊಂಡು, ''ಗಾಂಧಿ ನಮ್ಮ ದಾರಿಗೆ ಬರುತ್ತಿದ್ದಾರೆ, ಆದರೆ ಗಾಂಧೀಜಿಯ ಮನಸ್ಸು ಅಂತರ್ಜಾತಿ ವಿವಾಹ ಮತ್ತು ಸಹಭೋಜನವನ್ನು ಒಪ್ಪುವಷ್ಟು ಇನ್ನೂ ಮಾಗಿಲ್ಲ'' ಎಂದು ಬರೆದರು.

ಆ ಹಡಗಿನಲ್ಲಿಯೇ ಅಂಬೇಡ್ಕರರಿಗೆ ಒಂದು ಕಹಿ ಅನುಭವವಾಯಿತು. ಸರ್ ಪಟ್ಟಾನಿ ಎನ್ನುವವರ ಭೇಟಿಯಾಯಿತು. ಆತ ಮಾತನಾಡುತ್ತಾ, ''ಅಂದು ಮುಂಬಯಿ ಸಭೆಯಿಂದ ಅರ್ಧಕ್ಕೇ ಎದ್ದುಹೋದೆ. ನಂತರ ಏನು ನಡೆಯಿತು'', ಎಂದು ಪ್ರಶ್ನಿಸಿದರು. ಅಂಬೇಡ್ಕರ್, ನಡುವೆ ಏಕೆ ಎದ್ದು ಹೋದಿರಿ ಎಂದು ಕೇಳಿದಾಗ, ''ಹಿಂದು ಧರ್ಮಗ್ರಂಥಗಳ ಪ್ರಕಾರ ಒಳ್ಳೆಯ ವ್ಯಕ್ತಿಗೆ ದುಷ್ಟನೊಬ್ಬ ಮಾನಹಾನಿ ಆಗುವಂತೆ ಮಾತನಾಡುತ್ತಿದ್ದರೆ ಆ ಸ್ಥಳ ಬಿಟ್ಟು ಎದ್ದುಹೋಗಬೇಕು ಅಥವಾ ದುಷ್ಟನ ನಾಲಿಗೆ ಎಳೆದು ಕತ್ತರಿಸಬೇಕು. ಅದಕ್ಕೇ ಎದ್ದು ಹೋದೆ'' ಎಂದರು. ಸಿಟ್ಟಿನಿಂದ ಉರಿದು ಹೋದರೂ ತೋರಗೊಡದ ಅಂಬೇಡ್ಕರ್ ವ್ಯಂಗ್ಯದ ದನಿಯಲ್ಲಿ ತಣ್ಣಗೆ, ''ನಿಮ್ಮ ಹಿಂದು ಧರ್ಮ ಗ್ರಂಥಗಳು ಹೊಗಳುಭಟ್ಟರಿಗೆ, ಸೋಗಲಾಡಿಗಳಿಗೆ ಏನು ಶಿಕ್ಷೆ ವಿಧಿಸಿವೆ ನೈಟ್ ಸಾಹೇಬರೇ'', ಎಂದು ಕೇಳಿದಾಗ ಆತ, ''ನೀವು, ಯಾರ ಬಗ್ಗೆ ಏನು ಮಾತನಾಡುತ್ತಿದ್ದೀರಿ ಎಂದು ಗೊತ್ತು ತಾನೇ'' ಎಂದರು. ಅಂಬೇಡ್ಕರ್, ''ನಾನು ಯಾರ ಬಗ್ಗೆ ಮಾತನಾಡುತ್ತಿದ್ದೇನೆಂದು ನನಗೂ ಗೊತ್ತು, ನಿಮಗೂ ಗೊತ್ತು. ಗಾಂಧಿಯ ಸುತ್ತ ತುಂಬಿಹೋಗಿರುವ ಹೊಗಳುಭಟ್ಟರನ್ನು ಮೊದಲು ಆಚೆ ಸರಿಸಿ'', ಎಂದು ಖಾರವಾಗಿ ಹೇಳಿದರು. ಅವರ ಕಾವೇರಿದ ಚರ್ಚೆಯನ್ನು ತಣಿಸಲು ಹಡಗಿನ ಪೊಲೀಸ್ ಆಫೀಸರ್ ಬರಬೇಕಾಯಿತು.

**ನವೆಂಬರ್ ೧೪ :** ಅಸ್ಪೃಶ್ಯತಾ ವಿರೋಧಿ ಸಂಘದ ಅಧ್ಯಕ್ಷ ಠಕ್ಕರ್ ಬಾಪಾಗೆ ಅಂಬೇಡ್ಕರ್ ಒಂದು ಪತ್ರ ಬರೆದರು. ಅಸ್ಪೃಶ್ಯತೆ ನಿವಾರಣೆಗಾಗಿ ಹಿಂದು ಸಮಾಜ ಸುಧಾರಕರಿಗೆ ನೀಡಿದ ಅತಿಮೌಲಿಕ ಸಲಹೆ ಎಂದು ಪರಿಗಣಿಸಲಾಗಿರುವ ಆ ಪತ್ರದ ಸಾರಾಂಶ ಹೀಗಿದೆ : ''ಸ್ಪೃಶ್ಯ-ಅಸ್ಪೃಶ್ಯರು ಕಾನೂನಿನಿಂದಾಗಲೀ, ಪ್ರತ್ಯೇಕ ಅಥವಾ ಒಂದೇ ಮತಪಟ್ಟಿಯಿಂದಾಗಲೀ ಒಂದಾಗಲು ಸಾಧ್ಯವಿಲ್ಲ. ಅವರನ್ನು ಒಟ್ಟಿಗೆ ಬಂಧಿಸಬಲ್ಲದ್ದು ಒಂದೇ – ಅದು ಪ್ರೀತಿ. ಶೋಷಿತ



ಜನನ : ೧೪-೪-೧೮೯೧

ಸಮುದಾಯಗಳು ತಮ್ಮ ಕಷ್ಟದಿಂದ ಮುಕ್ತಿ ಹೊಂದಬೇಕಾದರೆ ಮೇಲ್ಜಾತಿಯ ಹಿಂದು ಯೋಚಿಸುವಂತೆ ಮಾಡಿ ಆತ ಬದಲಾಗುವಂತೆ ಮಾಡಬೇಕು. ಮೇಲ್ಜಾತಿ ಹಿಂದುಗಳ ಮನಃಸ್ಥಿತಿಯಲ್ಲಿ ಕ್ರಾಂತಿಕಾರಿ ಬದಲಾವಣೆ ಆಗಬೇಕಿದೆ. ಅಸ್ಪೃಶ್ಯತೆ ವಿರೋಧಿ ಸಂಘವು ಶೋಷಿತ ಸಮುದಾಯಗಳಿಗೆ ನೀರು, ರಸ್ತೆ, ಶಾಲೆಗಳನ್ನು ಬಳಸುವ ಅವಕಾಶ ಮಾಡಿಕೊಡಬೇಕು. ಇದು ಹಿಂದು ಸಮಾಜದಲ್ಲಿ ಕ್ರಾಂತಿಯನ್ನು ಉಂಟುಮಾಡಿದಂತೆ. ಅದಕ್ಕಾಗಿ ನಿಮ್ಮ ಸಂಘಕ್ಕೆ ಕಾರ್ಯಕರ್ತರ ಸೇನೆಯೇ ಬೇಕಾಗುತ್ತದೆ. ಅದರಲ್ಲೂ ಗ್ರಾಮೀಣ ಪ್ರದೇಶಗಳಲ್ಲಿ ಕೆಲಸ ಮಾಡುವವರು ಬೇಕಾಗಿದ್ದಾರೆ. ಇಂತಹ ಕಾರ್ಯಕ್ರಮ ಸಮಾಜದಲ್ಲಿ ಅಶಾಂತಿ ಮತ್ತು ಹಿಂಸಾತ್ಮಕ ಸನ್ನಿವೇಶ ಸೃಷ್ಟಿಸುತ್ತದೆ ಎನ್ನುವುದು ನಿಜವಾದರೂ ಅಸ್ಪೃಶ್ಯತೆ ನಿವಾರಣೆಗೆ ಕನಿಷ್ಠ ಪ್ರತಿರೋಧ ವಿಧಾನ ಉಪಯೋಗವಾಗುವುದಿಲ್ಲ. ಸವರ್ಣೀಯರ ಸಾಂಪ್ರದಾಯಿಕ ರೂಢಿ ನಿಯಮಗಳ ವಿರುದ್ಧ ಪ್ರಹಾರ ಮಾಡಬೇಕು. ಆಗ ತುರ್ತುಸ್ಥಿತಿಯೊಂದು ಹುಟ್ಟುತ್ತದೆ. ಈ ತುರ್ತು ಹಿಂದುವನ್ನು ಯೋಚಿಸಲು ಹಚ್ಚುತ್ತದೆ. ಆಗ ಆತ ಬದಲಾವಣೆಯನ್ನು ಸುಲಭವಾಗಿ ಒಪ್ಪಿಕೊಳ್ಳಬಲ್ಲ. ಕನಿಷ್ಠ ಪ್ರತಿರೋಧ ಅಥವಾ ಮೌನಕ್ರಾಂತಿ ಯಾವ ತುರ್ತನ್ನೂ ಹುಟ್ಟಿಸುವುದಿಲ್ಲ. ಕಾಳಾರಾಮ್ ದೇವಾಲಯ ಪ್ರವೇಶ, ಚೌಧರ್ ತಲಾ, ಗುರುವಾಯೂರು ಪ್ರವೇಶ ಹೋರಾಟಗಳು ಸಮಾಜ ಸುಧಾರಕರು ವರ್ಷಗಟ್ಟಲೆ ಸಾಧಿಸಲಾಗದ್ದನ್ನು ಕೆಲವೇ ದಿನಗಳಲ್ಲಿ ಸಾಧಿಸಿವೆ.''

ಶೋಷಿತ ಸಮುದಾಯಗಳ ದೀನ ಸ್ಥಿತಿಗೆ, ಬಡತನಕ್ಕೆ ಸಮಾನ ಅವಕಾಶ ಸಿಗದಿರುವುದೇ ಮುಖ್ಯ ಕಾರಣ. ಸಂಘವು ಈ ಬಗ್ಗೆ ಕೆಲಸ ಮಾಡಲು ಶೋಷಿತ ಸಮುದಾಯಗಳ ಕಾರ್ಯಕರ್ತರನ್ನೇ ತಯಾರು ಮಾಡಬೇಕು. ಸ್ವತಃ ನೋವುಂಡವರು ಸವರ್ಣೀಯ ಕಾರ್ಯಕರ್ತರಿಗಿಂತ ಹೆಚ್ಚು ಪ್ರಾಮಾಣಿಕವಾಗಿ, ನಿಷ್ಠೆಯಿಂದ ಕೆಲಸ ಮಾಡಬಲ್ಲರು. ಟಾಲ್‌ಸ್ಟಾಯ್ ಹೇಳಿದಂತೆ, ''ಪ್ರೀತಿಸಬಲ್ಲವನು ಮಾತ್ರ ಸೇವೆ ಮಾಡಬಲ್ಲ. ಆದ್ದರಿಂದ ಸಂಬಳ ಪಡೆವ ಕೆಲಸಗಾರರು ಈ ವಿಷಯದಲ್ಲಿ ಉತ್ತಮ ಆಯ್ಕೆಯಾಗಲಾರರು.''

**ಡಿಸೆಂಬರ್ ೧೯೩೨ :** ಅಂಬೇಡ್ಕರ್ ಲಂಡನ್ ಬಿಡುವ ವೇಳೆಗೆ ಭಾರತದಲ್ಲಿ ದೇವಾಲಯ ಪ್ರವೇಶ ವಿಚಾರ ಬಿಸಿ ಸುದ್ದಿಯಾಗಿತ್ತು. ಜನವರಿ ಒಂದರಿಂದ ಗುರುವಾಯೂರು ದೇವಾಲಯ ಪ್ರವೇಶದ ಸಲುವಾಗಿ ಕೇಳಪ್ಪನ್ ಜೊತೆಗೆ ತಾನೂ ಉಪವಾಸ ಕೂರುವೆನೆಂದು ಹೇಳಿ ಗಾಂಧಿ ಸಂಚಲನ ಮೂಡಿಸಿದ್ದರು. ಆದರೆ ಗಾಂಧಿ ಅನುಯಾಯಿಗಳಲ್ಲಿ ಭಿನ್ನಮತ ಶುರುವಾಗಿತ್ತು. ಪೂನಾ ಒಪ್ಪಂದದ ಮೊದಲು ಗಾಂಧಿ ಉಪವಾಸ ನಿಲ್ಲಿಸಲಿ ಎಂಬ ಅನುಕಂಪದಿಂದ ಸುಧಾರಣೆ ಮಾಡಹೊರಟ ಕೆಲವರು ಆಗ ತಮ್ಮ ನಿಜ ಬಣ್ಣ ತೋರಿದರು. ಕೇರಳದ ಜಾಮೊರಿನ್ ದೊರೆ ಗುರುವಾಯೂರು ದೇವಸ್ಥಾನಕ್ಕೆ ಅಸ್ಪೃಶ್ಯರಿಗೆ ಪ್ರವೇಶ ನಿರಾಕರಿಸಿದ. ಆ ಹಿಂದೂ ರಾಜನ ಅರಮನೆಯ ಎಷ್ಟೋ ಆಚರಣೆಗಳಲ್ಲಿ ಮುಸ್ಲಿಮರು ಇರುತ್ತಿದ್ದರು. ಪೊನ್ನಾನಿ ತಾಲೂಕಿನ ಜನರೆದುರು ಆಯ್ಕೆಯನ್ನಿಟ್ಟು ಬಹುಸಂಖ್ಯಾತರು ಬಯಸಿದಂತೆ ಮಾಡಿ ಎಂದು ಗಾಂಧಿ ಒಂದು ಸಲಹೆ ಮುಂದಿಟ್ಟರು. ಬಹು ಸಂಖ್ಯಾತರು ಅಸ್ಪೃಶ್ಯರ ದೇವಾಲಯ ಪ್ರವೇಶಕ್ಕೆ ಸಮ್ಮತಿಸಿದರು. ಆದರೂ ಜಾಮೊರಿನ್ ಜಗ್ಗಲಿಲ್ಲ. ಇದೇ ಸಮಯಕ್ಕೆ ರಂಗಾ ಅಯ್ಯರ್ ಸೆಂಟ್ರಲ್ ಅಸೆಂಬ್ಲಿಯಲ್ಲಿ ದೇವಾಲಯ ಪ್ರವೇಶವನ್ನು ಸುಲಭಗೊಳಿಸಲು ಅಸ್ಪೃಶ್ಯತಾ ನಿಷೇಧ ಕಾಯ್ದೆ ಮಂಡಿಸಿದ್ದರು. ರಾಜಾ, ಗ್ಯಾನ್ ಪ್ರಸಾದ್ ಸಿಂಗ್, ಮಿತ್ರ ಮೊದಲಾದವರೂ ಅವರ ಜೊತೆಗೆ ಇದ್ದರು. ಆ ಸಮಯದಲ್ಲಿ ಗಾಂಧಿ ಗುರುವಾಯೂರು ಉಪವಾಸ ಮುಂದೂಡಿರುವುದಾಗಿ, ಗವರ್ನರ್ ಜನರಲ್ ಅವರ ನಿರ್ಧಾರಕ್ಕಾಗಿ ಕಾಯುವುದಾಗಿ ಪ್ರಕಟಿಸಿದಾಗ ಅವರ ನಡೆ ಅಂಬೇಡ್ಕರ್ ಬೆಂಬಲಿಗರಲ್ಲಿ ಅನುಮಾನ ಹುಟ್ಟಿಸಿತು.

**ಜನವರಿ ೨೩, ೧೯೩೩ :** ಭಾರತಕ್ಕೆ ವಾಪಸಾದ ಅಂಬೇಡ್ಕರ್ ಸಂದರ್ಶನವೊಂದರಲ್ಲಿ ದೇವಾಲಯ ಪ್ರವೇಶ ಮಸೂದೆಯ ಬಗ್ಗೆ ಪ್ರತಿಕ್ರಿಯಿಸುತ್ತಾ, ''ವೈಸ್‌ರಾಯ್ ತಕ್ಷಣಕ್ಕೆ ಒಪ್ಪಿಗೆ ನೀಡುವ ಲಕ್ಷಣಗಳಿಲ್ಲ. ದೇವಾಲಯ ಪ್ರವೇಶದ ಸಲುವಾಗಿ ಗಾಂಧಿ ತಮ್ಮ ಜೀವ ಕೊಡುವುದು ಬೇಡ. ವೈಸ್‌ರಾಯ್ ಕೂಡ ಶಾಸನ ಸಭೆಯಲ್ಲಿ ಈ ಚರ್ಚೆಯನ್ನು ತಡೆಹಿಡಿಯದೆ ಜನಹಿತವಿದೆ ಎನಿಸಿದಲ್ಲಿ ವೀಟೊ ಬಳಸಿಯಾದರೂ ಮಸೂದೆಯನ್ನು ಜಾರಿಗೊಳಿಸಬೇಕು'' ಎಂದು ತಿಳಿಸಿದರು.

ಮುಂಬಯಿಯಲ್ಲಿ ಇಳಿದ ಕೂಡಲೆ ಗಾಂಧಿ ಯರವಾಡಾ ಜೈಲಿನಲ್ಲಿ ತಮ್ಮನ್ನು ಭೇಟಿಯಾಗುವಂತೆ ಟೆಲಿಗ್ರಾಂ ಕಳಿಸಿದರು. ದೆಹಲಿಗೆ ಹೋಗಿ ಹಿಂದಿರುಗುತ್ತಾ ಫೆಬ್ರುವರಿ ೪ರ ಮಧ್ಯಾಹ್ನ ಅಂಬೇಡ್ಕರ್ ಗಾಂಧಿಯವರನ್ನು ಭೇಟಿಯಾದರು. ಎದ್ದು ಕೈ ಕುಲುಕಿ ಬರಮಾಡಿಕೊಂಡ ಗಾಂಧಿ ದೇವಾಲಯ ಪ್ರವೇಶ ಕುರಿತು ಮಾತು ಶುರು ಮಾಡಿ ಸುಬ್ಬರಾಯನ್ ಮತ್ತು ರಂಗಾ ಅಯ್ಯರ್ ಮಂಡಿಸುವ ಮಸೂದೆಗೆ ಬೆಂಬಲ ನೀಡಬೇಕೆಂದು ಕೋರಿದರು. ಅದನ್ನು ನೇರಾನೇರ ನಿರಾಕರಿಸಿ ಅಂಬೇಡ್ಕರ್ ಹೇಳಿದ ಮಾತುಗಳು ಮಾರ್ಮಿಕವಾಗಿವೆ :

''ಆ ಮಸೂದೆ ಅಸ್ಪೃಶ್ಯತೆಯನ್ನು ಪಾಪ ಎನ್ನುವುದಿಲ್ಲ. ಅಸ್ಪೃಶ್ಯರನ್ನು ದೇವಾಲಯದೊಳಗೆ ಬಿಡಿ ಎನ್ನುತ್ತದೆಯೇ ಹೊರತು ದೇವಾಲಯ ಪ್ರವೇಶ ಅವರ ಹಕ್ಕು ಎನ್ನುವುದಿಲ್ಲ. ಶೋಷಿತ ಸಮುದಾಯಗಳು ವರ್ಣ ವ್ಯವಸ್ಥೆಯ ಶೂದ್ರರಾಗಲು ಇಚ್ಛಿಸುವುದಿಲ್ಲ. ನಾನು ಹಿಂದು ಎಂದು ಕರೆದುಕೊಳ್ಳಬಯಸುವುದಿಲ್ಲ. ಯಾವ ವ್ಯವಸ್ಥೆ ನನ್ನನ್ನು ಕೀಳಾಗಿ ಕಂಡಿದೆಯೋ ಅದರ ಬಗ್ಗೆ ನಾನೇಕೆ ಹೆಮ್ಮೆ ಪಡಲಿ? ಜಾತಿ ವ್ಯವಸ್ಥೆ ಹೀಗೇ ಮುಂದುವರಿಯುವುದಾದರೆ ದೇವಾಲಯ ಪ್ರವೇಶದಿಂದ ಏನೂ ಲಾಭವಿಲ್ಲ.''

ಗಾಂಧಿ ಉತ್ತರಿಸಿದರು : ''ವರ್ಣ ವ್ಯವಸ್ಥೆ ಕೆಟ್ಟ ವ್ಯವಸ್ಥೆಯಲ್ಲ, ಮೇಲ್ಜಾತಿ ಹಿಂದುಗಳು ತಮ್ಮ ಪಾಪ ತೊಳೆದುಕೊಳ್ಳಲು, ಹಿಂದು ಧರ್ಮವನ್ನು ಶುದ್ಧೀಕರಣಗೊಳಿಸಿಕೊಳ್ಳಲು ಒಂದು ಅವಕಾಶ ಕೊಡಿ. ಈ ಸುಧಾರಣೆಯಾದರೆ ಅಸ್ಪೃಶ್ಯರೂ ಸಮಾಜದಲ್ಲಿ ಉನ್ನತಿ ಹೊಂದಬಹುದು. ನೀವೀಗ ದೇವಾಲಯ ಪ್ರವೇಶ ವಿರೋಧಿಸಿದರೆ ಸನಾತನಿಗಳು ಮತ್ತು ಸರ್ಕಾರ ಅದರ ದುರ್ಲಾಭ ಪಡೆಯುತ್ತಾರೆ.''

ಅಂಬೇಡ್ಕರ್ ಒಪ್ಪಲಿಲ್ಲ. ಅವರ ಅಭಿಪ್ರಾಯ ಭಿನ್ನವಾಗಿತ್ತು :

''ಅಸ್ಪೃಶ್ಯರು ಆರ್ಥಿಕ, ಶೈಕ್ಷಣಿಕ, ರಾಜಕೀಯ ಉನ್ನತಿ ಸಾಧಿಸಿದರೆ ದೇವಾಲಯ ಪ್ರವೇಶ ತಾನೇ ತಾನಾಗಿ ಸಾಧ್ಯವಾಗುತ್ತದೆ. ಬಹಿಷ್ಕೃತರು ಜಾತಿ ವ್ಯವಸ್ಥೆಯ ಉಪಉತ್ಪನ್ನಗಳು. ಜಾತಿ ವ್ಯವಸ್ಥೆ ಇರುವ ತನಕ ಅವರೂ ಇರುತ್ತಾರೆ. ಜಾತಿಪದ್ಧತಿ ನಾಶವಾಗದೆ ಅವರ ಉದ್ಧಾರ ಸಾಧ್ಯವೇ ಇಲ್ಲ. ಹಿಂದೂ ನಂಬಿಕೆಯಿಂದ ಜಾತಿಯೆಂಬ ಹೇಯ ಮತ್ತು ಕ್ರೂರ ತತ್ವವನ್ನು ತೆಗೆದುಹಾಕುವವರೆಗೆ ಹಿಂದು ಧರ್ಮ ಉಳಿಯುವುದಿಲ್ಲ'' ಎಂದು ಫೆಬ್ರವರಿ ೧೧ರಂದು ಹೊರಬಂದ 'ಹರಿಜನ' ಪತ್ರಿಕೆಯ ಮೊದಲ ಸಂಚಿಕೆಯಲ್ಲಿ ಅಂಬೇಡ್ಕರ್ ಅಭಿಪ್ರಾಯ ವ್ಯಕ್ತಪಡಿಸಿದರು.

**ಫೆಬ್ರವರಿ ೧೨ :** ''ಪ್ರಿಯ ಮಹಾತ್ಮಾಜೀ...'' ಎಂದು ಪತ್ರ ಶುರುಮಾಡಿದ ಅಂಬೇಡ್ಕರ್ ಹೀಗೆ ಬರೆದರು : ''ಪಾಪ ಮತ್ತು ಅನೈತಿಕತೆಯನ್ನು ಬಹುಸಂಖ್ಯಾತರು ಒಪ್ಪಿಕೊಂಡಿದ್ದಾರೆಂದು ತಾಳಲಾಗುವುದಿಲ್ಲ. ಅಸ್ಪೃಶ್ಯತೆ ಪಾಪ ಮತ್ತು ಅನೈತಿಕವಾಗಿದ್ದಲ್ಲಿ ಬಹುಸಂಖ್ಯಾತರ ಮರ್ಜಿ ಹಿಡಿಯದೆ ನೀವು ಅದನ್ನು ನಾಶಗೊಳಿಸಬೇಕು. ಆದರೆ ನಿಮ್ಮ ಮಸೂದೆ ಅದನ್ನು ಹೇಳುವುದಿಲ್ಲ. ಶೋಷಿತ ವರ್ಗಗಳ ಮುಕ್ತಿ ಮಾರ್ಗ ಶಿಕ್ಷಣ, ಉದ್ಯೋಗ, ಆರ್ಥಿಕ ಉನ್ನತಿಗಳಲ್ಲಿದೆಯೇ ಹೊರತು ದೇವಾಲಯ ಪ್ರವೇಶದಲ್ಲಿಲ್ಲ. ದೇವಾಲಯಗಳ ಬಾಗಿಲು ತೆರೆಯಬೇಕೋ ಬಿಡಬೇಕೋ ಎನ್ನುವುದು ನೀವು ಚರ್ಚಿಸಬೇಕಾದ ವಿಚಾರ. ನಾವದಕ್ಕೆ ಹೋರಾಟ ಮಾಡುವುದಿಲ್ಲ. ಮನುಷ್ಯನನ್ನು ಕೀಳಾಗಿ ಕಾಣುವುದು ಸಭ್ಯ ನಡೆತೆಯಲ್ಲ ಎಂದು ನೀವು ಭಾವಿಸಿದರೆ ದೇವಾಲಯಗಳ ಬಾಗಿಲು ತೆರೆಯಿರಿ. ಸಭ್ಯತೆಗಿಂತ ಹಿಂದು ಆಗಿ ಉಳಿಯುವುದೇ ಮುಖ್ಯವಾದಲ್ಲಿ ನಿಮ್ಮ ದೇವಾಲಯಗಳ ಬಾಗಿಲು ಹಾಕಿಕೊಳ್ಳಿ, ನಮಗೆ ಒಳಬರಬೇಕಾದ ತುರ್ತು ಇಲ್ಲ. ಸಾಮಾಜಿಕ ಅಸಮಾನತೆಯನ್ನು ಪ್ರತಿಪಾದಿಸುವ ಧರ್ಮವನ್ನು ಸಹಿಸಲಾಗದು ಎಂದು ಅಸ್ಪೃಶ್ಯರು ನಿರ್ಧರಿಸಿದ್ದಾರೆ. ಹಿಂದು ಧರ್ಮ ಸಮಾನತೆಯನ್ನು ಒಪ್ಪಿಕೊಳ್ಳುವುದಾದರೆ ಅಸ್ಪೃಶ್ಯರನ್ನು ಪರದೇಶಿಗಳಂತೆ ನೋಡುವುದನ್ನು ನಿಲ್ಲಿಸಬೇಕು. ದೇವಾಲಯ ಪ್ರವೇಶ ನೀಡಿದರಷ್ಟೇ ಸಾಲದು, ಚಾತುರ್ವರ್ಣ್ಯ ತತ್ವವನ್ನೂ ಕೈಬಿಡಬೇಕು. ಅಸಮಾನತೆ, ತಾರತಮ್ಯ ಮತ್ತು ಜಾತಿ ಪದ್ಧತಿಯ ಮೂಲ ವರ್ಣಾಶ್ರಮ ಧರ್ಮದ ಬೇರುಗಳಲ್ಲಿ ಅಡಗಿ ಕೂತಿದೆ. ನಾನೀಗ ದೇವಾಲಯ ಪ್ರವೇಶ ಮಸೂದೆಗೆ ಸಹಮತ ಸೂಚಿಸಿ ನಂತರ ಚಾತುರ್ವರ್ಣ್ಯ ಮತ್ತು ಜಾತಿಪದ್ಧತಿಯ ನಾಶಕ್ಕೆ ಹೋರಾಡಿದರೆ ಗಾಂಧಿ ಯಾವ ಕಡೆ ನಿಲ್ಲುತ್ತಾರೆ?



ಅವರು ವರ್ಣಾಶ್ರಮವನ್ನು ಬೆಂಬಲಿಸಿ ವಿರೋಧಿ ಪಾಳಯದಲ್ಲಿ ನಿಲ್ಲುವುದಾದರೆ ನಾನೀಗ ಅವರ ಜೊತೆ ನಿಲ್ಲಲಾರೆ.''

ಗಾಂಧಿ-ಅಂಬೇಡ್ಕರ್ ಇಬ್ಬರ ದಾರಿ ಸ್ಪಷ್ಟವಾಗಿ ಬೇರೆ ಬೇರೆಯಾಗಿದ್ದು ಹೀಗೆ. ರಂಗಾ ಅಯ್ಯರ್ ದೇವಾಲಯ ಪ್ರವೇಶ ಮಸೂದೆಯನ್ನು ಕಟ್ಟಾ ಸನಾತನಿಗಳಷ್ಟೇ ಅಲ್ಲ, ಅರೆ ಸನಾತನಿಗಳೂ, ಸನಾತನ ಸಮಾಜ ಸುಧಾರಕರೂ ವಿರೋಧಿಸಿದರು. ಕಾನೂನು ಧಾರ್ಮಿಕ ವಿಷಯಗಳಲ್ಲಿ ತಲೆಹಾಕಬಾರದು ಎನ್ನುವುದು ಅವರ ವಾದವಾಗಿತ್ತು. ಪಂಡಿತ ಮದನ ಮೋಹನ ಮಾಳವೀಯ ಅವರಂತೂ ಕೋಪಾವಿಷ್ಟರಾಗಿ ದೇವಾಲಯ ವಿಚಾರದಲ್ಲಿ ಕಾನೂನು ಪರೋಕ್ಷವಾಗಿಯೂ ಹಸ್ತಕ್ಷೇಪ ಮಾಡಬಾರದು ಎಂದು ಗುಡುಗಿ ಪೂನಾ ಒಪ್ಪಂದ ಇದಕ್ಕೆ ಅನ್ವಯಿಸುವುದಿಲ್ಲವೆಂದು ಹೇಳಿದರು! ಹೀಗೆ ಯಾವ ಉದ್ದೇಶಕ್ಕಾಗಿ ಗಾಂಧಿ ಉಪವಾಸ ಕೂತು ಪೂನಾ ಒಪ್ಪಂದಕ್ಕೆ ಸಹಿ ಪಡೆದಿದ್ದರೋ ಅದರ ಸೋಲಿನ ಮೊದಲ ಹೆಜ್ಜೆಯಾಗಿ ಮಾರ್ಚ್ ೨೪ರಂದು ರಂಗಾ ಅಯ್ಯರ್ ಅವರ ದೇವಾಲಯ ಪ್ರವೇಶ ಮಸೂದೆ ಬಿದ್ದುಹೋಯಿತು.

ಈ ಹೊತ್ತಿಗೆ ಪೂನಾ ಒಪ್ಪಂದದ ನಿಜ ಬಣ್ಣ ಬಯಲಾಗ ತೊಡಗಿತ್ತು. ಹೆಚ್ಚೂ ಕಡಿಮೆ ಪೂನಾ ಒಪ್ಪಂದವನ್ನು ಅಂಗೀಕರಿಸಿದ್ದ ಎಲ್ಲ ಹಿಂದು ರಾಜಕೀಯ ಮುಖಂಡರು ಅದನ್ನು ವಿರೋಧಿಸ ತೊಡಗಿದ್ದರು. ಗಾಂಧೀಜಿ ಶುರುಮಾಡಿದ ಹರಿಜನ ಚಳುವಳಿಯ ಉತ್ಸಾಹ ಇಂಗಿಹೋಗತೊಡಗಿತ್ತು. ಪೂನಾಗೆ ಗಾಂಧೀಜಿಯನ್ನು ನೋಡಲು ಬಂದು ಅವರೆದೆಯ ಮೇಲೆ ಮುಖವಿಟ್ಟು ಬಿಕ್ಕಿದ್ದ ಟ್ಯಾಗೋರ್ ಈಗ ಬೇರೆ ಹಾಡು ಶುರು ಮಾಡಿದ್ದರು. ಪೂನಾ ಒಪ್ಪಂದವನ್ನು ಸೆಪ್ಟೆಂಬರ್ ೨೬ರಂದು ದೆಹಲಿಯಲ್ಲಿ ಪ್ರತ್ಯೇಕ ಸಮ್ಮೇಳನ ಮಾಡಿ ಅಂಗೀಕರಿಸಿದ್ದ ಹಿಂದು ಮಹಾಸಭಾದ ಮುಖಂಡರು ಅದಕ್ಕೆ ತಿದ್ದುಪಡಿಯಾಗಬೇಕೆಂದು ಬಯಸಿದರು. ಪಂಜಾಬಿನಲ್ಲಿ ಅಸ್ಪೃಶ್ಯತೆ ಸಮಸ್ಯೆಯೇ ಇಲ್ಲದಿರುವುದರಿಂದ ಅಲ್ಲಿ ಅದನ್ನು ಅನ್ವಯಿಸಬಾರದೆಂದು ಹೇಳಿದರು. ಬಂಗಾಳ ಶಾಸನಸಭೆ ಪ್ರಸ್ತಾವವೊಂದನ್ನು ಅಂಗೀಕರಿಸಿ ಪೂನಾ ಒಪ್ಪಂದ ರದ್ದತಿಗೆ ಒತ್ತಾಯಿಸಿತು. ಬಂಗಾಳದ ಒಬ್ಬ ಹಿಂದು ಪ್ರತಿನಿಧಿಯೂ ಪೂನಾ ಒಪ್ಪಂದದಲ್ಲಿ ಭಾಗೀದಾರ ಆಗಿಲ್ಲದಿರುವುದರಿಂದ ಅದು ತಮಗೆ ಅನ್ವಯಿಸುವುದಿಲ್ಲ ಎನ್ನುವುದು ಅವರ ವಾದವಾಗಿತ್ತು. ಬ್ರಿಟಿಷ್ ಸರ್ಕಾರ ಈ ಬಗ್ಗೆ ಅಂಬೇಡ್ಕರರಿಗೆ ಪತ್ರ ಬರೆಯಿತು. ಅದಕ್ಕೆ ಉತ್ತರಿಸುತ್ತ ಅವರು, ''ಪೂನಾ ಒಪ್ಪಂದದ ಸಮಯದಲ್ಲಿ ಸಂಧಾನಕಾರರಾಗಿ ಅನೇಕ ಬಂಗಾಳಿ ಹಿಂದುಗಳು ಪ್ರಮುಖ ಪಾತ್ರ ವಹಿಸಿರುವಾಗ ಹೀಗೆ ಹೇಳುತ್ತಿರುವುದು ತಪ್ಪು. ಬ್ರಿಟಿಷ್ ಸರ್ಕಾರ ತೆಗೆದುಕೊಳ್ಳುವ ತೀರ್ಮಾನವು ಇಡೀ ಬ್ರಿಟಿಷ್ ಇಂಡಿಯಾಕ್ಕೆ ಅನ್ವಯವಾಗುವಾಗ ಬಂಗಾಳವು ತಪ್ಪಿಸಿಕೊಳ್ಳಲಾಗದು. ಅಷ್ಟೇ ಅಲ್ಲ, ಬಂಗಾಳದ ಶೋಷಿತ ಸಮುದಾಯಗಳ ಮುಖಂಡರು ೫೦ ಸ್ಥಾನ ಬಯಸಿದ್ದಾಗ ೩೦ ಸ್ಥಾನಕ್ಕೆ ಅವರನ್ನು ತೃಪ್ತಗೊಳಿಸಿ ಪೂನಾ ಒಪ್ಪಂದಕ್ಕೆ ಬದ್ಧರಾಗಿರುವಂತೆ ಒಪ್ಪಿಸಿದ್ದೇನೆ. ಅಲ್ಲಷ್ಟೇ ಅಲ್ಲ, ಮುಂಬಯಿ, ಬಿಹಾರ್, ಪಂಜಾಬ್, ಉತ್ತರ ಪ್ರದೇಶ, ಒರಿಸ್ಸಾದ ಶೋಷಿತ ಸಮುದಾಯಗಳೂ ಸ್ಥಾನ ಸಂಖ್ಯೆಯ ಕುರಿತು ಅಸಮಾಧಾನ ಹೊಂದಿವೆ'' ಎಂದು ಬರೆದರು.



೧೯೩೨ರಲ್ಲಿ ಪೂನಾ ಒಪ್ಪಂದಕ್ಕೆ ಸಹಿ ಹಾಕಿದ ಸಂದರ್ಭ. ಯರವಾಡಾ ಕೇಂದ್ರ ಬಂದೀಖಾನೆ
ಚಿತ್ರದಲ್ಲಿ: ಬ್ಯಾರಿಸ್ಟರ್‌ಗಳಾದ ಜೈಕರ್ ಮತ್ತು ಸಪ್ರು ಎಡಕ್ಕೆ: ಡಾ|| ಅಂಬೇಡ್ಕರ್



ಜಂಟಿ ಸಂಸದೀಯ ಸಮಿತಿಯಲ್ಲಿ ಭಾಗವಹಿಸಲು ಏಪ್ರಿಲ್‌ನಲ್ಲಿ ಮತ್ತೆ ಲಂಡನ್ನಿಗೆ ಹೊರಟ ಅಂಬೇಡ್ಕರ್‌ರನ್ನು ಗಾಂಧಿ ಯರವಾಡಾ ಜೈಲಿನಲ್ಲಿ ಮತ್ತೆ ಭೇಟಿ ಮಾಡುವಂತೆ ಕೇಳಿದರು. ಯರವಾಡಾದಲ್ಲಿ ಗಾಂಧೀಜಿಯ ಜೊತೆ ಪ್ರಾಥಮಿಕ ಚುನಾವಣೆ ಹಾಗೂ ಅಭ್ಯರ್ಥಿಗಳ ಪಟ್ಟಿ ತಯಾರಿಯ ಕುರಿತು ಚರ್ಚೆಯಾಯಿತು. ಸಾರ್ವತ್ರಿಕ ಚುನಾವಣೆ ಎದುರಿಸುವ ಶೋಷಿತ ಸಮುದಾಯದ ಅಭ್ಯರ್ಥಿ ಪ್ರಾಥಮಿಕ ಹಂತದಲ್ಲಿ ಕನಿಷ್ಠ ೨೫% ಮತ ಗಳಿಸಿರಬೇಕು ಎಂದು ಅಂಬೇಡ್ಕರ್ ಹೇಳಿದರು. ಆ ವಿಷಯದ ಕುರಿತು ಅಂಬೇಡ್ಕರ್ ಅವರ ಲಂಡನ್ ವಿಳಾಸಕ್ಕೆ ಪತ್ರ ಬರೆಯುವುದಾಗಿ ಹೇಳಿದ ಗಾಂಧಿ, ಅಂಬೇಡ್ಕರ್ ಕೈಗೆ ಹೂಗುಚ್ಛವನ್ನಿತ್ತು ಮಾತನ್ನು ಅಸ್ಪೃಶ್ಯತೆ ನಿವಾರಣೆ ಕಡೆಗೆ ತಿರುಗಿಸಿದರು.

* * *

ಒಂದು ವೇಳೆ ಪೂನಾ ಒಪ್ಪಂದದ ಸಂದರ್ಭದಲ್ಲಿ ಅಂಬೇಡ್ಕರ್ ತಮ್ಮ ನಿಲುವನ್ನು ಕೊಂಚವೂ ಬದಲಿಸದೆ ಕಠಿಣವಾಗಿ ಉಳಿದುಬಿಟ್ಟಿದ್ದಿದ್ದರೆ ಉಪವಾಸದಿಂದ ಬಳಲಿ ಮಲಗಿದ್ದ ಗಾಂಧಿ ತೀರಿಕೊಳ್ಳುವ ಸಾಧ್ಯತೆಗಳಿದ್ದವು. ಆಗ ಅಂಬೇಡ್ಕರರನ್ನು ಖಳನನ್ನಾಗಿಸಿ, ಈ ದೇಶದಲ್ಲಿ ಶೋಷಿತರ ಮಾರಣಹೋಮವೇ ನಡೆದುಹೋಗುತ್ತಿತ್ತು. ಬಹುಶಃ ಅಂಬೇಡ್ಕರರಿಗಿದ್ದ ದೂರದೃಷ್ಟಿ ಈ ದುರಂತ ಸಂಭವಿಸದಂತೆ ನೋಡಿಕೊಂಡಿತು.

ಹೀಗೆ ಪೂನಾ ಒಪ್ಪಂದವು ರಾಜಕೀಯ ಒಪ್ಪಂದವಾಗಿದ್ದರೂ ಅದಕ್ಕೆ ವಿಶಾಲ ಧಾರ್ಮಿಕ, ಸಾಮಾಜಿಕ ಆಯಾಮಗಳಿದ್ದವು. ಅದರ ಪರಿಣಾಮದ ಬಗ್ಗೆ ಒಪ್ಪಂದದ ಆರಂಭದ ದಿನಗಳಲ್ಲಿ ಉತ್ಸಾಹಿತರಾದಂತೆ ಕಂಡುಬಂದ ಅಂಬೇಡ್ಕರ್ ನಂತರ ಕ್ರಮೇಣ ಯಥಾಸ್ಥಿತಿ ಮುಂದುವರಿದಿದ್ದನ್ನು ಖಿನ್ನತೆಯಿಂದ ಗಮನಿಸುತ್ತಾರೆ. ದಿನಕಳೆದಂತೆ ಅಸ್ಪೃಶ್ಯತೆ ನಿವಾರಣೆ ಅಷ್ಟು ಸುಲಭವಲ್ಲವೆಂದೂ, ಅದರ ಬೇರು ನಾಶವಾಗದೆ ಬರಿಯ ಟೊಂಗೆಗಳನ್ನು ಕಡಿದು ಉಪಯೋಗವಿಲ್ಲವೆಂದೂ ಅವರಿಗೆ ಮನದಟ್ಟಾಗುತ್ತದೆ. ಕಲಿತ, ತಿಳಿದ, ಪ್ರಭಾವಿ ಅಧಿಕಾರಸ್ಥರಾದ ತಾವೇ ತಾರತಮ್ಯ ಎದುರಿಸುತ್ತಿರಬೇಕಾದರೆ ಹಳ್ಳಿಹಳ್ಳಿಗಳಲ್ಲಿ ಬದುಕಿರುವ ಕೋಟ್ಯಂತರ ಬಡ ಶೋಷಿತರ ಪಾಲಿಗೆ ದೇವಾಲಯ ಪ್ರವೇಶದಂತಹ ಕಣ್ಣೊರೆಸುವ ತಂತ್ರಗಳು ಶಾಶ್ವತ ಪರಿಹಾರ ಒದಗಿಸಲಾರವು ಎಂಬ ಅವರ ಅನಿಸಿಕೆ ಮತಾಂತರ ನಿರ್ಧಾರಕ್ಕೆ, ಸ್ಥಾನ ಮೀಸಲು ಹೋರಾಟಕ್ಕೆ ತಾತ್ವಿಕ ನೆಲೆ ಒದಗಿಸುತ್ತದೆ.

ಹೀಗೆ ಪೂನಾ ಒಪ್ಪಂದವು ಸ್ವಾತಂತ್ರ್ಯ ಹೋರಾಟ, ಗಾಂಧಿ- ಅಂಬೇಡ್ಕರ್ ಸಂಘರ್ಷ, ಹಿಂದು ಸಮಾಜ ಸುಧಾರಣೆಯ ಕಷ್ಟಗಳು, 'ಹರಿಜನ'ರಿಂದ ಆತ್ಮಾಭಿಮಾನಿ 'ದಲಿತ'ರ ಹುಟ್ಟು, ಅಂಬೇಡ್ಕರರ ಮತಾಂತರ ಒಲವಿಗೆ ಕಾರಣಗಳನ್ನು ಅನಾವರಣಗೊಳಿಸುತ್ತ ಇತಿಹಾಸದ ಪುಟಗಳನ್ನು ಏಕೆ ಮತ್ತೆ ಮತ್ತೆ ತಿರುವಿಹಾಕಬೇಕೆಂದು ಸ್ಪಷ್ಟಪಡಿಸುತ್ತದೆ.

**ಡಾ|| ಎಚ್. ಎಸ್. ಅನುಪಮಾ**
W/o ಡಾ|| ಕೃಷ್ಣ, ಜಲಜಾ ಜನರಲ್ ಅಂಡ್ ಮೆಟರ್ನಿಟಿ ಕ್ಲಿನಿಕ್, ಕಾವಲಕ್ಕಿ ಅಂಚೆ, ಹೊನ್ನಾವರ ತಾಲೂಕು-೫೮೧೩೩೪, ಉ.ಕ. ಜಿಲ್ಲೆ
**ಕೆ. ಎಲ್. ಚಂದ್ರಶೇಖರ್ ಐಜೂರ್**
ಸೀನಿಯರ್ ರಿಸರ್ಚರ್, ನ್ಯಾಷನಲ್ ಲಾ ಕಾಲೇಜ್ ಆಫ್ ಇಂಡಿಯಾ ಯುನಿವರ್ಸಿಟಿ, ನಾಗರಭಾವಿ, ಬೆಂಗಳೂರು - ೭೨

ಮಲಯಾಳಂ ಮೂಲ : **ಡಾ|| ಕೆ.ಪಿ. ಕೃಷ್ಣನ್ ಕುಟ್ಟಿ**
ಕನ್ನಡಕ್ಕೆ : **ಪಾರ್ವತಿ ಜಿ. ಐತಾಳ್**



# ಓಣಂ, ಧರ್ಮ ಮತ್ತು ಮಾರ್ಕ್ಸಿಸಂ

'**ಕೊ**ಕೇನ್‌ನ ನಾಡು' (ದಿ ಲ್ಯಾಂಡ್ ಆಫ್ ಕೊಕೇನ್) ಹದಿನಾಲ್ಕನೇ ಶತಮಾನದಲ್ಲಿ ರಚಿಸಲ್ಪಟ್ಟಿದ್ದೆಂದು ನಂಬಲಾಗುವ ಒಂದು ಇಂಗ್ಲಿಷ್ ಜನಪದ ಕವಿತೆ. ಕಾನೂನಿನ ನಿಯಂತ್ರಣವಿಲ್ಲದೆ, ಸರ್ವತಂತ್ರ ಸ್ವತಂತ್ರರಾಗಿ ಎಲ್ಲ ಮನುಷ್ಯರೂ ಒಂದೇ ರೀತಿ ಮದೋನ್ಮತ್ತರಾಗಿ ಮೈಮರೆಯುವ, ಯೌವನ, ಸಂತೋಷ, ಸಮೃದ್ಧಿಗಳು ತುಂಬಿ ತುಳುಕುವ ಒಂದು ಮಾಯಾಲೋಕವನ್ನು ಈ ಕವಿತೆಯು ಪ್ರಸ್ತುತಪಡಿಸುತ್ತದೆ. ಎ. ಎಲ್. ಮೋರ್ಟನ್‌ನ 'ಇಂಗ್ಲಿಷ್ ಯುಟೋಪಿಯಾ' ಎಂಬ ಪುಸ್ತಕ ಪ್ರಾರಂಭವಾಗುವುದು ಈ ಕವಿತೆಯ ಕುರಿತಾದ ಚರ್ಚೆಯೊಂದಿಗೆ. ಯಾವುದೇ ಆದರ್ಶ ಜಗತ್ತು ಒಂದು ಬಯಕೆಯ ಸೃಷ್ಟಿಯಾಗಿದೆಯೆಂದು ಆತ ಹೇಳುತ್ತಾನೆ. ವರ್ತಮಾನದ ವಿಮರ್ಶೆ ಮತ್ತು ಭವಿಷ್ಯದ ಸ್ವಪ್ನದರ್ಶನಗಳು ಈ ಬಯಕೆಯೊಳಗೆ ಅಂತರ್ಗತವಾಗಿರುತ್ತವೆ. ಭಾವನಾತ್ಮಕ ಲೋಕದ ಕುರಿತಾದ ಯಾವುದೇ ಸ್ವಪ್ನವೂ ಅನಾಕರ್ಷಕವಾದ ವಾಸ್ತವವನ್ನು ಅಡಿಮೇಲು ಮಾಡುವ ಸೃಜನಶೀಲ ಪ್ರಯತ್ನವಾಗಿರುತ್ತದೆ. ಈ ರೀತಿಯ ಕಾಲ್ಪನಿಕ ಜೀವನ ಕ್ರಮದ ಕನಸು ಕಾಣುವ ಅನೇಕ ಉದಾಹರಣೆಗಳು ಜಗತ್ತಿನ ಜನತೆಯ ಸಾಂಸ್ಕೃತಿಕ ಚರಿತ್ರೆಯಲ್ಲಿ ಕಾಣಸಿಗುತ್ತವೆ.

ಆದರೆ ಇತರ ಅನೇಕ ಆದರ್ಶ ಸುಂದರ ಲೋಕದ ಕಲ್ಪನೆಗಳಿಗಿಂತ ಭಿನ್ನವಾಗಿದೆ ಕೇರಳೀಯರ ಓಣಂ. ಈ ಭಿನ್ನತೆಗೆ ಕಾರಣ ಹಿಂದೂ ಮಿಥಾಲಜಿಯೊಂದಿಗಿನ ಸಂಬಂಧವಲ್ಲ. ಓಣಂ ಸ್ಪಷ್ಟವಾಗಿ ನಿರ್ವಚಿಸಲ್ಪಟ್ಟ ರಾಜಕೀಯ ಮಿತಿಯೊಳಗೆ ನಿಲ್ಲುತ್ತದೆ. ಅದುವೇ ಅದರ ಅನನ್ಯತೆ. ಮನುಷ್ಯ ಸಮಾನತೆಯನ್ನು ಬೇಷರತ್ತಾಗಿ ಆದರ್ಶೀಕೃತಗೊಳಿಸುವುದು ಮಾತ್ರವಲ್ಲ, ಸಾಮಾಜಿಕ ಸಮಾನತೆಯ ಆರ್ಥಿಕ ಅಡಿಪಾಯವನ್ನು ಓಣಂ ಗಟ್ಟಿಗೊಳಿಸುತ್ತದೆ. ಓಣಂ ಎಂಬ ಮಿಥ್‌ನ ಧಾರ್ಮಿಕತೆಯನ್ನು ಒಳಗಿಂದಲೇ ಹೊಡೆದುರುಳಿಸಿ ಜಾತ್ಯತೀತ ಹಬ್ಬದ ಮಟ್ಟಕ್ಕೆ ಏರಿಸಲು ಸಾಧ್ಯವಾಗುವುದು ಈ ರಾಜಕೀಯದ ಕಾರಣದಿಂದಾಗಿ. ಈ ರಾಜಕೀಯವು ಮನಸ್ಸಿಗೆ ಹಿತವೆನಿಸುವ ಮತ್ತು ಮುದನೀಡುವ ಒಂದು ಸಂಗತಿ.

**ಓಣಂ ಎನ್ನುವುದು ಒಂದು ಊಟದ ಹಬ್ಬ**

ಹೆಚ್ಚಿನ ಹಬ್ಬ ಹರಿದಿನಗಳಂದು ವಿಶೇಷ ಅಡಿಗೆಯಿರುತ್ತದೆ. ಕ್ರಿಸ್‌ಮಸ್ ಫೀಸ್ಟ್ ಧಾರ್ಮಿಕ ಪ್ರಾರ್ಥನೆ, ಉಪವಾಸ ಮುಂತಾದುವುಗಳ ಕೊನೆಗೆ ನಡೆಯುತ್ತದೆ. ಬಕ್ರೀದ್ ಕೂಡ ಹಾಗೆಯೇ. ಆದರೆ ಓಣಂ ಇವುಗಳಿಗಿಂತ ಪೂರ್ತಿ ಭಿನ್ನ. ಔತಣಕ್ಕೆಂದೇ ವಿಶೇಷವಾಗಿ ಮೀಸಲಾಗಿಟ್ಟ ಒಂದು ಹಬ್ಬವಿದು. ಆಹಾರದ ಉತ್ಸವ. ಓಣಂನಲ್ಲಿ ಪೂಜೆ-ಪ್ರಾರ್ಥನೆಗಳಿಗಲ್ಲ, ಭೋಜನಕ್ಕೆ ಮಹತ್ವ. ಓಣಂನಲ್ಲಿ ಗೊನೆ ಕಡಿಯಲೆಂದು ನೇಂದ್ರಬಾಳೆ ನೆಡುವುದು, ಓಣಂನಲ್ಲಿ ಕಿತ್ತು ತೆಗೆಯಲು ಸುವರ್ಣಗಡ್ಡೆ ನೆಡುವುದು ಮುಂತಾದವು ಮಲೆಯಾಳಿಯ ಬದುಕಿನಲ್ಲಿ ಓಣಂ ಔತಣ (ಓಣ ಸದ್ಯ)ಕ್ಕಿರುವ ಪ್ರಾಧಾನ್ಯವನ್ನು ಸೂಚಿಸುತ್ತವೆ. ಮನುಷ್ಯನ ಅತ್ಯಂತ ಮೂಲಭೂತ ಅವಶ್ಯಕತೆಯಾದ ಆಹಾರದ ಸಮೃದ್ಧಿಯು ಜೀವನದ ಸಂತೋಷದ ಅಡಿಗಲ್ಲು ಎಂಬ ಅರಿವನ್ನು ಓಣಂ ಹಬ್ಬ ನೀಡುತ್ತದೆ. ಭೋಜನಕ್ಕೆಂದೇ ಮೀಸಲಾದ ಒಂದು ಹಬ್ಬವು ಕೇರಳೀಯರಿಗಲ್ಲದೆ ಬೇರಾವುದೇ ಜನವರ್ಗಕ್ಕೆ ಇದೆಯೇ ಎಂಬುದರ ಬಗ್ಗೆ ಸಂದೇಹವಿದೆ.

ಓಣಂ ಭೋಜನಕ್ಕೆ ನಿರ್ದಿಷ್ಟವಾದ ಯಾವುದೇ ಆಹಾರ ಪದಾರ್ಥಗಳಿಲ್ಲ. ಕಾಯಿಗೊಜ್ಜು, ಅವಿಯಲ್, ಕಾಳನ್ (ಮೊಸರು









ಓಣಂನ ಬದಲಿಗೆ ಆಚರಿಸೋಣವೆಂದರೆ ನಮಗೆ ಬೇರೆ ಹಬ್ಬಗಳಿಲ್ಲ. ಮೇ ದಿನ, ಸ್ವಾತಂತ್ರ್ಯ ದಿನ, ರಿಪಬ್ಲಿಕ್ ಡೇ, ಇವು ನಮ್ಮ ಸಾರ್ವಜನಿಕ ಹಬ್ಬಗಳಾಗಲಾರವೆಂಬುದಕ್ಕೆ ಕಾರಣವನ್ನು ಚರಿತ್ರೆಯಲ್ಲೂ ಸಾಮಾಜಿಕ ಮನಃಶಾಸ್ತ್ರದಲ್ಲೂ ನಾವು ಹುಡುಕಬೇಕಾಗಿದೆ. ಕಾರ್ಮಿಕ ವರ್ಗದ ಮೇಲಿನ ಪ್ರೀತಿ, ದೇಶ ಪ್ರೇಮವೇ ಮೊದಲಾದವುಗಳು ಭಾವನಾತ್ಮಕವಾದ ಪ್ರೇರಣೆ ನೀಡಬೇಕಾದವುಗಳಾದರೂ, ಈಗಲೂ ನಾವು ಅವನ್ನು ಬೌದ್ಧಿಕವಾಗಿ ಮಾತ್ರ ಸ್ವೀಕರಿಸಿದ್ದೇವೆ. ಚಾರಿತ್ರಿಕವಾಗಿ ಹರಿದುಬಂದು ಮಿಥ್‌ಗಳಾಗಿ ಬದಲಾದ ವಿಶೇಷಣಗಳೇ ಸಹಜ ಹಬ್ಬಗಳು. ವರ್ಗೀಕೃತಗೊಂಡ ಸಮಾಜದಲ್ಲಿ ಮೇ ದಿನಾಚರಣೆಯು ಟ್ರೇಡ್‌ಯೂನಿಯನ್ನುಗಳ ಪ್ರಚಾರ ಮಾತ್ರವಾಗಿ ಸಂಕುಚಿತಗೊಂಡರೆ ಆಶ್ಚರ್ಯವಿಲ್ಲ. ಕಾರ್ಮಿಕ ವರ್ಗದ ಧಾರ್ಮಿಕ ಪ್ರಜ್ಞೆಯು ಸಮಾಜದ ಪ್ರಜ್ಞೆಯಾಗಿ ಬದಲಾಗುವ ತನಕ ಇವತ್ತಿನ ಸ್ಥಿತಿ ಮುಂದುವರಿಯುತ್ತದೆ. ಇದು ಯೂನಿಫಾರಂ ಹಾಕಿದ ತಲೆ ಹೊರೆಯ ಕೂಲಿಗೆ ಮಾತ್ರ ಇರಬೇಕಾದ ಗುಣ ವಿಶೇಷವಲ್ಲ. ಈ ಸಾರ್ವಜನಿಕ ಪ್ರಜ್ಞೆಯ ಸೃಷ್ಟಿಗಾಗಿ ಪ್ರಜ್ಞಾಪೂರ್ವಕವಾಗಿ ಕಾರ್ಯಪ್ರವೃತ್ತವಾಗುವುದು ಮಾರ್ಕ್ಸಿಸ್ಟ್ ಚಿಂತನೆಯ ಹೊಣೆಯೂ ಆಗಿದೆ.

ಹುಳಿ), ಪ್ರಥಮನ್ (ಅಕ್ಕಿ ಪಾಯಸ) ಮಾತ್ರವಲ್ಲ ಓಣಂ ವಿಶೇಷಗಳು. ಪ್ರಾದೇಶಿಕವಾದ ಭಿನ್ನತೆಗಳು ಬೇಕಾದಷ್ಟಿವೆ. ಕೆಲವೆಡೆ ಸಸ್ಯಾಹಾರ ಮಾತ್ರವಾದರೆ ಇನ್ನು ಕೆಲವೆಡೆ ಬೀಫ್ ಮಾಡಿ ತಿನ್ನುವುದೂ ಇದೆ. ಓಣಂ ಭೋಜನದ ಪದಾರ್ಥಗಳ ಸವರ್ಣ ಗುಣಗಳನ್ನು ವರ್ಗೀಕರಿಸುವು ದಕ್ಕಿಂತ ಹೆಚ್ಚು ಮುಖ್ಯ ಓಣಂ ಆಚರಿಸುವ ಸಮಾಜದಲ್ಲಿ ಅಸ್ತಿತ್ವದಲ್ಲಿರುವ ವರ್ಗಾಧಾರಿತ ವೈರುಧ್ಯಗಳನ್ನು ಹೇಗೆ ಪರಿಹರಿಸಬೇಕು ಎನ್ನುವುದಾಗಿದೆ. ಇಂದಿನ ಕೇರಳದಲ್ಲಿ ಸವರ್ಣೀಯ ಹಿಂದುಗಳು ಒಂದು ಬದಿಯಲ್ಲಿ, ಅವರ್ಣೀಯ ಹಿಂದುಗಳು ಮತ್ತು ಇತರ ಅಲ್ಪಸಂಖ್ಯಾತರು ಇನ್ನೊಂದು ಬದಿಯಲ್ಲಿ ಎಂಬಷ್ಟು ವರ್ಗೀಕರಣವು ಸರಳವೂ ಸುಲಭವೂ ಆಗಿಲ್ಲ. ಈ ಸ್ಥಿತಿಯಲ್ಲಿ ಪ್ರಮುಖ ರಾಜಕೀಯ ಸಮಸ್ಯೆಯನ್ನು ಎದುರಿಸುವುದಕ್ಕೆ ಬದಲಾಗಿ ಅಂಚಿನಲ್ಲಿ ಇರುವ ಪ್ರಶ್ನೆಗಳ ಕಾಡು-ಪೊದರುಗಳನ್ನೆಬ್ಬಿ ಸುವುದು ಸರಿಯಾದ ದಾರಿಯಲ್ಲ. 'ಇದ್ದಷ್ಟು ಓಣಂ' ಎಂಬುದು ಓಣಂನ ಧ್ಯೇಯ ವಾಕ್ಯ. ಹಾಗಿದ್ದ ಮೇಲೆ ಇರುವವನು ಮತ್ತು ಇಲ್ಲದಿರುವವನ ಓಣಂ ಭೋಜನದ ಗುಣಮಟ್ಟದಲ್ಲಿ ವ್ಯತ್ಯಾಸವಿರುವುದು ಸ್ವಾಭಾವಿಕ. ಕಾಳನ್ ಇಲ್ಲದೆ ಮತ್ತು ದನದ ಮಾಂಸವಿಲ್ಲದೆ ಓಣಂ ಉಣ್ಣುವುದು ಓಣಂನ ಸತ್ಯ. ಗುಡಿಸಲು ಮತ್ತು ಅರಮನೆಯ ಓಣಂ ಭೋಜನದ ಪದಾರ್ಥಗಳಲ್ಲಿ ವ್ಯತ್ಯಾಸವಿರಬಹುದು. ಆದರೆ ಓಣಂ ನಮ್ಮ ಮನಸ್ಸಿನಲ್ಲಿ ಹುಟ್ಟಿಸುವ ಭಾವನೆ ಮಾತ್ರ ಸಮಾನವಾದುದು.

ಆಹಾರ ಮತ್ತು ಪದಾರ್ಥ ವಿಶಿಷ್ಟಗಳು ವರ್ಗೀಯ ಸ್ಥಿತಿಯ ಸೂಚಕವೂ ಆಗಿರುತ್ತದೆ. ನಿರ್ಗತಿಕ ಸ್ಥಿತಿಯಲ್ಲಿ ಸತ್ತ ಹಸುವಿನ ಮಾಂಸ ತಿನ್ನಬೇಕಾಗುವ ಜನಸಮೂಹ ಇರುವಲ್ಲಿ ಅಧೀಶ ವರ್ಗದ ಆಹಾರ ಪದ್ಧತಿಗೆ ಸವರ್ಣತೆ ಲಭಿಸುತ್ತದೆ. ಸಸ್ಯಾಹಾರವು ಸವರ್ಣವಾಗುವುದು ರಾಜಕೀಯ ಅಧಿಕಾರದ ಬೆಂಬಲದಿಂದ. ಆದರೆ ಇವತ್ತು ಸಸ್ಯಾಹಾರವು ಸವರ್ಣ ಸಂಪನ್ನತೆಯ ಸಂಕೇತವಲ್ಲ. ಟೆಂಡರ್ ಬೀಫ್ ರೋಸ್ಟ್ ಮತ್ತು ಚಿಕನ್ ಸಿಕ್ಸ್‌ಟಿಫೈವ್ ಸೇವಿಸುವ ಒಬ್ಬ ವ್ಯಕ್ತಿ ಸವರ್ಣ ಸಿದ್ಧಾಂತದ ವಕ್ತಾರನಾಗ ಬಹುದು. ಫೈವ್ ಸ್ಟಾರ್ ಹೋಟೆಲುಗಳಲ್ಲಿ ನಾನ್ ವೆಜಿಟೇರಿಯನ್ ಸವರ್ಣತೆ ಕೊಬ್ಬಿ ಸೊಕ್ಕುತ್ತಿರುವಾಗ ಬೀದಿ ಬದಿಯ ತಟ್ಟಿಯಂಗಡಿಯಲ್ಲಿ ಬೇಯುವ ಮರಗೆಣಸು ಮತ್ತು ಪೋಟ್ಟಿ (ಪ್ರಾಣಿಗಳ ಕರುಳುಗಳನ್ನು ಒಟ್ಟು ಹಾಕಿ ಮಾಡಿದ ಪದಾರ್ಥ) ಕೆಳವರ್ಗದ ಅವರ್ಣತೆಯನ್ನು ಸೂಚಿಸುತ್ತದೆ ಎಂಬುದನ್ನು ನಾವು ತಿಳಿಯಬೇಕು. ಓಣಂಗೆ ಸಸ್ಯಾಹಾರವೇ ಆಗಬೇಕು ಎಂದು ಯಾರೂ ಬರೆದಿಟ್ಟಿಲ್ಲ. ಅವರವರಿಗೆ ಇಷ್ಟವಿರುವ ಪದಾರ್ಥಗಳನ್ನು ತಯಾರಿಸಿ ಭೋಜನವನ್ನು ಸಮೃದ್ಧಗೊಳಿಸುವುದೇ ಎಲ್ಲರೂ ಅನು ಸರಿಸುವ ನೀತಿ. ಪ್ರಾದೇಶಿಕವಾದ ಕೆಲವು ವ್ಯತ್ಯಯಗಳನ್ನು ಸಾಮಾನ್ಯವೆಂದು ಪರಿಗಣಿಸದಿರುವುದು ಒಳಿತು.

**ಓಣಂ, ಬಕ್ರೀದ್, ಕ್ರಿಸ್‌ಮಸ್ – ಹಿಂದು, ಮುಸ್ಲಿಂ, ಕ್ರಿಶ್ಚಿಯನ್ ?**

ಓಣಂ ಹಿಂದುಗಳ ಹಬ್ಬ, ಬಕ್ರೀದ್ ಮುಸ್ಲಿಮರ ಹಬ್ಬ ಮತ್ತು ಕ್ರಿಸ್‌ಮಸ್ ಕ್ರಿಶ್ಚಿಯನ್ನರ ಹಬ್ಬ ಎಂದು ಸಾಲಾಗಿ ಬರೆದು ಸಮೀಕರಿಸಿ ನೋಡುವುದು ವಿವೇಚನಾ ಶೂನ್ಯತೆಯ ಫಲವಷ್ಟೆ. ಧಾರ್ಮಿಕ ವರ್ಗೀಕರಣದ ಅರ್ಥಹೀನತೆಯತ್ತ ಬೊಟ್ಟು ಮಾಡಿ ತೋರಿಸುವ 'ಹಿಂದು ಯಾರು, ಮುಸ್ಲಿಂ ಯಾರು, ಕ್ರಿಶ್ಚಿಯನ್ ಯಾರು ?' ಎಂಬ ಹಳೆಯ ಸಿನಿಮಾ ಹಾಡಿನ ಪ್ರಶ್ನೆಗಳನ್ನು ಸದ್ಯಕ್ಕೆ ಬದಿಗಿಡೋಣ. ಧಾರ್ಮಿಕ ವಾಗಿ ಹಿಂದುವೂ, ಮುಸ್ಲಿಮನೂ, ಕ್ರಿಶ್ಚಿಯನ್ನನೂ ನಂಬಿ ಬೆಳೆಸಿಕೊಳ್ಳುವ ದೇವರ ಕಲ್ಪನೆಯಲ್ಲಿ ಬಹಳಷ್ಟು ಭಿನ್ನತೆ ಗಳಿವೆ. ಆದರೆ ಎಲ್ಲ ಧರ್ಮಗಳಲ್ಲಿನ ತೀವ್ರ ವಿಶ್ವಾಸಿಗಳು ಒಂದೇ ಥರದವರಾಗಿರುತ್ತಾರೆ. ಸಾಂಪ್ರದಾಯಿಕತೆಯ ಮೇಲಿನ ಕುರುಡು ನಂಬಿಕೆ ಇದರ ಪ್ರಮುಖ ಲಕ್ಷಣ.

ಆದರೆ ಕೆಲವು ವಿಚಾರಗಳಲ್ಲಿ ಹಿಂದು ಧರ್ಮ ಇತರ ಎರಡು ಧರ್ಮಗಳಿಗಿಂತ ಭಿನ್ನವಾದುದು. ಹಿಂದು ಧರ್ಮಕ್ಕೆ ಚಾರಿತ್ರಿಕ ಹಿನ್ನೆಲೆ ಇದೆ. ಮುಸ್ಲಿಂ ಮತ್ತು ಕ್ರಿಶ್ಚಿಯನ್ ಧರ್ಮಗಳ ಹಿಂದೆ ಇರುವವರು ಪ್ರವಾದಿಗಳು. ಅವುಗಳು ಪ್ರಾಧಾನ್ಯ ನೀಡುವುದು 'ಸಾಕ್ಷಾತ್ಕಾರ'ಕ್ಕೆ. ವೈಜ್ಞಾನಿಕ (ವಸ್ತುನಿಷ್ಠ) ನಿಯಮಗಳ ಅಡಿಪಾಯದಲ್ಲಲ್ಲದೆ ಆತ್ಮನಿಷ್ಠೆಯಲ್ಲಿ ಧ್ಯಾನಮಗ್ನರಾಗಿ (ತಪಸ್ಸು ಮಾಡಿ) ಪ್ರವಾದಿಗಳು ಹುಟ್ಟು ಹಾಕುವ ಧರ್ಮಗಳಲ್ಲಿ ನಂಬಿಕೆಯ ತೀಕ್ಷ್ಣತೆ ಏರುತ್ತದೆ. ತನ್ನ ತೀರ್ಮಾನಗಳು ಸರಿಯಾದುವೆಂದೂ, ಇತರರಿಗೂ ಅದುವೇ ಮೋಕ್ಷಮಾರ್ಗವೆಂದೂ ನಂಬಿದಾಗ ಅಲ್ಲಿಗೆ ವಿಶ್ವಾಸ ಕ್ಷೇತ್ರದ ಪ್ರಜಾಸತ್ತೆಯ ತಿರಸ್ಕಾರ ಪೂರ್ತಿಯಾಗುತ್ತದೆ.

ಹಿಂದು ಧರ್ಮ ಒಂದು ಪ್ರವಾದಿ ಧರ್ಮವಲ್ಲ, ಯಾವುದೇ ಒಂದು ದೈವದಲ್ಲಿ ಮಾತ್ರ ನಂಬಿಕೆಯಿಟ್ಟು ಕೊಂಡವರ ಸಂಘಟನೆಯಲ್ಲ ಅದು. ಮೂವತ್ತ ಮೂರು ಕೋಟಿ ದೇವತೆಗಳೆನ್ನುವುದು ಹಿಂದು ಧರ್ಮದ ಒಂದು ಹಳೆಯ ಸಣ್ಣ ಲೆಕ್ಕ. ಜನಸಂಖ್ಯೆ ಹೆಚ್ಚಾಗಿರುವುದನ್ನವಲಂಬಿಸಿ ದೇವತೆಗಳ ಸಂಖ್ಯೆಯೂ ಹೆಚ್ಚಾಗಬಹುದು. ಎಷ್ಟು ಮನುಷ್ಯ ರಿದ್ದಾರೋ ಅಷ್ಟೂ ದೈವಗಳಿಗೆ ಹಿಂದು ಧರ್ಮದಲ್ಲಿ ಎಡೆಯಿದೆ ಎಂಬುದು ವಾಸ್ತವ. ಹೊಸ ದೈವಗಳ ಮತ್ತು ಹೊಸ ಪ್ರತಿಷ್ಠಾಪನೆಗಳ ಸಾಧ್ಯತೆ ಹಿಂದು ಧರ್ಮದಲ್ಲಿ ಅನಂತವಾಗಿದೆ. ಹಾಗೆಯೇ ರೂಪವತಿ, ರೂಪವಂತರಾದ ದೇವರುಗಳು ಮಾತ್ರವಲ್ಲದೆ ವಿಕಾರ ಮತ್ತು ವಿಲಕ್ಷಣ ರೂಪಿನ ದೇವರುಗಳೂ ಹಿಂದು ಧರ್ಮದಲ್ಲಿದ್ದಾರೆ. ಮನುಷ್ಯರ ಜೊತೆಗೆ ಕ್ರಿಮಿಕೀಟಗಳಿಗೂ ಪ್ರಾಣಿಗಳಿಗೂ ದೈವತ್ವವನ್ನು ಕಲ್ಪಿಸುವ ಸುಧಾರಿತ ದೈವಕಲ್ಪನೆ ಹಿಂದು ಧರ್ಮದಲ್ಲಿದೆ. ಮಂಗ, ಜೇಡ, ಇಲಿ, ಹಾವು, ಗಣಪತಿ, ಮುತ್ತಪ್ಪ, ಮಹಾಲಕ್ಷ್ಮೀ, ಮಹಾವಿಷ್ಣು ಮಾತ್ರವಲ್ಲದೆ ಪರಬ್ರಹ್ಮನಿಗೂ ಹಿಂದು ಧರ್ಮದಲ್ಲಿ ಜಾಗವಿದೆ. ಹಿಂದು ಸಮುದಾಯದ ಸವರ್ಣ-ಅವರ್ಣ, ಜಾತಿ-ಉಪಜಾತಿಗಳವರು ತಮ್ಮ ತಮ್ಮ ಇಚ್ಛಾನುಸಾರ ಆರಾಧನೆ ನಡೆಸಬಹುದು. ಅಲ್ಲದೆ, ಈ ಯಾವ ದೈವಗಳಲ್ಲೂ ವಿಶ್ವಾಸವಿಲ್ಲದವರು ಕೂಡ



ಹಿಂದು ಧರ್ಮದಲ್ಲಿದ್ದಾರೆ. ನಾಸ್ತಿಕ ದರ್ಶನವೂ ಹೈಂದವ ದರ್ಶನದ ಒಂದು ಭಾಗ. ಬೇರಾವ ಧರ್ಮದಲ್ಲೂ ಇಂಥ ಅವ್ಯವಸ್ಥೆ ಅಥವಾ ಸ್ಥಿತಿಸ್ಥಾಪಕತ್ವವಿಲ್ಲ. ಈ ದೃಷ್ಟಿಯಿಂದ ನೋಡಿದಾಗ ಹಿಂದು ಧರ್ಮವು ಪೂರ್ತಿಯಾಗಿ ಒಂದು ಅರಾಜಕ ಧರ್ಮವೆನಿಸಬಹುದು.

ಹಿಂದು ಧರ್ಮವು ವಿವಿಧ ಜನವರ್ಗಗಳ ಜೀವನ ದೃಷ್ಟಿಗಳು ಸೇರಿ ಉಂಟಾಗಿದ್ದೇ ಇದಕ್ಕೆ ಕಾರಣ. ಈ ಪ್ರಕ್ರಿಯೆಯಲ್ಲಿ ಅನೇಕ ಆರ್ಯ-ಅನಾರ್ಯ ಅಂಶಗಳು ಒಳಗೊಂಡಿದ್ದರಿಂದ ಅದು ಏಕಕಾಲದಲ್ಲಿ ಅತಿ ಸರಳವೂ ಅತ್ಯಂತ ಸಂಕೀರ್ಣವೂ ಆಗಿದೆ. ಮೃತವೂ ಜೀವಂತವೂ ಆದ ಅಂಶಗಳು ಹಿಂದು ಧರ್ಮದಲ್ಲಿವೆ. ಚಾತುರ್ವರ್ಣ್ಯವೂ ಸವರ್ಣ-ಅವರ್ಣವೆಂಬ ವಿಭಜನೆಯೂ ಹಿಂದು ಪರಂಪರೆಯ ಅತ್ಯಂತ ನಿಕೃಷ್ಟವೂ ಹೇಯವೂ ಆದ ವಾಸ್ತವ. ಶ್ರೇಣೀಕೃತ ಜಾತಿ ವ್ಯವಸ್ಥೆಯಲ್ಲಿ ಈ ಪರಂಪರೆಯ ಆರ್ಥಿಕ ಉತ್ಪಾದನಾ ಕ್ರಮದ ಅಡಿಪಾಯವಿತ್ತು. ಅಧ್ವಾನ ಪಡುವ ಜನರನ್ನು ಮಾನಸಿಕವಾಗಿ ಗುಲಾಮರನ್ನಾಗಿಸಿ ದೈಹಿಕ ಶೋಷಣೆಗೆ ಗುರಿಪಡಿಸುವುದು ಹಿಂದು ಸಂಪ್ರದಾಯ ವಾಗಿತ್ತು. ವಸಾಹತೋತ್ತರ ಭಾರತದ ಕರಾಳ ಶಾಪಗಳಲ್ಲಿ ಒಂದು ಈ ಸಂಪ್ರದಾಯದ ಪುನರುಜ್ಜೀವನಕ್ಕಾಗಿ ನಡೆಯು ತ್ತಿರುವ ಪ್ರಯತ್ನ. ಅಲ್ಪಸಂಖ್ಯಾತರ ಮತ್ತು ಅವರ್ಣೀಯರ ಮೇಲೆ ಫ್ಯಾಸಿಸ್ಟ್ ಪೈಶಾಚಿಕತ್ವದೊಂದಿಗೆ ಆಕ್ರಮಣ ನಡೆಸುವ ಹಿಂದೂ ಪರ ವರ್ಗಗಳ ಸೃಷ್ಟಿ ಅದರ ಒಂದು ಭಾಗ.

ಸವರ್ಣ ವರ್ಗಗಳ ಸೃಷ್ಟಿಯು ರಾಜಕೀಯ ಅಧಿಕಾರ ಪಡೆಯಲು ಎಲ್ಲ ಬಗೆಯ ಹುನ್ನಾರಗಳನ್ನು ನಡೆಸುತ್ತಿದೆ. ಹಿಂದುತ್ವದ ಪ್ರಚಾರದೊಂದಿಗೆ ಬಹುಸಂಖ್ಯಾತರ ಜನರ ಬೆಂಬಲ ಪಡೆದು ರಾಜಕೀಯ ಅಧಿಕಾರ ಪಡೆಯುವುದು ಅವರ ಗುರಿ. ಬಾಬರಿ ಮಸೀದಿಯನ್ನು ಒಡೆದುಹಾಕಿದ್ದು ಮತ್ತು ಗುಜರಾತಿನಲ್ಲಿ ಕೋಮು ಗಲಭೆ ನಡೆಸಿದ್ದು ಎಲ್ಲವೂ ಸವರ್ಣ ಕೋಮುವಾದದ ರಾಜಕೀಯ ಪ್ರಯೋಗ ಗಳಾಗಿದ್ದವು. ಕ್ಷೇತ್ರಗಳನ್ನು, ಉತ್ಸವ ಸಮಿತಿಗಳನ್ನು ಮಾತ್ರವಲ್ಲ, ಎಲ್ಲ ಸಾರ್ವಜನಿಕ ವೇದಿಕೆಗಳನ್ನು ತೀವ್ರವಾಗಿ ಧರ್ಮೀಕರಣಗೊಳಿಸಿ ಹಿಂದು ಮತೀಯತೆಯ ಗಂಧ-ಚಂದನಗಳನ್ನು ಅವುಗಳಿಗೆ ಹಚ್ಚಿಡಲು ಅವರು ಪ್ರಯತ್ನಿಸುತ್ತಿದ್ದಾರೆ.

ಆದರೆ ಸವರ್ಣ ಹಿಂದುತ್ವಕ್ಕೆ ಆಧಿಪತ್ಯ ಸ್ಥಾಪಿಸಲು ಸಾಧ್ಯವಾಗದ ಒಂದು ಸಾರ್ವಜನಿಕ ಅವಕಾಶವಾಗಿ ಓಣಂ ಉತ್ಸವ ಇನ್ನೂ ಉಳಿದಿದೆ. ಪೂರ್ತಿ ಅರ್ಥದಲ್ಲಿ ಓಣಂ ಒಂದು ಸವರ್ಣ ಹಿಂದು ಉತ್ಸವವಲ್ಲ. ನವರಾತ್ರಿ ಅಥವಾ ಶಿವರಾತ್ರಿಯಂತಲ್ಲ ಅದು. ಓಣಂ, ಬಕ್ರೀದ್, ಕ್ರಿಸ್‌ಮಸ್ ಎಂದು ಒಟ್ಟಿಗೆ ಬರೆದು ಸಮಾನವೆಂದು ಹೇಳಿದರೆ ಅವೆಲ್ಲ ಒಂದೇ ರೀತಿ ಧಾರ್ಮಿಕವಾಗುವುದಿಲ್ಲ. ಶ್ರೀಕೃಷ್ಣ ಜಯಂತಿಯೂ, ಕ್ರಿಸ್‌ಮಸ್-ಬಕ್ರೀದ್‌ಗಳೂ ಸಮಾನವೆಂದು ಹೇಳಿದರೆ, ವಾಸ್ತವಕ್ಕೆ ಹತ್ತಿರವಾದ ಹೇಳಿಕೆಯಾಗಬಹುದು. ಓಣಂ ಇವುಗಳಿಗಿಂತ ಗುಣಾತ್ಮಕವಾಗಿ ಭಿನ್ನವಾದದ್ದು. ಹಿಂದು ದೈವವಾದ ಮಹಾವಿಷ್ಣುವನ್ನು ಪ್ರಧಾನ ಸ್ಥಾನದಲ್ಲಿ ನಿಲ್ಲಿಸಿ ಮಾಡುವ ಹಬ್ಬವಲ್ಲ ಓಣಂ. ಜನರ ಮನಸ್ಸುಗಳಲ್ಲಿ ಅದು ಮಹಾಬಲಿಯ ಹಬ್ಬ. ಮಹಾವಿಷ್ಣುವಿನದ್ದಲ್ಲ. ತೃಕ್ಕಾಕ್ಕರಪ್ಪ (ಬಲಿಯೇಂದ್ರ)ನ ನಡೆಯಲ್ಲಿ ಓಣಂ ಉತ್ಸವ ನಡೆಯ ದಿದ್ದರೂ, ಮಲೆಯಾಳಿಗಳಿಗೆ 'ಅತ್ತ'ವೂ (ಹಸ್ತಾ), ಹತ್ತು ದಿನಗಳ ನಂತರ ಓಣಂ ಹಬ್ಬವೂ ನಡೆದೇ ನಡೆಯುತ್ತದೆ.

ಮಹಾವಿಷ್ಣುವಿನ ಹಬ್ಬವಾಗಿ ಓಣಂ ಹಬ್ಬವನ್ನು ಕಾಣುವವರು ಅದರ ಸಹಜವಾದ ರಾಜಕೀಯ ಒಳ ನೋಟದ ಬಗ್ಗೆ ತಿಳಿದುಕೊಳ್ಳದಿರುವುದು ತಪ್ಪಾಗುತ್ತದೆ. ಧರ್ಮದ ಪ್ರಬಲವಾದ ಯಥಾಸ್ಥಿತಿತ್ವದ ಹೆಸರಿನಲ್ಲಾಗಲಿ, ಸವರ್ಣ ದೈವಸ್ಪರ್ಶ ಸಂದೇಹದ ಹೆಸರಿನಲ್ಲಾಗಲಿ, ಓಣಂ ಹಬ್ಬವನ್ನು ವರ್ಜಿಸುವವರಿರಬಹುದು. ಆದರೆ ಕೇರಳದ ಬಹುಸಂಖ್ಯಾತ ಜನರ ಹೃದಯದಲ್ಲಿ ಮಹಾಬಲಿ ಸ್ಥಿರವಾಗಿ ಪ್ರತಿಷ್ಠಿತನಾಗಿದ್ದಾನೆ. ಓಣಂ ಆಚರಣೆಯನ್ನು 'ಹುಡಿಹಾರಿಸಿ' ಸಂಭ್ರಮೋಲ್ಲಾಸಗಳಿಂದ ನಡೆಸುವ ಹಿಂದುಗಳಲ್ಲದವರು ಅದರಲ್ಲಿ ಆಪಾದಮಸ್ತಕ ಮುಳುಗುವುದು ಅದು ಸವರ್ಣ ಹಬ್ಬವೆಂದು ನಂಬಿ ಓಣಂ ಎಲ್ಲರ ಉತ್ಸವವೆಂದು ನಂಬುವ ಮುಗ್ಧ ಹೃದಯದ ಒಳ್ಳೆಯ ಮನುಷ್ಯರು ಅವರು. ಮನುಷ್ಯರ ಸಮಾನತೆಯ, ಒಳ್ಳೆಯತನದ, ಒಳ್ಳೆಯ ಆಡಳಿತದ, ಉತ್ತಮವೂ ಉದಾತ್ತವೂ ಆದ ಒಂದು ಹಳೆಯ ಕಾಲವು ನಮ್ಮದು ಮಾತ್ರವೆಂಬ ವಿಚಾರದಲ್ಲಿ ಅವರು ಹೆಮ್ಮೆ ಪಡುತ್ತಾರೆ.

'ಓಣಂ = ಹಿಂದುತ್ವ = ಸವರ್ಣತೆ Vs ಅವರ್ಣರು + (ಮುಸ್ಲಿಂ + ಕ್ರಿಶ್ಚಿಯನ್) ಅಲ್ಪಸಂಖ್ಯಾತರು' ಎಂಬ ಜಾಣ ಸೂತ್ರಗಳ ಮೇಲೆ ನಿಂತುಕೊಂಡು ಕೆ.ಇ.ಎನ್. ಎಂಬ ಲೇಖಕರು 'ಮಾತೃಭೂಮಿ' ವಾರಪತ್ರಿಕೆಯಲ್ಲಿ ೨೦೦೬ ನವೆಂಬರ್ ೧೨ರಂದು ಪ್ರಕಟವಾದ ತಮ್ಮ ಲೇಖನದಲ್ಲಿ ಓಣಂ ವಿರುದ್ಧವಾದ ತಮ್ಮ ವಾದವನ್ನು ಮಂಡಿಸುತ್ತಾರೆ. ಹಿಂದೂ ಮಿಥಾಲಜಿಗೆ ಸಂಬಂಧಪಟ್ಟದ್ದಾದರೂ ಇತರ ಹಿಂದು ಹಬ್ಬಗಳಿಗಿಂತ ಓಣಂ ಮೂಲಭೂತವಾಗಿಯೇ ಭಿನ್ನವಾದುದು ಎಂಬ ಸತ್ಯವನ್ನು ಅವರು ಅರ್ಥಮಾಡಿಕೊಳ್ಳುವುದಿಲ್ಲ. ಪಾತಾಳಕ್ಕೆ ತುಳಿದು ತಳ್ಳಲ್ಪಟ್ಟ ಅಸುರ ರಾಜನ ಸಾಮಾಜಿಕ, ಆರ್ಥಿಕ, ರಾಜಕೀಯ ಕ್ರಮದ ತಿರುಗಿ ಬರುವಿಕೆ ಅದು. ಮಾನವ ಚರಿತ್ರೆಯ ಶೈಶವದ ಕಳೆದುಹೋದ ಒಗ್ಗಟ್ಟಿನ ಭಾವನೆಯನ್ನು ಪ್ರೀತಿಯಿಂದ ನೆನಪಿಸಿಕೊಳ್ಳುವ ದಿನ ಓಣಂ. ಓಣಂ ಆಚರಿಸುವ ಹಿಂದುಗಳೆಲ್ಲರೂ ಹಿಂದುತ್ವವಾದಿಗಳಲ್ಲ. ಓಣಂ ಆಚರಿಸುವ ಮುಸ್ಲಿಮರು ಮತ್ತು ಕ್ರಿಶ್ಚಿಯನ್ನರು ಹಿಂದುಗಳಾಗಿ ಬಿಡುವುದೂ ಇಲ್ಲ. ಓಣಂ ಆಚರಿಸುವುದೋ ಬಿಡುವುದೋ ಎಂಬುದು ತೀರಾ ವೈಯಕ್ತಿಕ ಆಯ್ಕೆಯ ವಿಚಾರ. ಯಾವುದೇ ಸಮುದಾಯದ ನಿಯಮವು ಓಣಂ ಆಚರಣೆಯನ್ನು ನಿರ್ಬಂಧಿಸುವುದಿಲ್ಲ. ಸವರ್ಣ, ಅವರ್ಣ ಎಂಬ ಭೇದಗಳು ಪ್ರಸ್ತುತವಾಗುವುದು ಹಿಂದುತ್ವದ ಸಂದರ್ಭದಲ್ಲಾದರೂ ಕಳೆದ ಕೆಲವು ದಶಕಗಳಲ್ಲಿ ನಡೆದಿರುವ ಸಾಮಾಜಿಕ, ಆರ್ಥಿಕ ಬದಲಾವಣೆಗಳು ಸವರ್ಣ ಕ್ರಿಶ್ಚಿಯನ್ ಮತ್ತು ಸವರ್ಣ ಮುಸ್ಲಿಮ್‌ನನ್ನೂ ಸೃಷ್ಟಿಸಿವೆಯೆಂಬ ವಾಸ್ತವವನ್ನು ನಾವು ಅರ್ಥಮಾಡಿಕೊಳ್ಳಬೇಕು. ಎಲ್ಲ ಸಮುದಾಯಗಳಲ್ಲೂ ಸಾಮಾನ್ಯ ವರ್ಗವಾಗಿ ಬೆಳೆದುಬಂದ ಸಂಪನ್ನ ವಿಭಾಗವು ಕೆಳವರ್ಗದ ಜನರೊಂದಿಗೆ ತೋರಿಸುತ್ತಿರುವುದು ಸವರ್ಣ ಮನೋಭಾವವೇ ಹೊರತು ಬೇರೇನಲ್ಲ.

**ಓಣಂ ಮತ್ತು ಅನೌಪಚಾರಿಕ, ಸಾಂಸ್ಕೃತಿಕ ಶಿಕ್ಷಣ**

ಸಮುದಾಯವು ಬೆಳೆಸಿಕೊಳ್ಳುವ ಆಚಾರ-ಪದ್ಧತಿಗಳೂ, ಆಚರಿಸುವ ಉತ್ಸವಗಳೂ ಪರಂಪರಾಗತ ಪ್ರಜ್ಞೆಯನ್ನು ಪುನರುತ್ಪಾದಿಸುವ ಪಾಠಶಾಲೆಗಳು ಎಂಬ ಕೆ.ಇ.ಎನ್. ಅವರ ಅಭಿಪ್ರಾಯವನ್ನು ವಿರೋಧಿಸುವ ಅಗತ್ಯವಿಲ್ಲ.




ನಿರಂತರವಾದ ಆಚಾರ-ಅನುಷ್ಠಾನಗಳ, ನಮಸ್ಕಾರ, ನಿವೇದನೆ, ಉಪವಾಸ ಕ್ರಿಯಾದಿಗಳ, ಬರೆಯಲ್ಪಟ್ಟಿರುವ ವೇದ ಪುಸ್ತಕಗಳ, ಕಟ್ಟುನಿಟ್ಟಿನ ಆಚಾರ-ವಿಚಾರಗಳ ಸಂಕೇತಗಳ, ನಿಷ್ಕರುಣ ಆಳ್ವಿಕೆಯ ಅಂಗರಕ್ಷಣೆಯೊಂದಿಗೆ, ಧಾರ್ಮಿಕ ಸಮುದಾಯಗಳ ಸದಸ್ಯರು ಸಿದ್ಧಾಂತಗಳ ಅಮೂರ್ತ ಸಂಕೋಲೆಯೊಂದಿಗೆ ನಡೆಯಲು ಕಲಿಯುತ್ತಾರೆ. ಆದರೆ ವಾಸ್ತವಿಕ ಮತ್ತು ಚಾರಿತ್ರಿಕ ದೃಷ್ಟಿಯಿಂದ ವಿಷಯಗಳನ್ನು ಗಮನಿಸುವ ಹೊಣೆಗಾರಿಕೆಯೂ ನಮ್ಮದೇ. ಓಣಂ ಒಂದು ಭಿನ್ನ ರೀತಿಯ ಪಾಠಶಾಲೆ. ಅಲ್ಲಿ ಸಂಕೋಲೆಗಳಿಲ್ಲ. ಹೊಸತನವನ್ನು ಕಳೆದುಕೊಳ್ಳುವ ಪಾಠಪದ್ಧತಿ ಚಾಲ್ತಿಯಲ್ಲಿರುವ ಸಮಾಜದ ಸಾರ್ವಜನಿಕ ಪಾಠಶಾಲೆಯದು.

ಓಣಂ ದಿನಗಳಲ್ಲಿ ಕೇರಳದಲ್ಲಿ ಸಾಂಸ್ಕೃತಿಕ ಚಿಂತನೆ ಮತ್ತು ಚಟುವಟಿಕೆಗಳು ಜೀವ ತುಂಬಿಕೊಳ್ಳುತ್ತವೆ. ಪ್ರತಿ ಪಂಚಾಯತ್ ವಾರ್ಡಿನಲ್ಲೂ ಎರಡು-ಮೂರಾದರೂ ಉತ್ಸವ ಆಚರಣಾ ಸಮಿತಿಗಳು ಅಸ್ತಿತ್ವಕ್ಕೆ ಬರುತ್ತವೆ. ಕ್ಲಬ್ಬುಗಳೂ, ವಾಚನಾಲಯಗಳೂ ಈ ಸಂದರ್ಭದಲ್ಲಿ ಜೀವ ಪಡೆಯುತ್ತವೆ. ಎಲ್ಲ ಜಾತಿ-ಮತ-ಪಂಗಡಗಳಿಗೆ ಸೇರಿದ ಜನರೂ ಇಲ್ಲಿ ಸಹಕರಿಸುತ್ತಾರೆ. ಅವುಗಳ ಭಾಗವಾಗಿ ಒಂದೊಂದು ಸಾಂಸ್ಕೃತಿಕ ಸಮ್ಮೇಳನಗಳಾದರೂ ನಡೆಯುತ್ತವೆ. ಸುಮಾರು ಹದಿನಾರು ಸಾವಿರದಷ್ಟಾದರೂ ಸಾಂಸ್ಕೃತಿಕ ಸಮ್ಮೇಳನಗಳು ಓಣಂ ಕಾಲದಲ್ಲಿ ಕೇರಳದಲ್ಲಿ ನಡೆಯುತ್ತವೆಂಬುದನ್ನು ಹಲವರು ಗಮನಿಸಿರಲಾರರು. ಓಣಂನ ನಾಡಾದ ಕೇರಳದಲ್ಲಿ ಬಿಟ್ಟರೆ ಇನ್ಯಾವ ನಾಡಿನಲ್ಲಿ ಏಕಕಾಲದಲ್ಲಿ ಇಷ್ಟೊಂದು ಸಂಖ್ಯೆಯ ಸಂಘಟನೆಗಳು ಒಂದಾಗಿ ಕೆಲಸ ಮಾಡಲು ಸಾಧ್ಯ ? ಈ ಸಮ್ಮೇಳನಗಳಲ್ಲಿ ಮಹಾಬಲಿ ರಾಜ್ಯವನ್ನಾಳಿದ ಕಾಲದ ಕುರಿತು ಭಾಷಣಕಾರರು ಮತ್ತು ಸಭಿಕರು ಪ್ರೀತಿಯಿಂದ ನೆನಪಿಸಿಕೊಳ್ಳುತ್ತಾರೆ. ಮಹಾವಿಷ್ಣುವನ್ನು ಯಾರೂ ಹೊಗಳುವುದಾಗಲಿ, ಕೊಂಡಾಡುವುದಾಗಲಿ ಮಾಡುವುದಿಲ್ಲ. ವಾಮನ ಅಲ್ಲಿ ಬಾನೆತ್ತರಕ್ಕೇರುವ ಖಳನಾಯಕ. ಮಲಯಾಳಿಗಳು ಓಣಂ ಆಚರಿಸುವುದು ವಿಷ್ಣು ಸಹಸ್ರನಾಮ ಪಠಿಸಲಿಕ್ಕಾಗಿ ಅಲ್ಲ. ದುಃಖ ಸಂಕಟಗಳನ್ನೆಲ್ಲ ಮರೆತ ನಂತರ ಅಥವಾ ಬದಿಗೆ ಸರಿಸಿದ ನಂತರ ಅವರು ಧಾರಾಳವಾಗಿ ಸಂತೋಷದಿಂದ ಊಟ ಮಾಡುತ್ತಾರೆ. ಈ ಸಂದರ್ಭದಲ್ಲಿ ಯಾಂತ್ರಿಕವಾದ ಒಂದು ಅಕಾಡೆಮಿಕ್ ವ್ಯಾಯಾಮವೆನ್ನುವುದಕ್ಕಿಂತ ಹೆಚ್ಚಾಗಿ ಮನುಷ್ಯರ ಒಗ್ಗಟ್ಟಿನ ಕುರಿತಾಗಿಯೂ ಸಮಾನತೆ ಮತ್ತು ಒಳ್ಳೆಯ ಆಡಳಿತಗಳ ಕುರಿತಾಗಿಯೂ ಮಲಯಾಳಿ ಚಿಂತಿಸುತ್ತಾನೆ. ಒಟ್ಟು ಓಣಂ ಕಾಲದ ಕಲಾಕಾರ್ಯಕ್ರಮಗಳ ಮೂಲಕ ಮತ್ತು ಸಮ್ಮೇಳನಗಳ ಮೂಲಕ, ಸಮಾನತೆಗಳಿಲ್ಲದ ಅನೌಪಚಾರಿಕ ಸಾಂಸ್ಕೃತಿಕ ಶಿಕ್ಷಣದ ಕಲಾಪಗಳಲ್ಲಿ ಮಲಯಾಳಿ ಭಾಗಿಯಾಗುತ್ತಾನೆ. ಕಲೆ, ಕವಿತೆ, ಸಂಗೀತ ಇತ್ಯಾದಿಗಳು ಮಾತ್ರವೇ ಸಂಸ್ಕೃತಿ ಎಂಬ ಧೋರಣೆಯನ್ನು ಓಣಂ ನಿಲ್ಲಿಸುತ್ತದೆ. ಸಾಮಾಜಿಕ ಸಮಾನತೆಯ ಅಡಿಪಾಯದ ಮೇಲೆ, ಉತ್ಪಾದಿಸಲ್ಪಡುವ ಸಂಪತ್ತಿನ ನ್ಯಾಯಪೂರ್ವಕ ವಿತರಣೆಯು ಉಂಟುಮಾಡುವ ಜೀವಂತಿಕೆಯ ಗುಣವೇ ನಿಜವಾದ ಸಂಸ್ಕೃತಿ ಎಂಬ ಅರ್ಥವನ್ನು ಓಣಂ ಸ್ಫುರಿಸುತ್ತದೆ. ಭೋಜನದ ಮೂಲಕ ಆರ್ಥಿಕತೆಯ ರಾಜಕಾರಣವನ್ನು ನಮ್ಮ ಚರ್ಚೆಗಾಗಿ ಓಣಂ ಪ್ರಸ್ತುತಪಡಿಸುತ್ತದೆ. ಓಣಂ ಭೋಜನದ ಉಪ್ಪು-ಹುಳಿ-ಸಿಹಿಗಳೇ ಅದರ ರಾಜಕೀಯ.

ಓಣಂ ಅನೌಪಚಾರಿಕ ಸಾಂಸ್ಕೃತಿಕ ಪಾಠಶಾಲೆಯೆಂದೂ, ಅದು ಒಂದು ಸಮುದಾಯದ ಹಬ್ಬವಲ್ಲವೆಂದೂ, ಕೇವಲ ಒಂದು ಜನಸಮೂಹದ ಉತ್ಸವವೆಂದೂ ಅರ್ಥಮಾಡಿಕೊಳ್ಳದ್ದರಿಂದಾಗಿ ಕಳೆದ ಬಾರಿ ಓಣಂ ಕಾಲದಲ್ಲಿ ಕಲ್ಲಿಕೋಟೆಯ ಬಳಿಯ ಒಂದು ಖಾಸಗಿ ಮುಸ್ಲಿಂ ಕಾಲೇಜಿನ ಮ್ಯಾನೇಜ್‌ಮೆಂಟ್ ಮತ್ತು ಉಪನ್ಯಾಸಕರುಗಳು ಅಲ್ಲಿನ ವಿದ್ಯಾರ್ಥಿಗಳಿಗೆ ಓಣಂ ಆಚರಣೆಗೆ ಅವಕಾಶ ನೀಡಲಿಲ್ಲ. ಕಾಲೇಜಿನ ಅಧಿಕಾರಿಗಳ ಅಭಿಪ್ರಾಯದಲ್ಲಿ ಓಣಂ ಎಂದರೆ ಒಂದು ಹಿಂದು ಹಬ್ಬವಾಗಿತ್ತು. ಅಂಥ ಸಾಮುದಾಯಿಕ ಗುಂಪುಗಳ ಹಬ್ಬಗಳಿಗೆ ಕಾಲೇಜು ಸಮ್ಮತಿ ನೀಡುವುದಿಲ್ಲ. ಆದ್ದರಿಂದ ಓಣಂ ಹಬ್ಬಕ್ಕೂ ಒಪ್ಪಿಗೆ ಕೊಡಲಿಕ್ಕಾಗುವುದಿಲ್ಲ. ಆದರೆ ಸಂದೇಹವುಂಟಾಗುವುದು ಮ್ಯಾನೇಜ್‌ಮೆಂಟ್, ಪ್ರಿನ್ಸಿಪಾಲ್ ಮತ್ತು ಇತರರ ವಿವೇಚನಾ ಸಾಮರ್ಥ್ಯ ಮತ್ತು ಯಥಾರ್ಥಪ್ರಜ್ಞೆಯ ಬಗ್ಗೆ. ಕಳೆದ ಐವತ್ತು ವರ್ಷಗಳಿಗಿಂತಲೂ ಹೆಚ್ಚು ಕಾಲದಿಂದ ಓಣಂ ಜಾತ್ಯತೀತ ಗೊಳಿಸಲ್ಪಟ್ಟಿದೆಯೆಂದೂ, ಇತರ ಹಿಂದು ಹಬ್ಬಗಳಿಗಿಂತ ಅದು ಭಿನ್ನವಾದದ್ದೆಂದೂ ಈ ಜೀವಂತ ಫಾಸಿಲ್‌ಗಳು ಅರ್ಥಮಾಡಿಕೊಳ್ಳಲಿಲ್ಲ. ಆದರೆ ಅದೇ ಕಾಲೇಜಿನ ಮುಸ್ಲಿಮರೂ ಸೇರಿದಂತೆ ಎಲ್ಲ ವಿದ್ಯಾರ್ಥಿಗಳು ಅಧಿಕಾರಿಗಳು ಮತ್ತು ಉಪನ್ಯಾಸಕರ ನಿಲುವನ್ನು ಖಂಡಿಸಿ ವಿರೋಧ ವ್ಯಕ್ತಪಡಿಸಿಬಿಟ್ಟರು. ಆ ವಿದ್ಯಾರ್ಥಿಗಳೇ ಇಂದು ಜಾತ್ಯತೀತ ಸಮಾಜದತ್ತ ನಮ್ಮನ್ನು ಕೊಂಡೊಯ್ಯಬಲ್ಲ ಮಾರ್ಗದರ್ಶಕರು. ಇಂದು ಕೇರಳದ ಕ್ಯಾಂಪಸ್ಸುಗಳಲ್ಲಿ ಓಣಂ, ಕ್ರಿಸ್‌ಮಸ್ ಮತ್ತು ರಂಜಾನ್ ಹಬ್ಬಗಳನ್ನು ತೆರೆದ ಮನಸ್ಸಿನಿಂದ ಆಚರಿಸಲು ಸಿದ್ಧರಾಗಿ ಬರುವ ವಿದ್ಯಾರ್ಥಿವೃಂದಗಳೇ ಇವೆ. ಅವರು ಪೂಕಳ (ಹೂವಿನ ರಂಗೋಲಿ) ಇಡುವುದು, ಓಣಂ ಸದ್ಯ ತಯಾರಿಸುವುದು, ಕ್ರಿಸ್‌ಮಸ್ ಕೆರೋಲ್ ಹಾಡುವುದು, ಕೇಕು ಕತ್ತರಿಸುವುದು, ಇಫ್ತಾರ್ ಭೋಜನದ ತಯಾರಿ ನಡೆಸುವುದು. ಹೀಗೆ ಎಲ್ಲ ಹಬ್ಬಗಳನ್ನು ಜಾತ್ಯತೀತವನ್ನಾಗಿಸುತ್ತಾರೆ. ವ್ಯಾಲಂಟೈನ್ಸ್ ಡೇ ಆಚರಿಸುವ ಅದೇ ಸಂಭ್ರಮದೊಂದಿಗೆ (ವ್ಯಾಲಂಟೈನ್ಸ್ ಡೇ ಆಚರಿಸಬೇಕೇ ಎಂಬುದು ಬೇರೆ ಪ್ರಶ್ನೆ!) ಅವರು ಆಡಿ, ಹಾಡಿ, ಕುಣಿದು ಕುಪ್ಪಳಿಸುತ್ತಾರೆ. ಭೇದ-ಭಾವದ ಮುಳ್ಳುಬೇಲಿಗಳನ್ನು ನಾವು ಅವರ ಹೃದಯಗಳಲ್ಲಿ ಊರಬಾರದು. ಯಾಕೆಂದರೆ ಅವರು ನಮ್ಮ ನಾಳೆಯ

ಕನಸುಗಳು. ವರ್ಣಪುಷ್ಪಗಳಿಗೆ ಬಣ್ಣ ಹಾಕಬೇಕಾದ್ದು ರಕ್ತದ ಕಲೆಯಿಂದಲ್ಲ, ಮನಸ್ಸಿನಲ್ಲಿ ಜಾತಿ-ಧರ್ಮಗಳ ವಿಷಗಾಳಿಯನ್ನು ಹೊತ್ತು ನಡೆಯುವ ಅಧ್ಯಾಪಕರಿಗೂ ವಿದ್ಯಾರ್ಥಿಗಳ ಜಾತ್ಯತೀತ ಮನಸ್ಸುಗಳ ವೈಶಾಲ್ಯವನ್ನೂ ಬೆಳಕನ್ನೂ ಅರ್ಥಮಾಡಿಕೊಳ್ಳಲಿಕ್ಕಾಗುವುದಿಲ್ಲ. ಭೀರುತ್ವವೇ ಎಲ್ಲ ಸಂಪ್ರದಾಯವಾದಿಗಳಂತೆ ಈ ಅಧ್ಯಾಪಕರನ್ನೂ ಹಿಡಿದಿಡುವ ದೌರ್ಬಲ್ಯ. ಹೊಸ ನಂಬಿಕೆಗಳ ಬಿಸಿಯು ಭೌತಿಕ ಸುರಕ್ಷತೆಯನ್ನು ನಾಶಪಡಿಸಬಹುದೆಂದೂ, ಭೌತಿಕಾತೀತ ಬದುಕಿನ ಸ್ವರ್ಗವು ಹಾಳಾಗಬಹುದೆಂದೂ ಅವರು ಭಯಪಡುತ್ತಾರೆ. ಅವರ ದೃಷ್ಟಿ ತೀರಾ ಯಾಂತ್ರಿಕವಾಗಿರುತ್ತದೆ. ಆದರೆ ಆ ಯಂತ್ರವು ತುಕ್ಕು ಹಿಡಿಯುತ್ತಿದೆಯೆಂಬುದು ಅವರಿಗೆ ಗೊತ್ತಾಗುವುದಿಲ್ಲ. ಕುತೂಹಲ ಕೆರಳಿಸುವ ವಿಷಯವೆಂದರೆ ಓಣಂ ಸವರ್ಣ ವರ್ಗೀಯ ಮನೋಭಾವದ ಹಬ್ಬವೆಂದು ಹೇಳುವ ತೀವ್ರ ಪ್ರಗತಿಪರವಾದಿಯೂ, ಹಿಂದುಗಳ ಹಬ್ಬವೆಂದು ಪರಿಗಣಿಸುವ ಮತಾಂಧರಾದ ಕಾಲೇಜು ಅಧಿಕಾರಿಗಳೂ ತಮ್ಮ ತಮ್ಮ ಯಾಂತ್ರಿಕ ದೃಷ್ಟಿಗಳ ಮೂಲಕ ಹೋಗಿ ಸೇರುವುದು ಒಂದೇ ದಾರಿಯನ್ನು ಎನ್ನುವುದು.

**ಓಣಂ – ಮಾರ್ಕ್ಸಿಸ್ಟ್ ದೃಷ್ಟಿ**

ವಿವಿಧ ಸೈದ್ಧಾಂತಿಕ ಸಾಧನಗಳನ್ನುಪಯೋಗಿಸಿ ಜನಸಾಮಾನ್ಯರನ್ನು ಭಾವನಾತ್ಮಕವಾಗಿ ಗುಲಾಮರನ್ನಾಗಿಸಿ ವ್ಯಕ್ತಿನಿಷ್ಠ ನಂಬಿಕೆಗಳಲ್ಲಿ ಬಂಧಿಸಿ ಫ್ಯಾಸಿಸಂ ತನ್ನ ಸ್ಥಾಪಿತ ಗುರಿಗಳನ್ನು ಸಾಧಿಸಿಕೊಳ್ಳುತ್ತದೆ. ಜನಾಂಗ, ದೇಶ, ಧರ್ಮ, ಭಾಷೆ, ಜಾತಿ, ರಾಜಕೀಯ ಇವೆಲ್ಲವನ್ನು ಫ್ಯಾಸಿಸಂನ ವಕ್ತಾರರು ಅತ್ಯಂತ ಸಮರ್ಥವಾಗಿ ದುರುಪಯೋಗಪಡಿಸಿಕೊಳ್ಳುತ್ತಾರೆ. ವ್ಯಕ್ತಿನಿಷ್ಠ ನಂಬಿಕೆಯೆಂಬುದು ಅಂಥವೂ ಆಕ್ರಮಣಕಾರಿಯೂ ಆಗಬಲ್ಲುದು. ಈ ಸಂಕುಚಿತ ದೃಷ್ಟಿಯು ರಾಜಕೀಯಕ್ಕೂ ಬಾಧಕವಾಗಬಲ್ಲುದು. ಆದರೆ ರಾಜಕೀಯವನ್ನು ಅದರ ವೈಜ್ಞಾನಿಕತೆಯು ನಂಬಿಕೆಯ ಮಟ್ಟಕ್ಕೆ ಇಳಿಸದೆ ಅರಿವಿನ ಮಟ್ಟಕ್ಕೆ ಏರಿಸುತ್ತದೆ. ಮಾರ್ಕ್ಸಿಸಂನ ವೈಶಿಷ್ಟ್ಯವೂ ಇದೇ. ಚರಿತ್ರೆಯಿಂದಲೂ ನಿಸರ್ಗದಿಂದಲೂ ಸಂಪಾದಿಸುವ ಜ್ಞಾನದ ಆಧಾರದಿಂದ ತೀರ್ಮಾನಗಳತ್ತ ತಲುಪುವುದರಿಂದ ಮತ್ತು ಹೊಸ ಅರಿವಿನ ಬೆಳಕಿನಲ್ಲಿ ತಪ್ಪುಗಳನ್ನು ತಿದ್ದಿಕೊಳ್ಳುವುದರಿಂದ ವಿಜ್ಞಾನವನ್ನು ಯಾವಾಗಲೂ ಜೊತೆಗಿಟ್ಟುಕೊಳ್ಳುವುದು ಮಾರ್ಕ್ಸಿಸಂಗೆ ಸಾಧ್ಯವಾಗುತ್ತದೆ. ವರ್ಗ ರಾಜಕೀಯವು ವಸ್ತುನಿಷ್ಠತೆಗೆ ಪ್ರಾಧಾನ್ಯವೀಯುವ ವೈಜ್ಞಾನಿಕ ವಿಧಾನವನ್ನು ಅನುಸರಿಸಬೇಕು. ಇದರಲ್ಲಿ ವಿಫಲವಾದರೆ ಮಾರ್ಕ್ಸಿಸ್ಟ್ ದೃಷ್ಟಿಕೋನವೂ ವಿಫಲವಾಗುತ್ತದೆ. ಆದರೆ ತಪ್ಪುಗಳನ್ನು ಸರಿಪಡಿಸಿಕೊಳ್ಳುವ ಆಂತರಿಕ ಸಿದ್ಧತೆ-ವಿಮರ್ಶೆ ಮತ್ತು ಆತ್ಮವಿಮರ್ಶೆ – ಮಾರ್ಕ್ಸಿಸ್ಟ್ ಸಿದ್ಧಾಂತ ಮತ್ತು ಪ್ರಯೋಗಗಳ ಅಂತಸ್ಸತ್ವವಾಗಿದೆ. ಆದ್ದರಿಂದ ಎಲ್ಲಾ ರೀತಿಯ ಜನಾಂಗೀಯ, ರಾಷ್ಟ್ರೀಯ, ಧಾರ್ಮಿಕ ಮತ್ತು ಭಾಷಿಕ ಫ್ಯಾಸಿಸ್ಟ್ ವ್ಯಕ್ತಿನಿಷ್ಠತೆಗಳನ್ನು ಬುಡಮೇಲು ಮಾಡಲು ದ್ವಂದ್ವಾತ್ಮಕವೂ ಚಾರಿತ್ರಿಕವೂ ಆದ ಭೌತವಾದಕ್ಕೆ ಸಾಧ್ಯವಾಗುತ್ತದೆ. ಇದುವೇ ಅದರ ಇಂದಿನ ಮತ್ತು ಎಂದೆಂದಿನ ಅತುಲವಾದ ಮಹತ್ವ. ಮಾರ್ಕ್ಸ್‌ನ ನಂತರದ ಎಲ್ಲ ಚಿಂತನಾಕ್ರಮಗಳೂ ಮಾರ್ಕ್ಸಿಸಂನ ಗೂಟದ ಸುತ್ತ ಪರ ಮತ್ತು ವಿರುದ್ಧವಾಗಿ ಸುತ್ತುತ್ತಿರುತ್ತವೆ. ಆದ್ದರಿಂದ 'ಪೋಸ್ಟ್ ಮಾರ್ಕ್ಸಿಸ್ಟ್' ಎಂಬ ಪ್ರಯೋಗದ ಮೂಲಕ, ಮಾರ್ಕ್ಸಿಸಂನ ಕಾಲ ಮುಗಿದು ಹೋಯಿತೆಂದು ಮಾಡಿದ ಕೆಲವು ಬುದ್ಧಿಜೀವಿಗಳ ಆಸೆಯು ಪುಟಾಣಿ ಕೀಟದ ಕಿರಿಚಾಟವಾಗಿ ಕೊನೆಗೊಳ್ಳುತ್ತದೆ.

ಮನುಷ್ಯ ಸಮಾಜದ ವಿಕಾಸದಲ್ಲಿ ತಾತ್ವಿಕ ಪತನಗಳೂ, ತತ್ಪರಿಣಾಮವಾದ ಸಾಂಸ್ಕೃತಿಕ ಹಿನ್ನಡೆಗಳೂ ಅನಿವಾರ್ಯವಾಗಿದ್ದುವು. ಆದ್ದರಿಂದಲೇ ಯಾವುದೋ ಭೌತಿಕಾತೀತ ಶಕ್ತಿ ಜಗತ್ತನ್ನು ನಿರ್ದೇಶಿಸುತ್ತಿದೆ ಎಂಬ ತಪ್ಪು ಕಲ್ಪನೆಗೆ ವಿಭಿನ್ನ ತರ್ಕಗಳು ಮತ್ತು ವಿಭಿನ್ನ ದೈವಕಲ್ಪನೆಗಳು ಉಂಟಾಗಿ ದೈವಗಳ ಭಿನ್ನತೆ ಮತ್ತು ಬಹುಳತೆಗಳು ದೈವಗಳು ಮನುಷ್ಯನ ವ್ಯಕ್ತಿನಿಷ್ಠ ಉತ್ಪನ್ನಗಳೆಂಬುದನ್ನು ಸೂಚಿಸುತ್ತವೆ. ಈ ವೈಯಕ್ತಿಕತೆಯೇ ನಂಬಿಕೆಯ ತಳಪಾಯ. ಪ್ರತಿಯೊಬ್ಬ ವಿಶ್ವಾಸಿಯೂ ತನ್ನ ದೈವದ ಶಕ್ತಿ ಮಹತ್ವಗಳನ್ನು ಎತ್ತಿಹಿಡಿದು ತನ್ನ ಮನಸ್ಸಿಗೆ ಫ್ಯಾಸಿಸಂನ ದಾರಿ ತೆರೆಯುತ್ತಾನೆ.

ವಿಭಿನ್ನ ರಾಜಕೀಯ ಸಂದರ್ಭಗಳಲ್ಲಿ ಈ ವಿಶ್ವಾಸ ಪಕ್ಷಗಳು ಬಹುಸಂಖ್ಯಾತ-ಅಲ್ಪಸಂಖ್ಯಾತ ಸಮುದಾಯಗಳಾಗಿ ನೆಲೆಗೊಳ್ಳುತ್ತವೆ. ಪರಿಸ್ಥಿತಿಯ ಒತ್ತಡಕ್ಕನುಗುಣವಾಗಿ ಅವರು ಸೌಹಾರ್ದ ಅಥವಾ ಸಂಘರ್ಷದಲ್ಲಿ ಕಳೆಯುತ್ತಾರೆ. ಪ್ರತಿಯೊಂದು ಪಕ್ಷವೂ ಅನನ್ಯತೆಯನ್ನು ಬಯಸುತ್ತದೆ. ಪ್ರತಿಕ್ಷಣವೂ ಸಂಕುಚಿತಗೊಳ್ಳುತ್ತಿರುವ ನಮ್ಮ ಜಗತ್ತಿನಲ್ಲಿ (ನಮ್ಮ ಜಗತ್ತು ಇನ್ನೊಂದು ಅರ್ಥದಲ್ಲಿ ದೊಡ್ಡದಾಗುತ್ತಿದೆ!) ಸಂಕೀರ್ಣತೆಯ ಸಾಂದ್ರತೆ ಹೆಚ್ಚಾಗುತ್ತಿದೆ. ಆ ಮೂಲಕ ನಿಷೇಧಾತ್ಮಕ ನಿಲುವುಗಳು ತೀವ್ರವಾಗಿ ಸಂಕುಚಿತತೆಯ ಸಂಘರ್ಷಗಳಲ್ಲಿ ಕೊನೆಗೊಳ್ಳುತ್ತವೆ. ಈ ಸಂದರ್ಭದಲ್ಲಿ ವೈಜ್ಞಾನಿಕ ದೃಷ್ಟಿಯನ್ನು ಹೊಂದಲು ಸಾಧ್ಯವಾಗದಿರುತ್ತದೆ ಮತ್ತು ಪೂರ್ವಗ್ರಹಿಕೆಯು ನಮ್ಮ ದೃಷ್ಟಿಗೆ ಕಪ್ಪು ಬಳಿಯುತ್ತದೆ. ಫ್ಯಾಸಿಸಂನ ಕಪ್ಪು ಕನ್ನಡಕದಿಂದ ಬೆಳಕನ್ನು ತಡೆಹಿಡಿಯುವ ಕೆಲಸವನ್ನು ನಾವು ಮಾಡುತ್ತಿದ್ದೇವೆ. ಬೇರೆಯವರನ್ನು ತಡೆಹಿಡಿಯಲು ನಾವು ಕಟ್ಟುವ ಗೋಡೆಗಳು ನಮಗೇ ಅಡ್ಡ ನಿಲ್ಲುತ್ತವೆ. ನಾವೇ ಕಟ್ಟಿಕೊಂಡ ಕೋಟೆಯೊಳಗೆ ನಿಂತುಕೊಂಡು ಫ್ಯಾಸಿಸಂ ವಿರುದ್ಧ ಹೋರಾಡಲು ನಮ್ಮಿಂದ ಸಾಧ್ಯವಾಗಲಾರದು. ಫ್ಯಾಸಿಸಂಅನ್ನು ಎದುರಿಸುವವರು ಎಲ್ಲ ಸಮುದಾಯಗಳಲ್ಲೂ ಇದ್ದಾರೆ. ಫ್ಯಾಸಿಸ್ಟ್ ರಾಜಕಾರಣವನ್ನು ಪ್ರಯೋಗಿಸಲು ಅವಕಾಶ ಲಭಿಸಿದ ಬಹುಸಂಖ್ಯಾತ ಸಮುದಾಯದಲ್ಲಿ ಹುಟ್ಟಿಬಿಟ್ಟವರೂ, ಫ್ಯಾಸಿಸಂಅನ್ನು ಅಧಿಕಾರ ಸ್ಥಾನಕ್ಕೆ ತಲುಪಿಸಲು ಸಾಧ್ಯವಾಗದ ಅಲ್ಪಸಂಖ್ಯಾತ ಸಮುದಾಯದಲ್ಲಿ ಹುಟ್ಟಿದವರೂ ಅವರಲ್ಲಿ ಸೇರಿಕೊಂಡಿದ್ದಾರೆ. ಫ್ಯಾಸಿಸಂನ ನರ್ಸರಿ ಎಂದು ವಿಶೇಷವಾಗಿ ಹೆಸರಿಸಬಹುದಾದ ಎಲ್ಲಾ ರೀತಿಯ ವ್ಯಕ್ತಿನಿಷ್ಠ ವಿಶ್ವಾಸ ಪ್ರಮಾಣಗಳೆದುರು ವೈಜ್ಞಾನಿಕವಾದ ಅರಿವಿನ ಬೆಳಕಿನಲ್ಲಿ ಮಾರ್ಕ್ಸಿಸಂನ ಜ್ಞಾನ ಸಿದ್ಧಾಂತ ಪರವಾದ ಮಹತ್ವವನ್ನು

## ದೇವರಲ್ಲಿ ಸಾಮರಸ್ಯ

ಅಲ್ಲಾಹೊ ಅಕಬರ ಅಲ್ಲಾಹೊ ಅಕಬರ
ಎಂಬ ಅಜಾ ಮಸೀದಿಯಿಂದ
ತೂರಿ ಬಂದಾಗ

ಎದ್ದೇಳು ಮಂಜುನಾಥ ಎದ್ದೇಳು
ಬೆಳಗಾಯಿತು ಎದ್ದೇಳು
ಎಂಬ ಹಾಡು ಮಂದಿರದಿಂದ
ಹರಿದು ಬಂದಾಗ

ಅಲ್ಲಾ ಮತ್ತು ಮಂಜುನಾಥ
ಕೈ ಕೈ ಹಿಡಿದುಕೊಂಡು ಪ್ರೀತಿಯಿಂದ
ಊರ ಹೊರಗೆ ವಾಕಿಂಗ್ ಹೋಗಿಬಿಡುತ್ತಾರೆ.

ಇವರು ಆರ್ಭಟದಿಂದ
ಪ್ರಾರ್ಥನೆ-ಭಜನೆ ಮಾಡಿಕೊಂಡು
ಒಬ್ಬರಿಗೊಬ್ಬರು ಮುಖ ತಿರುವಿ
ಮನೆ ಸೇರಿದ ಮೇಲೆ
ಮಂಜುನಾಥ ಮತ್ತು ಅಲ್ಲಾ
ಮತ್ತೆ ಬಂದು ತಮ್ಮ ತಮ್ಮ
ಸ್ಥಾನದಲ್ಲಿ ನಗುತ್ತಾ ಕೂಡುತ್ತಾರೆ.

**ಎಂ. ಡಿ. ಗೋಗೇರಿ**
ನವ ಅಯೋಧ್ಯಾನಗರ, ಹುಬ್ಬಳ್ಳಿ - ೫೮೩ ೦೨೪

ತಿಳಿದವರು ವಿಮರ್ಶೆ ನಡೆಸಬೇಕು. ಫ್ಯಾಸಿಸಂನ ಪ್ರತ್ಯಕ್ಷವೂ ಪರೋಕ್ಷವೂ ಆದ ಏರುಗತಿಯ ವಿರುದ್ಧವಾದ ಹೋರಾಟವೇ ಪ್ರಸ್ತುತ ಭಾರತೀಯ ಪರಿಸ್ಥಿತಿಯ ಮುಖ್ಯ ಸಾಂಸ್ಕೃತಿಕ ಚಳುವಳಿ ಮತ್ತು ಪ್ರಮುಖ ರಾಜಕೀಯ ನಿಲುವು ಕೂಡ ಆಗಿದೆ. ಶ್ರೇಷ್ಠವಾದ ಸಾಂಸ್ಕೃತಿಕ ಚಳುವಳಿಯು ಮೌಲ್ಯಯುತವಾದ ರಾಜಕಾರಣವೂ ಹೌದು. ಮಾರ್ಕ್ಸಿಸ್ಟ್ ರಾಜಕಾರಣವು ಸಾಮಾಜಿಕ ವೈರುಧ್ಯಗಳನ್ನು ತೊಡೆದು ಹಾಕಿ ಆರ್ಥಿಕ ಅಸಮಾನತೆಗಳಿಲ್ಲದಂತೆ ಮಾಡಲು ನಡೆಸುವ ತ್ಯಾಗಪೂರ್ಣವಾದ ಕೆಲಸವಾಗಬೇಕು.

ಸಾಮಾಜಿಕ ಜೀವಂತಿಕೆಯ ಲಕ್ಷಣಗಳಾದ ಅನೇಕ ಸಾಂಸ್ಕೃತಿಕ ಪರಂಪರೆಯ ಧಾರೆಗಳು ಪಿತ್ರಾರ್ಜಿತ ಬಳುವಳಿಯಾಗಿ ನಮ್ಮಲ್ಲಿವೆ. ವರ್ತಮಾನವು ಅರಿವು ಮತ್ತು ಅವಶ್ಯಕತೆಗಳ ಬೆಳಕಿನಲ್ಲಿ ಅವುಗಳನ್ನು ಶೋಧಿಸಿ ನೋಡಿದಾಗ ಅವುಗಳಲ್ಲಿ ಹಲವು ನಿಷೇಧಾತ್ಮಕವೂ ಪ್ರತಿಗಾಮಿಯೂ ಆಗಿರುವುದು ಕಂಡುಬರುತ್ತದೆ. ಕೋಮು ಸಂಘರ್ಷಗಳಿಗೂ ರಕ್ತಪಾತಕ್ಕೂ ಎಡೆಮಾಡಿಕೊಡುವ ಧಾರ್ಮಿಕ ನಂಬಿಕೆಗಳು ಅಂಥವು. ಆದರೆ ಗತಕಾಲದ ಕೃಷಿಕ ಬದುಕಿನ ಭಾಗವಾಗಿದ್ದ ಓಣಂ ಇನ್ನೊಂದು ಸಾಂಸ್ಕೃತಿಕ ಪರಂಪರೆಯಾಗಿದೆ. ಇವೆಲ್ಲವೂ ಕಲಬೆರಕೆಯಾಗಿ ಸಂಕೀರ್ಣಗೊಂಡ ಸಾಮಾಜಿಕ ಸ್ಥಿತಿ ಇಂದು ಇದೆ. ವಿಶ್ವಾಸಿಗಳು ಮತ್ತು ಅಲ್ಲದವರಿಬ್ಬರೂ ಸೇರಿ ಸಹ ಜೀವನ ನಡೆಸಬೇಕಾಗಿ ಬಂದಾಗ ಸಾಂಸ್ಕೃತಿಕ ಪರಂಪರೆಯ ಧಾರೆಯೊಂದಿಗೆ ಭೌತವಾದಿ ಚಿಂತನೆಯಾದ ಮಾರ್ಕ್ಸಿಸಂ ಹೇಗೆ ಪ್ರಸ್ತುತವಾಗುತ್ತದೆ ಎಂಬುದು ಮುಖ್ಯ. ವಿಶ್ವಾಸ (ಧರ್ಮ)ವೆನ್ನುವುದು ಫ್ಯಾಸಿಸಂವರೆಗೆ ಹೋಗಿ ಅಧಃಪತನಗೊಳ್ಳಬಹುದೆಂದು ನಂಬುವ ಸ್ವಾತಂತ್ರ್ಯವನ್ನು ನಿರಾಕರಿಸುವ ಹಕ್ಕು ವಿಶ್ವಾಸಮುಕ್ತನಾದವನಿಗೆ ಇಲ್ಲ. ನಂಬದೇ ಇರುವ ಸ್ವಾತಂತ್ರ್ಯವನ್ನು ನಿರಾಕರಿಸಲು ವಿಶ್ವಾಸಿಗೆ ಅವಕಾಶವಿಲ್ಲ. ಈ ಸ್ಥಿತಿಯಲ್ಲಿ ವಿಶ್ವಾಸಿಗಳೂ ವಿಶ್ವಾಸವಿಲ್ಲದವರೂ ಒಟ್ಟಾಗಿ ಫ್ಯಾಸಿಸಂ ಎದುರು ಸಾರ್ವಜನಿಕ ವೇದಿಕೆಯನ್ನು ನಿರ್ಮಿಸಿ ಹೋರಾಡುವ ಕೆಲಸ ಮಾಡಬೇಕು. ವಿಶ್ವಾಸದ (ಧರ್ಮದ) ಹುಟ್ಟಿಗೂ ಬೆಳವಣಿಗೆಗೂ ಕಾರಣವಾದ ಬಾಹ್ಯ ಪರಿಸ್ಥಿತಿಗಳನ್ನು ಅರ್ಥಮಾಡಿಕೊಂಡು ಅದರ ವಿರುದ್ಧವಾಗಿ ನಿರಂತರ ಹೋರಾಟ ನಡೆಸಿದರೆ ಮಾತ್ರ ವ್ಯಕ್ತಿನಿಷ್ಠೆಯನ್ನು ಸೃಷ್ಟಿಸುವ ಅಂಧತೆಯಿಂದ ಜಾತ್ಯತೀತತೆ ಮತ್ತು ಧರ್ಮರಾಹಿತ್ಯದ ಬೆಳಕಿನತ್ತ ಸಾರ್ವಜನಿಕರನ್ನು ಕೊಂಡೊಯ್ಯಲು ಸಾಧ್ಯ. ಚರಿತ್ರೆಯನ್ನು ತಿರಸ್ಕರಿಸಿ ಅಥವಾ ಸುಮ್ಮನೆ ವಾದಿಸಿ ನಡೆಸುವ ವಿಮರ್ಶೆಯು ಸತ್ಯದರ್ಶನಕ್ಕೆ ಸಹಾಯಕವಾಗಲಾರದು.

ಆದ್ದರಿಂದ ಓಣಂನಂಥ ಹಬ್ಬಗಳ ಬಗ್ಗೆ, ಚಾರಿತ್ರಿಕವೂ ದ್ವಂದ್ವಾತ್ಮಕವೂ ಆದ ಭೌತವಾದದ ಅಡಿಪಾಯವುಳ್ಳ ದೃಷ್ಟಿಯನ್ನು ನಾವು ಬೆಳೆಸಿಕೊಳ್ಳಬೇಕಾಗಿದೆ. ಓಣಂ ಅಂದರೆ ಕೇವಲ ಧಾರ್ಮಿಕ ನಂಬಿಕೆಯ ಒಂದು ಅಂಶವಲ್ಲ. ಮಿಥ್ ಮತ್ತು ಸಂಪತ್ತು ಒಂದಾಗಿ ಬೆರೆತಂಥದ್ದು. ಮಿಥ್‌ಗಳನ್ನಾಧರಿಸಿದ ನಂಬಿಕೆಯೂ ಕೃಷಿಕ ಬದುಕಿನ ಬೆಳೆ ತೆಗೆಯುವ ಕ್ರಿಯೆಯೂ ಓಣಂನಲ್ಲಿ ಒಂದಾಗುತ್ತವೆ. ಜನಸಾಮಾನ್ಯರ ಬದುಕಿನ ಭೌತಿಕವಾದ ಆಸೆ ಆಕಾಂಕ್ಷೆಗಳ ಸಾಫಲ್ಯವೇ ಓಣಂ. ತೃಕ್ಕಾಕ್ಕರಪ್ಪನೂ ಓಣತ್ತಪ್ಪನೂ ಒಬ್ಬನೇ ಅಲ್ಲ. ದೇವರುಗಳನ್ನು ದೇವಸ್ಥಾನಗಳಲ್ಲಿ ಬಿಟ್ಟು, ಗೋಡೆಗಳನ್ನು ದಾಟಿ ಹೊರಗೆ ಹೋಗುವ ಹಬ್ಬ ಓಣಂ. ಅದು



ಭೋಜನದಷ್ಟೇ ಜಾತ್ಯತೀತವಾದುದು. ದುಡಿಯುವ ಮತ್ತು ಹಸಿವು ಅನುಭವಿಸುವ ಜನರ ಊಟಕ್ಕೆ ಇರುವುದು ಒಂದೇ ವರ್ಣ ಮತ್ತು ಒಂದೇ ವರ್ಗ. ಅದು ಕಾಳನ್ ಇರಬಹುದು, ದನದ ಮಾಂಸವೂ ಇರಬಹುದು.

ಸಂತಸ-ಸಂಭ್ರಮಗಳಿಂದ ಓಣಂ ಆಚರಿಸಲು ಮೊದಲಿಗಿಂತ ಹೆಚ್ಚಾಗಿ ಇಂದು ಕ್ರಿಶ್ಚಿಯನ್ನರೂ ಮುಸ್ಲಿಮರೂ ಸಿದ್ಧರಾಗುತ್ತಿದ್ದಾರೆ. ಅದರ ಅರ್ಥ ಓಣಂನೊಳಗಿನ ಜಾತ್ಯತೀತತೆಯನ್ನು ಅವರು ಅರ್ಥಮಾಡಿಕೊಂಡಿದ್ದಾರೆ. ಅಂಥ ಸುನ್ನಹದೋಸಿನ ತೀರ್ಮಾನಗಳನ್ನೂ ಮಾಹಲ್ಲ ಕಮಿಟಿಗಳ ಫತ್ವಾಗಳನ್ನೂ ಅಕಾಡೆಮಿಕ್ ಹೆಗ್ಗಣಗಳ ಚರ್ಚೆಗಳಿಗೆ ಬಿಟ್ಟುಕೊಟ್ಟು ಓಣಂನ ಸಮಗ್ರ ಸ್ವೀಕೃತಿಯನ್ನು ಅವರು ಆಸ್ವಾದಿಸುತ್ತಾರೆ. ಇದರ ಮಹತ್ವವನ್ನು ಅರ್ಥಮಾಡಿಕೊಳ್ಳಬೇಕಾದುದು ಓರ್ವ ಮಾರ್ಕ್ಸ್‌ವಾದಿಯ ಚಾರಿತ್ರಿಕ ಕರ್ತವ್ಯ. ಓಣಂನ ಜಾತ್ಯತೀತ ಮತ್ತು ರಾಜಕೀಯ ಹೂರಣವು ಸಶಕ್ತವೂ ಸಂಪನ್ನವೂ ಆಗುವಂತೆ ಮಾಡುವುದೇ ಓರ್ವ ಮಾರ್ಕ್ಸಿಸ್ಟನ ಸರಿಯಾದ ನಿಲುವು.

ಸಾಮುದಾಯಿಕ ಪರಂಪರೆಗಳು ನಮ್ಮ ಜನತೆಗೆ ಹಲವಾರು ಹಬ್ಬಗಳನ್ನು ಕೊಡುಗೆಯಾಗಿ ನೀಡಿವೆ. ಇವುಗಳ ಧಾರ್ಮಿಕ ಮಹತ್ವವನ್ನು ಅಲ್ಲಗಳೆಯಲಾಗುವುದಿಲ್ಲ. ಆದರೆ ಸಾಮುದಾಯಿಕ ಬಹುತ್ವಗಳು ನೆಲೆನಿಂತಿರುವ ಸಮಾಜದಲ್ಲಿ ವರ್ಗೀಯ ಧ್ರುವೀಕರಣವನ್ನು ಪ್ರೇರೇಪಿಸುವ ನಿಲುವುಗಳು ಸವರ್ಣವರ್ಗೀಯತೆಗೆ ದಾರಿ ಮಾಡಿಕೊಡಲೂಬಹುದು. ಆದ್ದರಿಂದ ಓಣಂನಂತೆ ಕ್ರಿಸ್‌ಮಸ್ ಮತ್ತು ರಂಜಾನ್ ಹಬ್ಬಗಳನ್ನು ಕೂಡ ಆಚರಿಸುವ ಒಂದು ಪ್ರಯತ್ನ ಮಾಡಬೇಕು. ಕೇವಲವೂ ಯಾಂತ್ರಿಕವೂ ಆದ ವೈಚಾರಿಕ ಚಿಂತನೆಗಳ ಮೂಲಕ ಓಣಂಅನ್ನು ಸವರ್ಣ ಹಿಂದುಗಳ ಹಬ್ಬ ಮಾತ್ರವಾಗಿ ಕಾದಿರಿಸುವುದಲ್ಲ ಒಬ್ಬ ಮಾರ್ಕ್ಸಿಸ್ಟ್‌ನ ಕರ್ತವ್ಯ. ಸವರ್ಣ ವರ್ಗೀಕರಣದ ವಿರುದ್ಧ ಹೋರಾಡುವ ಪ್ರಜಾಸತ್ತೆಯೊಳಗಿನ ಅವಕಾಶವನ್ನು ಹಿಗ್ಗಿಸುವುದೇ ಆತ ಮಾಡಬೇಕಾದ ಕೆಲಸ. ನೆರೆಮನೆಯವನ ದೈವವನ್ನು ಸೈತಾನನೆಂದು ತಿಳಿದುಕೊಳ್ಳುವುದಕ್ಕೆ ಬದಲಾಗಿ ನೆರೆಮನೆಯವನನ್ನು ಪ್ರೀತಿಸಿ, ಆತನ ದೈವವನ್ನು ಗೌರವಿಸುವ ಮನೋಭಾವ ಬೆಳೆಸಿಕೊಳ್ಳುವುದರತ್ತ ಮೊದಲ ಆದ್ಯತೆಯನ್ನು ಆತ ನೀಡಬೇಕಾಗಿದೆ. ಆದರೆ ಇದನ್ನು ಸಾಧಿಸಬೇಕಾದರೆ ವೈಯಕ್ತಿಕವಾದ ನಂಬಿಕೆಯ ಟೊಳ್ಳುತನವನ್ನು ವಿಮರ್ಶೆಗಳ ಮೂಲಕ ಬಯಲುಮಾಡುವುದೂ ಅಗತ್ಯವಾಗಿದೆ.

**ಓಣಂನ ಬದಲು ಓಣಂ ಮಾತ್ರ**

ಓಣಂನ ಬದಲಿಗೆ ಆಚರಿಸೋಣವೆಂದರೆ ನಮಗೆ ಬೇರೆ ಹಬ್ಬಗಳಿಲ್ಲ. ಮೇ ದಿನ, ಸ್ವಾತಂತ್ರ್ಯ ದಿನ, ರಿಪಬ್ಲಿಕ್ ಡೇ, ಇವು ನಮ್ಮ ಸಾರ್ವಜನಿಕ ಹಬ್ಬಗಳಾಗಲಾರವೆಂಬುದಕ್ಕೆ ಕಾರಣವನ್ನು ಚರಿತ್ರೆಯಲ್ಲೂ ಸಾಮಾಜಿಕ ಮನಃಶಾಸ್ತ್ರದಲ್ಲೂ ನಾವು ಹುಡುಕಬೇಕಾಗಿದೆ. ಕಾರ್ಮಿಕ ವರ್ಗದ ಮೇಲಿನ ಪ್ರೀತಿ, ದೇಶ ಪ್ರೇಮವೇ ಮೊದಲಾದವುಗಳು ಭಾವನಾತ್ಮಕವಾದ ಪ್ರೇರಣೆ ನೀಡಬೇಕಾದವುಗಳಾದರೂ, ಈಗಲೂ ನಾವು ಅವನ್ನು ಬೌದ್ಧಿಕವಾಗಿ ಮಾತ್ರ ಸ್ವೀಕರಿಸಿದ್ದೇವೆ. ಚಾರಿತ್ರಿಕವಾಗಿ ಹರಿದುಬಂದು ಮಿಥ್‌ಗಳಾಗಿ ಬದಲಾದ ವಿಶೇಷಣಗಳೇ ಸಹಜ ಹಬ್ಬಗಳು. ವರ್ಗೀಕೃತಗೊಂಡ ಸಮಾಜದಲ್ಲಿ ಮೇ ದಿನಾಚರಣೆಯು ಟ್ರೇಡ್‌ಯೂನಿಯನ್ನುಗಳ ಪ್ರಚಾರ ಮಾತ್ರವಾಗಿ ಸಂಕುಚಿತಗೊಂಡರೆ ಆಶ್ಚರ್ಯವಿಲ್ಲ. ಕಾರ್ಮಿಕ ವರ್ಗದ ಧಾರ್ಮಿಕ ಪ್ರಜ್ಞೆಯು ಸಮಾಜದ ಪ್ರಜ್ಞೆಯಾಗಿ ಬದಲಾಗುವ ತನಕ ಇವತ್ತಿನ ಸ್ಥಿತಿ ಮುಂದುವರಿ ಯುತ್ತದೆ. ಇದು ಯೂನಿಫಾರಂ ಹಾಕಿದ ತಲೆ ಹೊರೆಯ ಕೂಲಿಗೆ ಮಾತ್ರ ಇರಬೇಕಾದ ಗುಣ ವಿಶೇಷವಲ್ಲ. ಈ ಸಾರ್ವಜನಿಕ ಪ್ರಜ್ಞೆಯ ಸೃಷ್ಟಿಗಾಗಿ ಪ್ರಜ್ಞಾಪೂರ್ವಕವಾಗಿ ಕಾರ್ಯಪ್ರವೃತ್ತವಾಗುವುದು ಮಾರ್ಕ್ಸಿಸ್ಟ್ ಚಿಂತನೆಯ ಹೊಣೆಯೂ ಆಗಿದೆ.

ಮಲಯಾಳಂ ಮೂಲ : **ಡಾ|| ಕೆ. ಪಿ. ಕೃಷ್ಣನ್ ಕುಟ್ಟಿ**
ಭಾಷಾಶಾಸ್ತ್ರ ವಿಭಾಗ, ತೌಲನಿಕ ಸಾಹಿತ್ಯ ಅಧ್ಯಯನ ಕೇಂದ್ರ,
ಶ್ರೀ ಶಂಕರಾಚಾರ್ಯ ಸಂಸ್ಕೃತ ವಿಶ್ವವಿದ್ಯಾಲಯ, ಕಾಲಡಿ, ಕೇರಳ.

ಕನ್ನಡಕ್ಕೆ : **ಪಾರ್ವತಿ ಜಿ. ಐತಾಳ್**
'ಸುರಗಂಗಾ', ಬಸ್ರೂರು ಕ್ರಾಸ್ ರೋಡ್
ಕುಂದಾಪುರ - ೫೭೬ ೨೦೧

ಮಂಜುನಾಥ್ ಎಚ್. ಸಿ.

# ಗ್ರಹಚಾರ



ದಾವಣಗೆರೆ ಜಿಲ್ಲೆಯ ಕೊಂಡಜ್ಜಿ ಗ್ರಾಮದಲ್ಲಿ ಹಿಟ್ಟಿನ ಗಿರಣಿ ಒಂದೂ ಇಲ್ಲದ್ದರಿಂದ, ಗ್ರಾಮದ ಸರ್ವ ನಾಗರಿಕರು ದಾವಣಗೆರೆಗೆ ಬಂದಾಗ ಜೋಳ, ರಾಗಿ, ಅಕ್ಕಿ, ಮೆಣಸಿನಕಾಯಿ, ಮತ್ತು ದವಸಧಾನ್ಯಗಳನ್ನ ಹಿಟ್ಟು ಮಾಡಿಕೊಂಡು ಹೋಗಬೇಕಿತ್ತು. ಆದ್ದರಿಂದಲೇ ವ್ಯವಹಾರಜ್ಞಾನದ ಉಚ್ಚಂಗಿ ಕರಿಯಪ್ಪ ತನ್ನ ಮಗಳು ನಿಂಗಿಯನ್ನ ಕೊಂಡಜ್ಜಿ ಹನುಮಂತನಿಗೆ ಧಾರೆ ಎರೆಯುವಾಗ ವರದಕ್ಷಿಣೆಯ ಬದಲಿಗೆ ಒಂದು ಹಿಟ್ಟಿನ ಗಿರಣಿಯನ್ನ ಕೊಂಡಜ್ಜಿಯ ಅಗಸೆ ಬಾಗಿಲ ಒಂದು ಮೂಲೆಯಲ್ಲಿ ಇಟ್ಟುಕೊಟ್ಟು, ತಬ್ಬಲಿ ಆಳು ತಿಮ್ಮನನ್ನ ಸಹಾಯಕ್ಕೆ ಕಳಿಸಿಕೊಟ್ಟು, ಇನ್ನು ತನ್ನ ಮಗಳು ನಿಂಗಿ ಸುಖದ ಸುಪ್ಪತ್ತಿಗೆಯ ಮೇಲೆ ಉರುಳಾಡುವಳೆಂದು ನೆಮ್ಮದಿಯ ನಿಟ್ಟುಸಿರು ಬಿಟ್ಟ.

ಗ್ರಾಮದ ಮಹಾ ಜನತೆ ಈ ವಿಷಯ ತಿಳಿದೊಡನೆ ಖುಷಿಗೊಂಡರು. ಮೊದಮೊದಲು ಗಿರಣಿ ಹಳ್ಳಿಯಲ್ಲಿ ಹೊಸ ಸಂಚಲನವನ್ನೆ ಸೃಷ್ಟಿಸಿತು. ಹಳ್ಳಿಯ ಪಿಳ್ಳೆಗಳಂತೂ ಗೋಲಿ, ಬುಗುರಿ, ಚಿನ್ನಿದಾಂಡು ಆಡುವುದನ್ನ ತಾತ್ಕಾಲಿಕವಾಗಿ ತೊರೆದು ಗಿರಣಿಯ ಮುಂದೆ ಬಂದು ನಿಂತು, ಅಲ್ಲಿ ಸುರಿಯೊ ಕಾಳು ಇಲ್ಲಿ ಹಿಟ್ಟಾಗಿ ಬೀಳೋದನ್ನ ಕುತೂಹಲ ಮತ್ತು ಮುಗ್ಧತೆಯಿಂದ ನೋಡತೊಡಗಿದವು. ಸುತ್ತಮುತ್ತಲಿನ ಗಿಡಗಂಟೆಗಳು ಮೈಗೆ ಪೌಡರ್ ಬಳಿದುಕೊಂಡು ರಾರಾಜಿಸಿದವು. ನಾಲ್ಕು ಗೋಡೆಗಳ ಮಧ್ಯೆ ಧಗಧಗಿಸುವ ಬೆಂಕಿಯ ಮುಂದೆ ಕುಂತು ಬೆಂದು ಬೇಯಿಸುವ ಹೆಣ್ಣುಮಕ್ಕಳು ಪ್ಲಾಸ್ಟಿಕ್ ಮತ್ತು ಸಿಲವಾರದ ಡಬ್ಬದಲ್ಲಿ, ದವಸ ಧಾನ್ಯಗಳನ್ನ ತಂದು ಸರದಿಗೆ ಇಟ್ಟು ಕಷ್ಟಸುಖ ಮಾತಾಡಲು ಶುರುಮಾಡಿದರು.

ಹೊಸ ಮಿಷನ್ ಆದ್ದರಿಂದ ಒಂದು ಕೆ.ಜಿ. ಜೋಳಕ್ಕೆ ಕಾಲು ಕೆ.ಜಿ. ಹಿಡಿದು ಮುಕ್ಕಾಲು ಕೆ.ಜಿ. ಹಿಟ್ಟನ್ನ ಹೊರಬಿಟ್ಟಿತು. ಅರ್ಧ ಕೆ.ಜಿ. ರಾಗಿಗೆ ಅದರರ್ಧ ಹಿಟ್ಟನ್ನ ಹೊರಬಿಟ್ಟಿತು. ಅದನ್ನ ಮೊದಲು ಗಮನಿಸಿದ ತಿಪ್ಪೆ ಮನಿ ಸಿದ್ದಕ್ಕ ಕ್ಯಾತೆ ತೆಗೆದಳು. ''ಮಿಷನ್ನಿನ ಹೊಟ್ಟೆಗೆ ಹಾಕಿದ್ದು ಪೂರಾ ಬೆಷನ್ನು. ಅದು ಏತದ್ದು ಮುಕ್ಕಾಲು ಬೆಷನ್ನು'' ಎಂದಳು. ''ಹೊಸ ಮಿಷನ್ನು ಅಲ್ಲಕ್ಕ, ಅದಕ್ಕಿನ್ನು ಸರ್ವಿಸ್ ಆಗಿಲ್ಲ, ಒಂದು ಮಿನಿಟು ಇರಕ್ಕ ತಕ್ಕೊಡ್ತಿನಿ'' ಎಂದು ತಿಮ್ಮನಿಗೆ ಸ್ವಿಚ್ ಆಫ್ ಮಾಡಲು ಹೇಳಿ ಕಡ್ಡಿಂಪ್ಲಾನ್, ಸ್ಪ್ಯಾನರ್ ಹಿಡಿದು ಅದರ ಅಡ್ಡ ಕ್ಯಾಪನ್ನ ಬಿಚ್ಚಿ ಒಳಗೆ ಅಲ್ಲಿ ಇಲ್ಲಿ ಸಂಗ್ರಹವಾಗಿದ್ದ ಹಿಟ್ಟನ್ನ ತೆಗೆದು ಸಿದ್ದವ್ವನ ಬೆಷನ್ನಿಗೆ ಸುರುವಿದ. ''ಅಯ್ಯೋ ಶಿವನೇ, ಅದರಾಗಿನ ಮಿಕ್ಸ್ ಹಿಟ್ಟನ್ನೆಲ್ಲಾ ಸುರುವಿ ಮಿಕ್ಸ್ ಮಾಡಿದೆಲ್ಲೊ ತಮ್ಮ'' ಎಂದು ಒಂದು ಹಿಡಿ ಶಾಪ ಹಾಕಿ ಸಿದ್ದವ್ವ ಮನೆಗೋಗಿ ಮುದ್ದೆ ಮಾಡಿ ಗಂಡನಿಗೆ ಬಡಿಸಿದಳು. ಪಾಕೀಟು ಕುಡಿದು ಮತ್ತಿನಲ್ಲಿದ್ದ ಗಂಡ ಈರಬದ್ರಿ ಎದ್ದವನೇ ''ಇದೇನು ಮುದ್ದೆಯೋ ಇಲ್ಲ ಸಗಣಿ ಉಂಡೆಯೋ'' ಎನ್ನುತ್ತ ಎದ್ದು ಸಿದ್ದಕ್ಕನ ಕೆನ್ನೆಗೆ ಪಟೀರಂತ ಕೊಟ್ಟ. ಸಿಟ್ಟಿಗೆದ್ದ ಸಿದ್ದಕ್ಕ ಮಿಷನ್ನಿನ ಮಹಿಮೆಯನ್ನ ಹತ್ತಾರು ಕಿವಿಗಳಿಗೆ ಹರಡಿ ಮನಸ್ಸನ್ನ ಹಗುರಮಾಡಿಕೊಂಡಳು. ಈ ವಿಚಾರ ಗಾಳಿಯಲ್ಲಿ ತೇಲಿ ಒಬ್ಬರಿಂದೊಬ್ಬರ ಕಿವಿ ಮುಟ್ಟಿ ಹರಡಿತು. ಹನುಮಂತನ ಕಣ್ಣು ತಪ್ಪಿಸಿ ಕಾಳುಗಳು ಹಿಟ್ಟಾಗಲು ದಾವಣಗೆರೆ ಸೇರತೊಡಗಿದವು.

ಕಾಲಾನಂತರ ಹನುಮಂತನ ವ್ಯಾಪಾರ ಡಲ್ ಆಯ್ತು. ನಲ್ಲಿಮನಿ ಸಿದ್ದಪ್ಪನ ಹತ್ತಿರ ಮಾಣಿಕ್ ಚಂದ್ ಹಂಚಿಕೊಂಡ ಹನುಮಂತ ತನ್ನ ದುಃಖವನ್ನ ತೋಡಿಕೊಂಡ. ''ಹಿಟ್ಟಿನ ಗಿರಣಿ ನಡೆಸೋದು ತುಂಬ ಕಷ್ಟ ಇದೆ ಸಿದ್ದಪ್ಪಣ್ಣ, ಕರೆಂಟ್ ಬಿಲ್ ಕಟ್ಟೊಕೆ ಸಾಕಾಗಲ್ಲ ಇನ್ನು ಸಂಸಾರ ಹೇಗೆ ನಡಿಸ್ಲಿ ಹೇಳು'' ಎಂದ.

''ಏ ಗಿರಣಿ ನಡೆಸಿ ಉದ್ಧಾರ ಆದೋರ್ನ ನಾನೆಲ್ಲು ನೋಡಿಲ್ಲ ತೆಗಿ. ನಿಮ್ಮಾವನಿಗೆ ಬುದ್ಧಿ ಇಲ್ಲ ಈ ಹಾಳು ವ್ಯವಹಾರ ಹಚ್ಚಿಕೊಟ್ಟನಾ, ನೀನು ಸುಮ್ನೆ ಇದನ್ನ ಮಾರಿ ಕೊಂಡಜ್ಜಿಯಿಂದ ದಾವಣಗೆರೆಗೆ ಒಂದು ಬಸ್ಸು ಬಿಡು. ಒಳ್ಳೆ ದುಡ್ಡು ಮಾಡ್ಬಹುದು'' ಎಂದ ಸಿದ್ದಪ್ಪ.

''ಅಂಗಂತಿಯಾ ಸಿದ್ದಣ್ಣ''

''ಮತ್ತೆ ನೀನೇ ನೋಡ್ತಿಲ್ವ, ಇರೊ ಎರಡು ಬಸ್ಸಿಗೆ ಜನ ಹೇಗೆ ಬಕಪಕ್ಷಿ ಕಾದಂಗೆ ಕಾಯ್ತಯಿರ್ತಾರೆ ಅಂತ, ನೀನೊಂದು ಬಿಟ್ಟರೆ ಮೂರು ಆಗಲ್ವ ? ನನ್ನ ಅಳಿಯ, ಅದೆ ನನ್ನೆಂಡ್ತಿ ತಮ್ಮ ಸುರೇಶ, ಬ್ಯಾಂಕಿನಾಗೆ ಸಾಲ ಮಾಡಿ ಬಸ್ಸು ತಗೊಂಡು ಶಿವಮೊಗ್ಗ ಟು ತೀರ್ಥಹಳ್ಳಿಗೆ ಬಿಟ್ಟನೋಡು ಮೂರೆ ವರ್ಷದಾಗೆ ಸಾಲ ತೀರಿಸಿ ಮತ್ತೊಂದು ಬಸ್ಸು ತಗೊಂಡನೇ'' ಎಂದ.

''ಅಯ್ಯೊ ನಂಗೆ ಬಸ್ಸು ಬಿಡಕೆ ಬರೊಲ್ವಲ್ಲಣ್ಣ''

''ಬಸ್ಸು ಬಿಟ್ರೆ ಬಸ್ ಡ್ರೈವರ್ ಆಗ್ತಿಯ, ಓನರ್ ಆಗಲ್ಲ, ಅಷ್ಟೆ. ನೋಡು ಆ ನಿಂಗವ್ವನ ಮಗ ರೇವಣಿ ಇದಾನಲ್ಲ, ಮೊದ್ಲು ಲಾರಿ ಡ್ರೈವರ್ ಆಗಿದ್ದಿಲ್ವ, ಅವನಿಗೆ ದಿನಕ್ಕೆ ನೂರು ಕೊಟ್ರೆ ಓಡುಸ್ತಾನೆ'' ಎಂದ ಸಿದ್ದಪ್ಪಣ್ಣ.

ಈ ಐಡಿಯಾ ಹನುಮಂತನಿಗೆ ಸರಿ ಕಾಣಿಸಿತು. ಏಕೆಂದರೆ ಕೊಂಡಜ್ಜಿಯಿಂದ ದಾವಣಗೆರೆಗೆ ಕೊಂಡಿಯಾಗಿ ಇದ್ದದ್ದು ಎರಡು ಬಸ್ಸು. ಒಂದು ಹನುಮಾನ್, ಇನ್ನೊಂದು ಲಕ್ಷ್ಮಿದೇವಿ. ಇವೆರಡೂ ಕೊಂಡಜ್ಜಿಯನ್ನ ಬಿಟ್ಟವೆಂದರೆ ಕಕ್ಕರಗೊಳ್ಳ, ಅವರಗೊಳ್ಳ, ಎರಗುಂಟೆಯನ್ನ ಹಾದು ನಂತರ ದಾವಣಗೆರೆಯನ್ನ ತಲುಪುತ್ತಿದ್ದವು. ಬೆಳಗಾಯಿತೆಂದರೆ ಹಾಲು, ತರಕಾರಿ, ಧಾನ್ಯವನ್ನ ಮಾರುವವರು, ಕೂಲಿಗೆಂದು ದಾವಣಗೆರೆಗೆ ಹೋಗುವವರು, ಈ ಎರಡು ಬಸ್ಸಿಗೆ ಬಕಪಕ್ಷಿಗಳಂತೆ ಕಾದು ಸಕ್ಕರೆಗೆ ಇರುವೆ ಮುತ್ತಿದಂತೆ ಮುತ್ತುತ್ತಿದ್ದರು. ಕೆಲವೊಮ್ಮೆ ಕೊಂಡಜ್ಜಿ ಕಕ್ಕರಗೊಳ್ಳದಲ್ಲಿ ಬಸ್ಸು ರಶ್ ಆಗಿ ತುಂಬು ಗರ್ಭಿಣಿಯಂತಾಗಿಬಿಡುತ್ತಿದ್ದರಿಂದ ಅವರ ಡ್ರೈವರ್ ಅವರಗೊಳ್ಳದಲ್ಲಿ

ಕಾಯುತ್ತಿದ್ದ ಪ್ರಯಾಣಿಕರನ್ನ ನಿರ್ಲಕ್ಷಿಸಿ ಸ್ಟಾಪ್ ಕೊಡದೆ ಹೋಗುತ್ತಿದ್ದರಿಂದ ಅಲ್ಲಿಯ ಪ್ರಯಾಣಿಕರು ಸಿಟ್ಟಿಗೆದ್ದು ಸೈಕಲ್‌ಅನ್ನೊ, ಸೈಜುಗಲ್ಲನ್ನೊ ರಸ್ತೆಗೆ ಅಡ್ಡಹಾಕಿ ಪ್ರತಿಭಟಿಸಿ ''ಏಕಲೆ ರಾಮ್ಯ ತಿಂದು ಹೆಚ್ಚಾಯಿತಾ? ನಮ್ಮನ್ನ ಹತ್ತಿಸಿಕೊಳ್ಳದೆ ಅದೇಗೆ ಮುಂದಕ್ಕೆ ಹೋಗ್ತಿಯೊ ಹೋಗು ನೋಡೋಣ'' ಎಂದು ಡ್ರೈವರಿಗೆ ಧಮಕಿ ಹಾಕುತ್ತಿದ್ದರು.

ಈ ಎಲ್ಲಾ ಕಾರಣಗಳಿಂದಲೂ ಸಿದ್ದಪ್ಪನ ಐಡಿಯ ಹನುಮಂತನಿಗೆ ಸರಿ ಕಾಣಿಸಿತು. ಮನೆಗೆ ಬಂದವನೆ ನಿಂಗಿಗೆ ಈ ವಿಚಾರ ಹೇಳಿದ. ಅದಕ್ಕವಳು, ''ಅಷ್ಟು ಮಾಡ್ರಿ, ಈ ಗಿರಣಿಯಿಂದ ಸುಖ ಪಟ್ಟಿದ್ದು ಅಷ್ಟರಲ್ಲೆ ಇದೆ. ನೀವು ದಿನಾ ಮೈಯೆಲ್ಲಾ ಹಿಟ್ಟಾಗಿ, ದೆವ್ವ ಬಂದಂಗೆ ಬರೋದು, ನಾನು ಒಂದು ಹಂಡೆ ನೀರನ್ನ ಕಾಯಿಸಿ ನಿಮ್ಮ ಮೇಲೆ ಸುರಿಯೋದು ತಪ್ಪುತ್ತೆ. ಮನೇಲಿ ತೊಳ್ಕೊಳಕೆ ನೀರಿರೊಲ್ಲ ಅಂತದ್ರಗೆ ನಿಮ್ದು ಬೇರೆ'' ಅಂದಳು. ಹನುಮಂತನಷ್ಟೆ ಅಲ್ಲ ನಿಂಗಿಯು ಗಿರಣಿಯಿಂದ ರೋಸಿಹೋಗಿದ್ದಳು. ರಾತ್ರಿ ಗಂಡನನ್ನ ತಬ್ಬಿಮಲಗಿದ್ದಾಗ ಹನುಮಂತನ ಮೈಯಿಂದ ಜೋಳ, ರಾಗಿ, ಅಕ್ಕಿ, ಗೋಧಿಹಿಟ್ಟಿನ ವಾಸನೆ, ಕೆಲವೊಮ್ಮೆ ಖಾರ ಖಾರವಾಗಿ ಬರುತ್ತಿತ್ತು. ತನ್ನ ಗಂಡನ ಕಿವಿಗಳು ಗಿರಣಿಯ ಶಬ್ದಕ್ಕೆ ಮಂದವಾಗುತ್ತಿದ್ದುದ್ದನ್ನ ಇತ್ತೀಚೆಗೆ ಗಮನಿಸಿದ್ದಳು.

ಸಿದ್ದಪ್ಪನ ನೇತೃತ್ವದಲ್ಲಿ ಹನುಮಂತ ಎರಡು ಲಕ್ಷಕ್ಕೆ ಗಿರಣಿ ಮಾರಿದ. ಅಷ್ಟಕ್ಕೆ ಹೊಸ ಬಸ್ಸು ತರುವುದು ಕನಸಿನ ಮಾತು, ಊರ ಸಾವುಕಾರ ಶಿವಣ್ಣನ ಹತ್ತಿರ ಕಾಡಿಬೇಡಿ ಮತ್ತೊಂದು ಲಕ್ಷವನ್ನ ತಿಂಗಳಿಗೆ ಎರಡು ರೂ. ಬಡ್ಡಿಯಂತೆ ಸಾಲ ತಂದಾಯಿತು. ಅಷ್ಟಕ್ಕು ಹೊಸ ಬಸ್ಸು ಬರಲೊಲ್ಲದು, ನಲ್ಲಿಮನೆ ಸಿದ್ದಪ್ಪ ತನ್ನ ಅಳಿಯ ಸುರೇಶನ್ನ ಹಿಡಿದು ಸೆಕೆಂಡ್‌ಹ್ಯಾಂಡ್ ಬಸ್ಸನ್ನ ಕೊಡಿಸಿದ. ''ಹೊಸ ಬಸ್ಸು ಹನುಮಂತಣ್ಣ ಸರ್ವಿಸ್ ಆಗಿ ಎರಡು ವರ್ಷವಾಗಿದೆ ಅಷ್ಟೆ'' ಎಂದು ಸಮಾಧಾನ ಮಾಡಿದ.

ಗುಜರಿ ಸೇರಬೇಕಾದ ಬಸ್ಸು ನವೀಕರಣಗೊಂಡು ತನ್ನ ಮನೆ ಸೇರುತ್ತೆ ಎಂದು ಹನುಮಂತನಿಗೆ ಗೊತ್ತಾಗಲಿಲ್ಲ.

ಅಂತು ಇಂತು ಶುಕ್ರವಾರದ ಶುಭದಿನದಂದು ಹಳೆ ಮುದುಕಿಗೆ ಸಿಂಗರಿಸಿದಂತಿದ್ದ ಬಸ್ಸು ಹನುಮಂತನ ಮನೆ ಮುಂದೆ ನಿಂತಿತು. ನಿಂಗಿ ಹೊಸ ಸೀರೆಯುಟ್ಟು ಕನ್ನಡಿ ಮುಂದೆ ನಿಂತು ಬಸ್ ಓನರ್‌ನ ಹೆಂಡತಿಗಿರಬೇಕಾದ ಎಲ್ಲ ಲಕ್ಷಣಗಳು ತನ್ನಲ್ಲಿವೆಯೇ ಎಂದು ಎರಡು ಮೂರು ಸಾರಿ ನೋಡಿಕೊಂಡು, ತನ್ನ ಬಸುರಾದ ಹೊಟ್ಟೆಯನ್ನ ಹೊತ್ತುಕೊಂಡು, ಸುತ್ತಮುತ್ತಲಿನ ಮುತ್ತೈದೆಯರನ್ನ ಕರೆಸಿ ಬಸ್ಸಿಗೆ ಪೂಜೆ ಮಾಡಿ, ಖಾರಾ ಮಂಡಕ್ಕಿ ಹಂಚಿದಳು.

ನಿಂಗವ್ವನ ಮಗ ರೇವಣ್ಣ, ಡ್ರೈವರ್ ಕೆಲಸಕ್ಕೆ ನೇಮಕಗೊಂಡ. ನಂಬಿಕಸ್ಥ ತಿಮ್ಮ ಕಂಡಕ್ಟರ್ ಆದ. ಬಸ್ಸು 'ದಾವಣಗೆರೆ ಎಕ್ಸ್‌ಪ್ರೆಸ್' ಎಂಬ ಬೋರ್ಡನ್ನ ತನ್ನ ಹಣೆಗೆ ಅಂಟಿಸಿಕೊಂಡು ಸುಡು ಸುಡು ಬಿಸಿಲಿನಲ್ಲಿ ದುಬಾರಿಯಾದ ನಾಲ್ಕು ನಿಂಬೆಹಣ್ಣನ್ನ ಪಚಕ್ಕೆನ್ನಿಸಿ ಪ್ರಯಾಣ ಬೆಳಸಿತು. ಇತ್ತ ಹನುಮಂತ ಮನೆಯಲ್ಲಿ ಕೂತು ಆಕಾಶವಾಣಿಯ ಕನ್ನಡ ಚಿತ್ರಗೀತೆಗಳನ್ನ ಕೇಳುತ್ತಾ ನಿಂಗಿ ಜೊತೆ ಸರಸವಾಡತೊಡಗಿದ.

ದಾವಣಗೆರೆ ಎಕ್ಸ್‌ಪ್ರೆಸ್ ಆಗತಾನೆ ಕುಸ್ತಿಯಾಡಿದ ಪೈಲ್ವಾನ ನೀರನ್ನ ಗಟಗಟನೆ ಕುಡಿಯುವಂತೆ ಡೀಸೆಲ್ ಕುಡಿಯೋಕೆ ಶುರುಮಾಡಿತು. ಒಂದೆರಡು ದಿನಗಳು ಕಳೆದಮೇಲೆ ಹುಣಸೆಮನಿ ರಾಮಣ್ಣ ಬಂದು ಡ್ರೈವರ್ ರೇವಣಿ ಕುಡಿದು ಗಾಡಿ ಓಡಿಸುತ್ತಾನೆಂದು, ನಿನ್ನೆ ಬಸ್ಸು ಕಾಳಮ್ಮನ ಗುಡಿಯ ಪಕ್ಕದಲ್ಲಿದ್ದ ದೊಡ್ಡ ಚರಂಡಿಯಲ್ಲಿ ಬೀಳುವುದು ಸ್ವಲ್ಪದರಲ್ಲೇ ತಪ್ಪಿತೆಂದು, ಹೀಗೇ ಮುಂದುವರಿದರೆ ಜನ ಬಸ್ಸು ಹೆಂಗೆ ಅತ್ತುತ್ತಾರೇಳು, ಎಂದು ಬೈದು ಹೋದ. ರಾತ್ರಿ ರೇವಣಿ ಕೂಲಿ ಕೇಳಾಕೆ ಬಂದಾಗ, ರಾಮಣ್ಣ ಸಂಜೆ ಬಂದು ಬೈದದ್ದನ್ನ ಹೇಳಿ, ''ಕುಡಿಬೇಡಲೆ, ಕುಡ್ದರೂ ಕುಡ್ದು ಗಾಡಿ ಓಡಿಸಬೇಡಲೆ'' ಎಂದು ಬೈದು, ಇನ್ನೊಮ್ಮೆ ಕುಡ್ದು ಗಾಡಿ ಓಡಿಸಿದರೆ ಬೇರೆ ಡ್ರೈವರನ್ನ ಅಪಾಯಿಂಟ್ ಮಾಡುವುದಾಗಿ ಹೆದರಿಸಿದ. ''ಇಲ್ಲಣ್ಣ, ಇನ್ಮೇಲೆ ಮನೆ ದೇವರಾಣೆಗು ಕುಡಿಯೊಲ್ಲ'' ಎಂದದ್ದಕ್ಕೆ ''ಮನೆ ದೇವರಮೇಲೆ ಆಣೆ ಇಟ್ಟಿದ್ದಿಯಾ, ಇನ್ನೊಮ್ಮೆ ಕುಡ್ದರೆ ಕುಡ್ದ್ ಕುಡ್ದೆ ರಕ್ತಕಾರಿ ಸಾಯ್ತಿಯ ನೋಡು'' ಎಂದು ಹೇಳಿ ಕಳಿಸಿದ.

ಗುಡಿಮನಿ ಈರಪ್ಪನ ಮಗ ಮಾರುತಿ ಬಲು ತುಂಟ. ಎಷ್ಟು ತುಂಟನೆಂದರೆ ಸಣ್ಣವನಿದ್ದಾಗ ಅವನಜ್ಜಿ ಬಸಜ್ಜಿ ಪೆಪ್ಪರ್‌ಮೆಂಟ್ ತಗೊಳ್ಳೋಕೆ ಪೈಸೆ ಕೊಡದಿದ್ದಕ್ಕೆ ಆಕೆ ಬಾಯಿ ತೆರೆದು ಗೊರಕೆ ಹೊಡೆಯುತ್ತಿದ್ದಾಗ ಬಾಯಲ್ಲಿ ನೀರು ಸುರಿದಿದ್ದ. ಈಗವನು ದಾವಣಗೆರೆಯ ಸರ್ಕಾರಿ ಪ್ರಾಥಮಿಕ ಶಾಲೆಯಲ್ಲಿ ಏಳನೇ ತರಗತಿ ಕಲಿಯೋಕೆ ಬಸ್ಸು ಏರಿ ಹೋಗೋನು ಬಸ್ಸು ಏರಿ ಬರೋನು. ಅವನ ತುಂಟತನ ಶಾಲೆಯಲ್ಲಿ ಮುಂದುವರಿದಾಗ, ಶಾಲೆಯ ಎಲ್ಲ ಮೇಷ್ಟ್ರುಗಳು ಮೀಟಿಂಗ್ ಕುಳಿತಾಗ 'ಗಿಡವಾಗಿ ಬಗ್ಗದವನು ಮರವಾಗಿ ಬಗ್ಗಿಯಾನೇ' ಎಂದು ಹೇಳಿ ಮಾರುತಿಗೆ ಹೆಚ್ಚಿನ ಶಿಕ್ಷೆ ಕೊಡಲು ನಿರ್ಧರಿಸಿದರು. ಎಲ್ಲಾ ಹುಡುಗ ಹುಡುಗಿಯರಿಗೆ ಒಂದು ಏಟು ಕೊಟ್ಟರೆ ಇವನಿಗೆ ಎರಡು ಕೊಡುತ್ತಿದ್ದರು. ಅಂಥ ಮಾರುತಿ ಒಮ್ಮೆ ದಾವಣಗೆರೆ ಎಕ್ಸ್‌ಪ್ರೆಸ್‌ನ್ನ ಏರಿ ಶಾಲೆಗೆ ಹೋಗುತ್ತಿದ್ದಾಗ ತಿಮ್ಮನ ಕೈಲಿ ಐದು ರೂಪಾಯಿ ಕೊಟ್ಟು ಕೈ ಚಾಚಿ ನಿಂತ. ತಿಮ್ಮ ಜೇಬು ನೋಡಿ ಎಷ್ಟೇ ಹುಡುಕಿದರೂ ಎರಡು ರೂಪಾಯಿ ಚಿಲ್ಲರೆ ಸಿಗದಿದ್ದಾಗ ಚಿಲ್ರೆ ಇಲ್ಲ ನಾಳೆ ಇಸ್ಕೊ ಎಂದು ಹೇಳಿ ಮುಂದೆ ಹೋದ. ಆ ನಾಳೆ ಬಂದಾಗ ಮಾರುತಿ ಒಂದು ರೂಪಾಯಿ ಕೊಟ್ಟು ನಿನ್ನೆ ತನಗೆ ಕೊಡಬೇಕಾಗಿದ್ದ ಎರಡು ರೂಪಾಯಿಯ ಬಗ್ಗೆ ನೆನಪಿಸಿದ. ಎಷ್ಟೇ ನೆನಪು ಮಾಡಿಕೊಂಡರು ತಿಮ್ಮನಿಗೆ ನೆನಪು ಬಾರದದ್ದಕ್ಕೆ ''ಸುಳ್ಳು ಹೇಳುತ್ತಿಯಾ'' ಎಂದು ದಬಾಯಿಸಿ ಮತ್ತೆರಡು ರೂಪಾಯಿ ಕಿತ್ತುಕೊಂಡ. ಪಬ್ಲಿಕ್ಕಿನ ಮುಂದೆ ನಡೆದ ಅವಮಾನ ಮಾರುತಿಯ ಮರ್ಮಕ್ಕೆ ತಾಗಿ, ತಿಮ್ಮನಿಗೆ ಬುದ್ಧಿ ಕಲಿಸುವುದಾಗಿ ಮನಸ್ಸಿನಲ್ಲಿಯೇ ಪ್ರತಿಜ್ಞೆ ಮಾಡಿದ. ಒಂದು ದಿನ ರೇವಣಿ ಮತ್ತು ತಿಮ್ಮ ಬಸ್ಸನ್ನ ಹೊಂಡದ ಸರ್ಕಲ್ನಲ್ಲಿ ನಿಲ್ಲಿಸಿ, ಖಾಸಿಂ ಸಾಬನ ಹೊಟೆಲ್ನಲ್ಲಿ ತಿಂಡಿ ತಿನ್ನಲು ಹೋದಾಗ, ಬಸ್ ಹೊಕ್ಕ ಮಾರುತಿ ಸುತ್ತಲು ಯಾರೂ ಇಲ್ಲದ್ದನ್ನ ಗಮನಿಸಿ ಎಲ್ಲ

## ಮಿಂಚುಹುಳ

ಬಾನ ಬಯಲಿನ ನಕ್ಷತ್ರ
ಮಿಂಚು ಹುಳದ
ಬಯಕೆ.
ಹಿಡಿ ಬೆಳಕ ಹಿಡಿದು
ಊರೆಲ್ಲಾ ಅರಸುತ್ತಿದೆ
ದಾರಿ ಯಾವುದು ನಕ್ಷತ್ರಲೋಕಕ್ಕೆ?
ಕತ್ತಲ ಬಗೆಯುತ್ತಾ ಹಾರಿದಷ್ಟೂ
ಬಾಕಿ ಉಳಿದಿದೆ ಏರಲಾರದಷ್ಟು
ದೂರ ದಾರಿ
ಕನಸಿನೂರಿಗೆ ಕಡು
ಕಷ್ಟದ ಹಾದಿ
ಇರುಳ ಮುಸುಕ ತೊಳೆಯುವ
ಭರದಿ
ಬಾನ ನೀಲಿಮೆಯಲ್ಲಿ ಸ್ಪಷ್ಟಗೊಳ್ಳುತ್ತಿದೆ
ಕುರುಹು



ಹಾರುತ್ತಲೇ ಇದೆ ಮಿಣುಕು
ಗೊತ್ತಿಲ್ಲ ಅದಕೆ ಬಾನ ನಕ್ಷತ್ರ
ತನ್ನದೇ ಹೊಳಪು...!

**ಸ್ಮಿತಾ ಅಮೃತರಾಜ್ ಸಂಪಾಜೆ**
'ಹಸಿರು', ಜಾಲಂಬಿ ಅಂಚೆ, ಚೆಂಬು ಗ್ರಾಮ, ಮಡಿಕೇರಿ ತಾಲೂಕು
ಕೊಡಗು - ೫೭೪ ೨೩೪

ಸೀಟಿಗು ಬ್ಲೇಡ್ ಹಾಕಿ ಪರಾರಿಯಾದ. ಶಾಲೆ ಮಕ್ಕಳು ಸುಮ್ಮನೆ ಕೂತರೆ ಅವರ ವಯಸ್ಸಿಗೆ ಅವಮಾನ. ಆದ್ದರಿಂದ ಬ್ಲೇಡುಬಿದ್ದ ಸೀಟಿನ ಒಳಗೆ ಕೈಯಾಕಿದರು. ಹತ್ತಿ, ಸ್ಪಾಂಜ್ ಕಿತ್ತು ಗಾಳಿಗೆ ತೂರಾಡಿದವು.

ಮತ್ತೊಂದು ದಿನ ದಾವಣಗೆರೆಯಲ್ಲಿ ಹಿಂದೂ ಮುಸ್ಲಿಂ ಹೊಡೆದಾಟ ನಡೆದು ಬಸ್ಸಿಗೆ ಕಲ್ಲು ಬಿದ್ದು ಒಂದೆರಡು ಗಾಜುಗಳೆಲ್ಲ ಒಡೆದುಹೋದವು. ಇವು ಯಾವುದಕ್ಕೂ ಧೃತಿಗೆಡದ ಹನುಮಂತ ನಿಂಗಿಯನ್ನ ಕಾಡಿ ಬೇಡಿ, ಬೈದು, ಬೈಸಿಕೊಂಡು, ಶಪಿಸಿ, ಗೋಳಾಡಿಸಿ ಅವಳಿಗೆ ಮದುವೆಯಲ್ಲಿ ತೌರುಮನೆಯವರು ಮಾಡಿಸಿಕೊಟ್ಟ ಅವಲಕ್ಕಿ ಸರವನ್ನ ಪಡೆದು ಅಡವಿಟ್ಟು ಬಸ್ಸನ್ನ ನವೀಕರಿಸಿದ.

ಆದರೆ ಹನುಮಂತನ ಬುಡ ಅಲ್ಲಾಡುವಂತಹ ಘಟನೆ ನಡೆದದ್ದು ಅಂಗಡಿಮನಿ ನಾಗಪ್ಪನ ಅವ್ವ ತೊಂಬತ್ತು ವರ್ಷದ ಮುದುಕಿ ಹಾಸಿಗೆ ಹಿಡಿದಾಗ : ''ಇನ್ನೊಂದು ಇಪ್ಪತ್ತೈದು ವರ್ಷ ನಿಮ್ಮವ್ವ ಬದುಕಿಬಿಟ್ಟರೆ ಗಿನ್ನಿಸ್ ರೆಕಾರ್ಡ್ ಆಗುತ್ತೆ ನೋಡು ನಾಗಪ್ಪ'' ಎಂದು ಹಳ್ಳಿಯ ಕೆಲವರು ತಮಾಷೆ ಮಾಡುತ್ತಿದ್ದರು. ಅಂತಹ ಮುದುಕಿಗೆ ಒಂದು ದಿನ ಶುರುವಾದ ಭೇದಿ ನಿಲ್ಲಲೇ ಇಲ್ಲ, ಅಜ್ಜಿಯ ರಟ್ಟೆ ಹಿಡಿದು ನಾಲ್ಕು ಸಾರಿ ಕತ್ತಲಲ್ಲಿ ಬೇಲಿಯ ಕಡೆಗೆ ಕರೆದೊಯ್ದು ಬಂದ ಸೊಸೆ ಮಲ್ಲಕ್ಕ ಕೊನೆಗೆ ರೋಸಿ, ''ನಿಮ್ಮಮ್ಮ ಸಾಯಿದೆಲೆ ಬದುಕಿ ನಮ್ಮನ್ನ ದಿನಾ ಸಾಯಿಸ್ತಿದಾಳೆ'', ಎಂದು ಗಂಡನಿಗೆ ಬೈದು ಕೊನೆಗೆ ಮುದುಕಿಯನ್ನ ಹಾಸಿಗೆಯಲ್ಲೆ ಬಿಟ್ಟಳು. ಬೆಳಗ್ಗೆ ಎದ್ದು ನೋಡಿದರೆ ಹಾಸಿಗೆ ತುಂಬೆಲ್ಲ ಹೇಲು ಹರಡಿ, ಗಬ್ಬು ನಾತ ತುಂಬಿತ್ತು.

ನಾಗಪ್ಪ ದಾವಣಗೆರೆ ಎಕ್ಸ್‌ಪ್ರೆಸ್ ಹೊರಡುವುದನ್ನೇ ಕಾದು, ಮುದುಕಿಯ ರಟ್ಟೆ ಹಿಡಿದು ನಿಧಾನವಾಗಿ ಕರೆದೊಯ್ದು ರಶ್ಶಿನಲ್ಲಿ ನೂಕಲು ನುಗ್ಗಿ, ಹಿಂದಿನ ಬಾಗಿಲಿಂದ ಹತ್ತಿ, ಹತ್ತಿಸಿ, ಕೊನೆಯ ಸೀಟನ್ನು ಹಿಡಿದು ಕೂರಿಸಿ ಕೂತ. ಬಸ್ಸು ಹೊರಡಲು ಸುರುಮಾಡಿತು. ಮುದುಕಿ ಚಳಿ ತಾಳಲಾರದೆ ಎರಡು ಕಾಲೆತ್ತಿ ಚಕ್ಕಲಬಕ್ಕಲ ಹಾಕಿ ಕೈ ಕಟ್ಟಿ, ''ಶಿವನೆ ನನ್ನ ಯಾವಾಗ ನಿನ್ನ ಪಾದದಾಗ ಸೇರಿಸ್ಕೊಂತಿಯೊ ನಮ್ಮಪ್ಪ'' ಎಂದು ನಿಟ್ಟುಸಿರು ಬಿಟ್ಟಳು. ಬರುಬರುತ್ತಾ ಬಸ್ಸು ತನ್ನ ವೇಗವನ್ನ ಹೆಚ್ಚಿಸಿದ್ದನ್ನ ನೋಡಿ ನಾಗಪ್ಪ ''ಈ ಅಜ್ಜಿಗೆ ಹುಷಾರಿಲ್ಲಪ್ಪ ಸ್ವಲ್ಪ ನಿಧಾನಕ್ಕೆ ಗಾಡಿ ಓಡ್ಸು ತಂದೆ'' ಎಂದದ್ದು ಅಕ್ಕ ಪಕ್ಕದಲ್ಲಿ ಕುಂತಿದ್ದ ಒಂದಿಬ್ಬರಿಗೆ ಬಿಟ್ಟರೆ ಯಾರಿಗೂ ಕೇಳ್ಸಿದಂತೆ ಕಾಣಲಿಲ್ಲ, ಡ್ರೈವರ್ ರೇವಣಿ ಅದ್ಯಾವ ಹುಮ್ಮಸ್ಸಿನಲ್ಲಿದ್ದನೊ, ಕನ್ನಡ ಗೀತೆಯೊಂದನ್ನ ಬಾಯಲ್ಲಿ ಗುನುಗುತ್ತ ಮುಂದೆ ಬಂದ ಹಂಪನ್ನ ಗಮನಿಸದೆ ಜೋರಾಗಿ ನುಗ್ಗಿಸಿದ. ಬಸ್‌ನ ಹಿಂದಿನ ಎರಡು ಗಾಲಿಗಳು ಮೇಲೆ ಹಾರಿ, ಹಿಂದೆ ಕುಂತವರನ್ನು ನಿಂತವರನ್ನು ಗಾಳಿಗೆ ತೂರಿ ಬಲವಾಗಿ ಕುಕ್ಕರಿಸಿತು. ಮುದುಕಿ ಕಪ್ಪೆ ಟಂಗನೆ ಹಾರುವಂತೆ ಹಾರಿ, ಒಂದೆರಡು ಹೆಜ್ಜೆ ಮುಂದೆ ಬಿದ್ದು ಶಿವನ ಪಾದ ಸೇರಿದಳು.

ಮುದುಕಿಯ ವಯಸ್ಸೆಷ್ಟು, ಅವಳ ಆಯಸ್ಸೆಷ್ಟು, ಯಾವಾಗ ಸಾಯುತ್ತಿದ್ದಳು, ಎಂಬುದು ಇಲ್ಲಿ ಪ್ರಶ್ನೆಯಲ್ಲ, ಹೇಗೆ ಸತ್ತಳೆಂಬುದು ಇಲ್ಲಿ ಪ್ರಶ್ನೆ. ಅವಳ ಪಯಣವು ಸರಾಗವಾಗಿ ಆಗಿ, ಅಂದೆ ಆಸ್ಪತ್ರೆಯ ಹಾಸಿಗೆಯ ಮೇಲೆ ಸತ್ತಿದ್ದರೆ, ಅದು ನ್ಯಾಚುರಲ್ ಡೆತ್ತು, ಈಗ ನಡೆದಿರುವುದು ಕೊಲೆ. ನಾಗಪ್ಪ ಮತ್ತು ಕೆಲವು ಗ್ರಾಮಸ್ಥರು ರೇವಣಿಯ ಕೊರಳಪಟ್ಟಿ ಹಿಡಿದು ನಾಲ್ಕೇಟು ಹಾಕಿ ''ಸೂಳೆಮಗನೆ, ಕಂಠಪೂರ್ತಿ ಕುಡಿದು ಅರಿವಿಲ್ಲದಂಗೆ ಗಾಡಿ ಓಡಿಸ್ತಿಯಾ'' ಎಂದು ದರದರನೆ ಎಳೆದುಕೊಂಡು ಹೋಗಿ ಪೊಲೀಸ್ ಸ್ಟೇಷನ್ನಿಗೆ ದೂರುಕೊಟ್ಟು ಎಫ್.ಐ.ಆರ್ ಬರೆಸಿ ಅವನನ್ನ ಕಸ್ಟಡಿಗೆ ಒಪ್ಪಿಸಿ, ಮುದುಕಿಯ ಹೆಣವನ್ನ ಸ್ವಗ್ರಾಮಕ್ಕೆ ಸಾಗಿಸಿ ಮಣ್ಣುಮಾಡಿದರು.

ಈ ಘಟನೆಯಿಂದ ಹನುಮಂತನಿಗೆ ರೋಸಿಹೋಯಿತು. ಗಿರಣಿ ಮಾರಿಸಿ ಬಸ್ಸನ್ನು ಮತ್ತು ಕುಡುಕ ರೇವಣಿಯನ್ನು ತನ್ನ ತಲೆಗೆ ಕಟ್ಟಿದ ನಲ್ಲಿಮನೆ ಸಿದ್ದಪ್ಪನಿಗೆ ಮನಃಪೂರ್ತಿ ಬೈದ.

ದಾವಣಗೆರೆಯ ಜಿಲ್ಲಾ ನ್ಯಾಯಾಲಯವು, ರೇವಣಿ ಕುಡಿದು ಗಾಡಿ ಓಡಿಸಿರುವುದೇ ಈ ಘಟನೆಗೆ ಮುಖ್ಯ ಕಾರಣವೆಂದು ದೃಢಪಡಿಸಿ, ಮುದುಕಿಯ ವಯಸ್ಸು, ಮತ್ತು ಅವಳ ಖಾಯಿಲೆಯನ್ನ ಮನಸ್ಸಿನಲ್ಲಿಟ್ಟುಕೊಂಡು, ರೇವಣಿಗೆ ಎರಡು ವರ್ಷ ಜೈಲುವಾಸ ಮತ್ತು ಬಸ್ ಮಾಲಿಕ ಹನುಮಂತನಿಗೆ ಇಪ್ಪತ್ತು ಸಾವಿರ ದಂಡವನ್ನ ವಿಧಿಸಿತು. ಮತ್ತು ದಂಡ ಪಾವತಿಸುವವರೆಗೂ ಬಸ್ಸನ್ನ ಪೊಲೀಸ್ ಕಸ್ಟಡಿಯಲ್ಲಿ ಇರಿಸಿತು.

ಈ ವ್ಯವಹಾರವನ್ನೆಲ್ಲ ಮುಗಿಸಿ ಹನುಮಂತ ಮನೆಗೆ ಬರುವಾಗ ರಾತ್ರಿ ಹತ್ತು



ಗಂಟೆಯಾಗಿತ್ತು. ಬಸ್ ಇಳಿದು ರಾತ್ರಿಯ ನಿರಾವತ ಕತ್ತಲನ್ನ ಸೀಳಿ ಮನೆಗೆ ನಡೆದು ಬರುವಾಗ ಎದುರಿಗೆ ಸಿಕ್ಕ ಮತ್ತು ಎಂದೋ ಮಾರಿದ ಗಿರಣಿ ಅವನನ್ನೆ ನೋಡಿ ನಕ್ಕ ಹಾಗೆ ಭಾಸವಾಯಿತು. ಒಂದು ಕಿವಿಗೆ ಗಿರಣಿ ಶಬ್ದ ಮತ್ತೊಂದು ಕಿವಿಗೆ ಬಸ್ಸಿನ ಶಬ್ದಗಳೆರಡೂ ಅಪ್ಪಳಿಸತೊಡಗಿದವು. ಮೈಯಲ್ಲಿದ್ದ ಶಕ್ತಿಯೆಲ್ಲ ಕರಗಿಹೋಗಿ ಅಲ್ಲೇ ಕುಸಿದುಬೀಳುವಂತಾಯಿತು.

ನಿಂಗಿ ಅಷ್ಟೊತ್ತಿಗಾಗಲೆ ಒಂದು ಹೆಣ್ಣುಮಗುವನ್ನ ಹಡೆದಿದ್ದಳು. ಕೂಸು ತೊಲೆಗೆ ಕಟ್ಟಿದ ಸೀರೆಯ ತೊಟ್ಟಿಲಲ್ಲಿ ಪ್ರಪಂಚದ ಅರಿವಿಲ್ಲದೆ ಮಲಗಿತ್ತು. ನಿಂಗಿ ನ್ಯಾಯಾಲಯ ಕೊಟ್ಟ ತೀರ್ಪಿನ ವಿಷಯ ತಿಳಿದು ಕೆಂಡಾಮಂಡಲವಾದಳು. ತಾನು ಮನಸ್ಸಿಲ್ಲದ ಮನಸ್ಸಿನಿಂದ ಕೊಟ್ಟ ಅವಲಕ್ಕಿ ಸರ ವಾಪಸಾಗುವುದು ಕನಸಿನಂತೆ ಕಂಡಿತು. ಹನುಮಂತ ಮನೆಯ ಒಳಗೆ ಕಾಲಿಡುತ್ತಲೇ ಗೋಳೊ ಎಂದು ಅಳೋಕೆ ಸುರುವಿಟ್ಟಳು. ತನ್ನ ತವರುಮನೆಯವರು ಕೊಟ್ಟ ಅವಲಕ್ಕಿ ಸರವನ್ನ ಅಡವಿಟ್ಟ ಗಂಡನಿಗೆ ತಂದುಕೊಡುವಂತೆ ಬೈದು, ತರದಿದ್ದರೆ ತಾನು ಮಗುವನ್ನ ಎತ್ತಿಕೊಂಡು ತವರುಮನೆಗೆ ಹೋಗುವುದಾಗಿ ಘೋಷಿಸಿದಳು. ''ಮನೇಲಿ ತಿನ್ನೋಕೆ ಅವಲಕ್ಕಿಗೆ ಗತಿಯಿಲ್ಲ ಇವಳಿಗೆ ಅವಲಕ್ಕಿ ಸರ ಬೇಕಂತೆ, ಅವಲಕ್ಕಿ ಸರ'' ಎಂದು ಹನುಮಂತ ಮಂಚದ ಮೇಲೆ ಕುಕ್ಕರು ಬಡಿದ. ನಿಂಗಿ ತೊಟ್ಟಿಲಲ್ಲಿ ಮಲಗಿದ್ದ ಕೂಸನ್ನ ಎತ್ತಿಕೊಂಡು, ಗಂಡ ಎಷ್ಟು ಬೇಡ ವೆಂದರೂ ಕೇಳದೆ, ನಡೆದು ಉತ್ತರ ದಿಕ್ಕಿನಲ್ಲಿ ಕರಗಿಹೋದಳು. ಹೆಂಡತಿ ಕತ್ತಲಲ್ಲಿ ಕರಗಿಹೋಗುವುದನ್ನ ನೋಡುತ್ತಾ ನಿಂತ ಹನುಮಂತನಿಗೆ ಅದೇ ದಿಕ್ಕಿನಿಂದ ಸಾವುಕಾರ ಶಿವಣ್ಣ ಪ್ರತ್ಯಕ್ಷನಾಗಿ, ''ನಿನಗೆ ಸಾಲ ಕೊಟ್ಟು ದೊಡ್ಡ ತಪ್ಪು ಮಾಡಿದೆ, ಇನ್ನು ಬಸ್ಸೂ ಇಲ್ಲ ಗಿರಣಿಯೂ ಇಲ್ಲ ಸಾಲ ಹೆಂಗೆ ತೀರಿಸ್ತಿಯಾ ? ಎರಡು ದಿನ ಟೈಂ ಕೊಡುತ್ತೇನೆ, ಅಷ್ಟರೊಳಗೆ ಸಾಲ ಹಿಂತಿರುಗಿಸದೆ ಇದ್ದರೆ ಕೋರ್ಟಿಗೆ ಹೋಗುತ್ತೇನೆ'' ಎಂದು ಬೆದರಿಕೆ ಹಾಕಿದ. ಹನುಮಂತನಿಗೆ ತನ್ನ ಸುತ್ತಮುತ್ತಲಿನವರೆಲ್ಲ ರಾಕ್ಷಸರಂತೆ ಗೋಚರಿಸಿ ಪಿತ್ತ ನೆತ್ತಿಗೇರಿತು. ಬಡಬಡನೆ ಮನೆಯ ಒಳಹೋಗಿ, ಹೊರಗೆ ಬಂದು, ಮನೆಗೆ ಬೀಗಹಾಕಿ, ಜೇಬಿಗೆ ಕೈ ಹಾಕಿ ಬಸ್ಸಿನ ಕೀ ತೆಗೆದು, ಎರಡನ್ನೂ ಶಿವಣ್ಣನ ಕಾಲು ಕೆಳಗೆ ಬಿಸಾಕಿ, ''ಮನೆಯನ್ನು, ಬಸ್ಸನ್ನು ನೀನೇ ಇಟ್ಟುಕೊಂಡು ಸಾಯಿ, ನಾನು ದೇಶಾಂತರ ಹೋಗುತ್ತೇನೆ'' ಎಂದು ಹೇಳಿ ಚಪ್ಪಲಿ ಮೆಟ್ಟಿ ದಕ್ಷಿಣದ ಕತ್ತಲಲ್ಲಿ ಕರಗಿಹೋದ.

**ಮಂಜುನಾಥ್ ಎಚ್. ಸಿ.**

ಎಕ್ಸ್‌ಚೇಂಜಿಂಗ್ ಲಿಮಿಟೆಡ್, ಸಿ. ಟಿ. ಕ್ಲಬ್ ಹಿಂಭಾಗ, ಶಿವಮೊಗ್ಗ

**ಡಾ|| ಎಚ್. ಚಂದ್ರಶೇಖರ**

# ಹಾಲಿ ಮತ್ತು ಮಾಜಿ ಮುಖ್ಯಮಂತ್ರಿಗಳ ಮೂಢನಂಬಿಕೆಗಳು

ಮನುವಿನ ವರ್ಣಾಶ್ರಮದಲ್ಲಿ ಹಿಂದು ಸಮಾಜವನ್ನು ನಾಲ್ಕು ವಿಭಾಗಗಳಲ್ಲಿ ವರ್ಗೀಕರಿಸಿ, ಮೇಲ್ವರ್ಗದ ಜನರು, ಕೆಳವರ್ಗದ ಅದರಲ್ಲಿಯೂ ಶೂದ್ರ ಮತ್ತು ಅತಿ ಶೂದ್ರರನ್ನು ಅಕ್ಷರ ವಂಚಿತರನ್ನಾಗಿ ಮಾಡಿ, ಶೋಷಣೆಗೊಳಿಸಿದ್ದು, ಈಗ ಎಲ್ಲರೂ ಒಪ್ಪುವ ಐತಿಹಾಸಿಕ ಸತ್ಯ. ವೇದಗಳ ಕಾಲದಿಂದಲೂ ದ್ವಿಜರು ಮಾತ್ರ ಸಂಸ್ಕೃತ ಅಧ್ಯಯನ ಮಾಡುತ್ತಾ ಬಂದು ಬಹುಶಃ ಕೆಲ ಶತಮಾನಗಳ ಕಾಲ ಸಮಾಜಕ್ಕೆ ಒಳಿತಾಗಬಹುದಾದ ಮಾರ್ಗದರ್ಶನ ನೀಡಿರಬಹುದು. ನಂತರ ಅನಕ್ಷರಸ್ಥರ ಸಂಖ್ಯೆ ಬೆಳೆದಂತೆಲ್ಲಾ ಅಕ್ಷರಸ್ಥರು ಶೋಷಕರಾಗಿ ಬೆಳೆದರು. ತೀರ ಅಲ್ಪಸಂಖ್ಯಾತರಾಗಿದ್ದ (ಇಂದಿಗೂ ಅವರು ಅಲ್ಪಸಂಖ್ಯಾತರೇ) ಬ್ರಾಹ್ಮಣರು ಕ್ಷತ್ರಿಯರ ಭುಜಬಲದಿಂದ ಇಡೀ ದೇಶವನ್ನು ಆಳಿದರು. ಬರುಬರುತ್ತಾ ಮೂಢನಂಬಿಕೆಗಳನ್ನು ದೇವರ ಹೆಸರಿನಲ್ಲಿ, ಭೂತಗಳ ಹೆಸರಿನಲ್ಲಿ ಇಡೀ ಸಮಾಜದಲ್ಲಿ ಬಿತ್ತಿ ಬೆಳೆಸಿದರು. ಇಲ್ಲದ ಪಾಪಪ್ರಜ್ಞೆಯನ್ನು ಸಾಮಾನ್ಯರ ಮನಸ್ಸುಗಳಲ್ಲಿ ಬಿತ್ತಿ ಬೆಳೆಸಿದರು. ಇಂಥ ಶೋಷಣಾ ತಂತ್ರದ ಎರಡು ಪ್ರಮುಖ ಸುಳಿಗಳೆಂದರೆ ಯಜ್ಞ-ಯಾಗ (ಹೋಮ, ಹವನ) ಮತ್ತು ಭೂತಾರಾಧನೆ. ಅತ್ಯಂತ ದುರ್ದೈವದ ಸಂಗತಿ ಎಂದರೆ ಬಸವಣ್ಣ ಮತ್ತು ಕುವೆಂಪು ಅವರಂಥ ವೈಚಾರಿಕ ಕ್ರಾಂತಿ ಪುರುಷರು ಬದುಕಿ ಬೆಳಗಿದ ಕರ್ನಾಟಕದಲ್ಲಿ ಹೋಮ ಹವನಗಳ ಜ್ವಾಲೆಯ ಹೊಗೆ ಮತ್ತು ಭೂತಾರಾಧನೆಯಲ್ಲಿ ಪ್ರಾಣಿಗಳ ಬಲಿ ಯಾವ ಎಗ್ಗಿಲ್ಲದೆ ರಾರಾಜಿಸುತ್ತಲಿವೆ. ಟಿ.ವಿ. ಮಾಧ್ಯಮಗಳು, ಚೆಲುವೆ ನಿರೂಪಕಿಯರ ಮುಖಾಂತರ ವೈಭವೀಕರಿಸುತ್ತಲಿವೆ. ಬೆಳಕನ್ನು ಬೀರಬೇಕಾದ ಎಲೆಕ್ಟ್ರಾನಿಕ್ ಮಾಧ್ಯಮಗಳು, ವಿಜ್ಞಾನದ ಆವಿಷ್ಕಾರಗಳನ್ನು ಬಳಸಿಕೊಂಡು ಅವೈಜ್ಞಾನಿಕ ಆಚರಣೆಗಳನ್ನು ವರ್ಣಮಯವಾಗಿ ವೈಭವೀಕರಿಸುತ್ತಲಿವೆ.

**ನೈಸರ್ಗಿಕ ಸಂಪತ್ತನ್ನು ನಾಶಗೊಳಿಸುವ ಹೋಮಗಳು**

ವೇದಗಳ ಕಾಲದಿಂದಲೂ ಯಜ್ಞಗಳನ್ನು ಯಾವುದೋ ಇಷ್ಟಾರ್ಥಗಳ ಸಿದ್ಧಿಗಾಗಿ ಮೇಲ್ವರ್ಗದ ಜನರು (ಮುಖ್ಯವಾಗಿ ಕ್ಷತ್ರಿಯರು) ಬ್ರಾಹ್ಮಣರ ನೇತೃತ್ವದಲ್ಲಿ ಆಚರಿಸುತ್ತ ಬಂದಿದ್ದಾರೆ. ಇಂದು ಆ ಕ್ಷತ್ರಿಯರ ಅಥವಾ ರಾಜರುಗಳ ಸ್ಥಾನವನ್ನು ರಾಜಕಾರಣಿಗಳು ಆಕ್ರಮಿಸಿಕೊಂಡಿದ್ದಾರೆ. ಚುನಾವಣೆಯಲ್ಲಿ ಜನಪ್ರತಿನಿಧಿಗಳಾಗಿ ಆಯ್ಕೆಗೊಂಡು ಸಂವಿಧಾನಬದ್ಧ ಅಧಿಕಾರವನ್ನು ಸ್ವೀಕರಿಸಿದ ಈ ಆಧುನಿಕ ಕ್ಷತ್ರಿಯರು, ಅದೇ ಬ್ರಾಹ್ಮಣರ ನೇತೃತ್ವದಲ್ಲಿ ಹೋಮ ಹವನಗಳನ್ನು ಮಾಡಿದ್ದಾರೆ, ಇಂದಿಗೂ ಮಾಡುತ್ತಲಿದ್ದಾರೆ. ಇದಕ್ಕೆ ಕೆಲ ಉದಾಹರಣೆಗಳನ್ನು ನೀಡಿ ಚರ್ಚಿಸುತ್ತೇನೆ.



ಶ್ರೀ. ಎಸ್. ಎಂ. ಕೃಷ್ಣ ಮುಖ್ಯಮಂತ್ರಿಗಳಾಗಿದ್ದಾಗ ವೀರಪ್ಪನ್ ಡಾ|| ರಾಜ್‌ಕುಮಾರರನ್ನು ಅಪಹರಿಸಿದ. ಅದೇ ಸಮಯದಲ್ಲಿ ಕಾವೇರಿ ಜಲ ವಿವಾದ ಹದಗೆಟ್ಟಿತು. ತರ್ಕಬದ್ಧವಾಗಿ ಸಮಸ್ಯೆಗಳನ್ನು ನಿರ್ವಹಿಸದ ಮಾನ್ಯ ಮುಖ್ಯಮಂತ್ರಿಗಳು ಕೊಲ್ಲೂರು ಮೂಕಾಂಬಿಕೆ ದೇವಸ್ಥಾನದಲ್ಲಿ ಚಂಡಿಕಾ ಹೋಮ ಮಾಡಿದರು. ವೀರಪ್ಪನ್ ಸಿಗಲಿಲ್ಲ, ಕಾವೇರಿ ನೀರು ತಮಿಳುನಾಡಿಗೆ ಹರಿದುಹೋಯಿತು! ಈ ಹೋಮಕ್ಕಾಗಿ ಹಲವು ನೈಸರ್ಗಿಕ ಸಂಪನ್ಮೂಲಗಳು ಸುಟ್ಟು ಬೂದಿಯಾದವು. ನಮ್ಮ ರಾಜ್ಯದ ರಾಜಕಾರಣಿಗಳಲ್ಲಿ ಅತಿ ಹೆಚ್ಚು ಯಜ್ಞಗಳನ್ನು ಮಾಡಿದವರೆಂದರೆ ಮಾನ್ಯ ಮಾಜಿ ಪ್ರಧಾನಿ ದೇವೇಗೌಡರು. ಅವರು ಹಮ್ಮಿಕೊಳ್ಳದ ಯಾವುದೇ ಹೋಮವೇ ಇಲ್ಲವೆಂದು ಹೇಳಬಹುದು. ಇತ್ತೀಚೆಗೆ ಅವರ ಮಗ ಮಾನ್ಯ ಮಾಜಿ ಮುಖ್ಯಮಂತ್ರಿ ಕುಮಾರಸ್ವಾಮಿಯವರ ಮನೆಯಲ್ಲಿ ಯಾವುದೋ ಸಾಮಾನ್ಯ ಹಾವು ಕಂಡುಬಂತು. ಅದರ ದೋಷ ಪರಿಹಾರಕ್ಕಾಗಿ ಸರ್ಪಯಜ್ಞ ಮಾಡಿದರು. ಮಾನ್ಯ ದೇವೇಗೌಡರು ಪ್ರಧಾನಿ ಪಟ್ಟ ಉಳಿಸಿಕೊಳ್ಳುವುದಕ್ಕಾಗಿ ಮಂಗಳೂರಿನಲ್ಲಿ ಚಂಡಿಕಾ ಹೋಮ ಮಾಡಿಸಿದರು. ಕೆಲ ದಿನಗಳಲ್ಲಿಯೇ ದಿಲ್ಲಿಯಿಂದ ಬೆಂಗಳೂರಿಗೆ ಹಿಂತಿರುಗಿದರು!! ಮಾನ್ಯ ಯಡಿಯೂರಪ್ಪನವರು ತಮ್ಮ ಸುಮಾರು ೪೦ ತಿಂಗಳ ಮುಖ್ಯಮಂತ್ರಿಗಳ ಸ್ಥಾನದ ಭದ್ರತೆಗಾಗಿ, ಮಾಡದ ಹೋಮಗಳಿಲ್ಲ, ಶರಣಾಗದ ಗುಡಿಗಳಿಲ್ಲ, ದೈವಗಳಿಲ್ಲ, ಕೊನೆಗೆ ಪರಪ್ಪನ ಅಗ್ರಹಾರದಲ್ಲಿ ೨-೩ ವಾರಗಳ ಕಾಲ ವಾಸಿಸಿದರು!!

**ರಾಜಸೂಯ ಯಾಗ**

ದಿನಾಂಕ ೨೮.೧.೨೦೧೨ರಿಂದ ರಾಜಸೂಯ ಯಾಗವನ್ನು ರೋಣ ತಾಲ್ಲೂಕಿನ ಗಜೇಂದ್ರಗಡದ ದುರ್ಗಾದೇವಿ ದೇವಸ್ಥಾನದಲ್ಲಿ, ಉಡುಪಿಯ ಪೇಜಾವರ ಶ್ರೀಗಳ ನೇತೃತ್ವದಲ್ಲಿ ಹಮ್ಮಿಕೊಳ್ಳಲಾಗಿತ್ತು. ಹೆಸರಿಗೆ ಮಾತ್ರ ಲೋಕಕಲ್ಯಾಣಕ್ಕಾಗಿ ಈ ಯಾಗ; ಆದರೆ ವಾಸ್ತವವಾಗಿ ಅಧಿಕಾರ ಕಳೆದುಕೊಂಡ ರಾಜಕಾರಣಿಗಳು ಮತ್ತು ಅಧಿಕಾರ ಉಳಿಸಿಕೊಳ್ಳಬೇಕೆನ್ನುವ ರಾಜಕಾರಣಿಗಳು ಈ ಯಾಗಕ್ಕಾಗಿ ಹಣವನ್ನು ಸುರಿದರು. ಅಲ್ಲ, ಸುಟ್ಟರು.

ಇಲ್ಲಿ ಪ್ರತಿದಿನ ಪ್ರತಿಯೊಂದು ಅಗ್ನಿಕುಂಡಕ್ಕೆ ೫೦ ಕೆ.ಜಿ. ತುಪ್ಪ, ೫ ಟ್ರ್ಯಾಕ್ಟರ್ ಕಟ್ಟಿಗೆ, ನೂರಾರು ಕೆ.ಜಿ. ಎಳ್ಳನ್ನು ಅರ್ಪಿಸಿ ಹೊಗೆಯನ್ನೇಳಿಸಲಾಗುತ್ತಲಿತ್ತು. ಇಲ್ಲಿ ಒಟ್ಟು ೧೯ ಕುಂಡಗಳಿದ್ದವು. ನನ್ನ ಲೆಕ್ಕದ ಪ್ರಕಾರ ೫೦ ಕೆ.ಜಿ. ತುಪ್ಪ ಸುಮಾರು ೯೦೦-೧೦೦೦ ಲೀಟರ್ ಹಾಲಿಗೆ ಸಮ. ಅಂದರೆ ಪ್ರತಿದಿನ ಸುಮಾರು ೩೦೦೦ ಮಕ್ಕಳಿಗೆ ಹಾಲುಣ್ಣಿಸಬಹುದಾದಂಥ ಅಮೃತ ಸಮಾನ ಹಾಲನ್ನು ಹೊಗೆ ಮಾಡಿದರು!! ಪ್ರತಿದಿನ ಹಲವಾರು ಲಕ್ಷಗಳ ಹಣ ಖರ್ಚಾಯಿತು!! ಈ ಅಪವ್ಯಯ ಐದು ದಿನಗಳ ಕಾಲ ನಡೆಯಿತು. ಇದರಿಂದ ಲಾಭ ರಾಜಕಾರಣಿಗಳಿಗೆ ಖಂಡಿತವಾಗಿಯೂ ಶೂನ್ಯ. ಆದರೆ ಭೂರಿಭೋಜನ, ಬಂದ ದಕ್ಷಿಣೆಯಿಂದ (ಕವಿ ಕುಮಾರವ್ಯಾಸನ ಕ್ಷಮೆ ಕೇಳಿ) ಬ್ರಾಹ್ಮಣರು ಮಾತ್ರ ಸಂತೃಪ್ತರು!! ಕೊನೆಗೆ ನಿಜವಾದ ಲಾಭ ಪುರೋಹಿತರಿಗೆ.

**ಮಳೆ ಬರಿಸುತ್ತದೆ ಯಾಗ!**

ಸದರಿ ಯಾಗದ ಸಂದರ್ಭದಲ್ಲಿ ಪುರೋಹಿತರೊಬ್ಬರು ಅಚ್ಚರಿಯನ್ನುಂಟುಮಾಡುವ ಹೇಳಿಕೆ ನೀಡಿದರು. ಈ ಯಾಗದಿಂದ ಏಳುವ ಹೊಗೆ ಮೋಡವಾಗಿ ಮಳೆಯನ್ನು ಸುರಿಸುತ್ತದೆ ಎಂದು ಟಿ.ವಿ. ಮಾಧ್ಯಮಕ್ಕೆ ನೀಡಿದ ಸಂದರ್ಶನದಲ್ಲಿ ಹೇಳಿದರು. ಈ ಸಮಜಾಯಿಷಿಗೆ ಕಾರಣವೆಂದರೆ, ನಮ್ಮ ರಾಜ್ಯದ ಬಹುಭಾಗ ಈಗ ಬರಪೀಡಿತ. ಮಳೆ ಬರಲಿಲ್ಲ, ಹೋಮದ ಹೊಗೆಯಿಂದ ಕಣ್ಣೀರು ಸುರಿಯಿತು! ಸಮುದ್ರದ ನೀರು ಸೂರ್ಯನ ಶಾಖವನ್ನುಂಡು ಹಬೆಯಾಗಿ ಆಕಾಶ ಸೇರುತ್ತದೆ. ಅಲ್ಲಿ ಮೋಡವಾಗಿ ತಂಪನ್ನುಂಡು ಮಳೆ ಅಥವಾ ಹಿಮವಾಗಿ ಇಳೆಗೆ ಸುರಿಯುತ್ತದೆ. ಇದು ಸಂಕ್ಷಿಪ್ತದಲ್ಲಿ ಹೇಳಬಹುದಾದ ಹವಾಮಾನ ಪ್ರಕ್ರಿಯೆ. ಈ ಪುರೋಹಿತರ ಮಾತು ನಿಜವೇ ಇದ್ದರೆ ಇವರನ್ನು ರಾಜಸ್ಥಾನದ ಥಾರ್ ಮರುಭೂಮಿಗೆ ರವಾನಿಸಿದರೆ ಇಡೀ ದೇಶಕ್ಕೆ ಸುಭಿಕ್ಷ. ಇವರಿಗೆ ನೋಬೆಲ್ ಪಾರಿತೋಷಕ ನೀಡಬಹುದು.

ಒಂದು ಅಚ್ಚರಿ ಹಾಗೂ ಸಮಾಧಾನದ ಸಂಗತಿಯೆಂದರೆ ಇದುವರೆಗೆ ಯಾವ ಪುರೋಹಿತರೂ ನಮ್ಮ ಹಾಲಿ ಹಾಗೂ ಮಾಜಿ ಮುಖ್ಯಮಂತ್ರಿಗಳಿಗೆ ಅಶ್ವಮೇಧ ಯಾಗವನ್ನು ಹಮ್ಮಿಕೊಳ್ಳಲು ಸಲಹೆ ನೀಡಿಲ್ಲ! ಅಂಥ ಸಲಹೆ ನೀಡಿ ಕುದುರೆಯನ್ನು ಇಡೀ ರಾಜ್ಯ ಅಥವಾ ದೇಶದ ತುಂಬಾ ಪರೇಡ್ ಮಾಡಿಸಿ ಕೊನೆಗೆ ಅದನ್ನು ಕೊಂದು ಅದರ ಮಾಂಸ ಭಕ್ಷಣೆ ಮಾಡುವುದೊಂದು ಈಗ ಬಾಕಿ ಉಳಿದಿದೆ!! (ಹಾಸನದ ಬಳಿ ಅದೂ ನಡೆದಿದೆಯಂತೆ!)



**ಭೂತಾರಾಧನೆ**

ನಮ್ಮ ಹಾಲಿ ಮುಖ್ಯಮಂತ್ರಿ ಶ್ರೀ. ಡಿ. ವಿ. ಸದಾನಂದಗೌಡರು ತಮ್ಮ ಸ್ಥಾನ ಭದ್ರತೆಗಾಗಿ ಕೋಲ ಭೂತದ ಸಂತೃಪ್ತಿಗಾಗಿ ೨೪ ಕೋಳಿಗಳನ್ನು ಬಲಿಯಾಗಿ ಅರ್ಪಿಸಿ ಕಾನೂನನ್ನು ಉಲ್ಲಂಘಿಸಿದ್ದಾರೆ. ಕರ್ನಾಟಕ ಪ್ರಿವೆನ್‌ಶನ್ ಆಫ್ ರಿಚುಯಲ್ ಸ್ಯಾಕ್ರಿಫೈಸಸ್ ಕಾಯಿದೆ ಪ್ರಕಾರ ಪ್ರಾಣಿಬಲಿ ನಿಷೇಧ. ಕೋಳಿ ಮಾಂಸ ಆಹಾರವೆಂದು ಪರಿಗಣಿಸಿದರೂ ಇಲ್ಲಿ ಸಾಮೂಹಿಕ ಕೋಳಿ ಬಲಿ ನಡೆದಿದೆ. ಕೆಲವು ಕಡೆ ಕುರಿ ಬಲಿಯೂ ನಡೆದಿದೆ. ಆದರೆ ವರದಿಯಾಗಿಲ್ಲವೆಂದು ಹೇಳಿದರು.

ಇಷ್ಟಕ್ಕೆ ಸಾಲದೆಂಬಂತೆ ದಿಲ್ಲಿಯಲ್ಲಿ ನಡೆದ ಈ ಸಲದ ಗಣರಾಜ್ಯೋತ್ಸವದ ಸಮಾರಂಭದಲ್ಲಿ ಭೂತಾರಾಧನೆಯ ಸ್ತಬ್ದ ಚಿತ್ರ ಮತ್ತು ಕುಣಿತವನ್ನು ಪ್ರದರ್ಶಿಸಿ ಕನ್ನಡಿಗರು ಮೂಢನಂಬಿಕೆಗಳಲ್ಲಿ ನಿಷ್ಠೆಯುಳ್ಳವರೆಂದು ಇಡೀ ಜಗತ್ತಿಗೆ ಸಾರಿದ್ದಾರೆ, ನಮ್ಮ ಸದಾ ಹಸನ್ಮುಖಿ ಸದಾನಂದಗೌಡರು!! ಇದು ಖಂಡನೀಯ ಕ್ರಮ.

**ಬಸವಣ್ಣ ಮತ್ತು ದೇಶದ ಸಂವಿಧಾನ**

ಬಸವಣ್ಣನವರು ನೇರವಾಗಿ ತಮ್ಮ ವಚನಗಳಲ್ಲಿ ಹೋಮ ಹವನ, ಮಾರಿ ಮಸಣಿ ಇತ್ಯಾದಿ ಕ್ಷುದ್ರ ದೈವಗಳ ಆರಾಧನೆಯನ್ನು ಖಂಡಿಸಿದ್ದಾರೆ :-

ಕಿಚ್ಚು ದೈವವೆಂದು ಹವಿಯನಿಕ್ಕುವ ಹಾರವರ ಮನೆಯಲ್ಲು
ಕಿಚ್ಚೆದ್ದು ಸುಡುವಾಗ
ಬಚ್ಚಲ ನೀರ, ಬೀದಿಯ ಧೂಳ ಹೊಯ್ದು
ಬೊಬ್ಬಿಟ್ಟೆಲ್ಲರ ಕರೆವರಯ್ಯಾ
ಕೂಡಲ ಸಂಗಮದೇವಾ,
ವಂದನೆಯ ಮರೆದು ನಿಂದಿಸುತ್ತಿಹರು.

ಮಡಕೆ ದೈವ, ಮೊರದೈವ, ಬೀದಿಯ ಕಲ್ಲು ದೈವ
ಹಣಿಗೆ ದೈವ, ಬಿಲ್ಲನಾರಿ ದೈವ ಕಾಣಿರಯ್ಯ
ಕೊಳಗದೈವ, ಗಿಣ್ಣಿಲು ದೈವ, ಕಾಣಿರಯ್ಯಾ
ದೈವ ದೈವವೆಂದು ಕಾಲಿಡಲಿಂಬಿಲ್ಲ
ದೇವನೊಬ್ಬನೇ ಕೂಡಲ ಸಂಗಮದೇವ.

ಇಷ್ಟು ಮಾತ್ರವಲ್ಲದೆ ನಮ್ಮ ಸಂವಿಧಾನದ ೫೧ನೇ ಪರಿಚ್ಛೇದದಲ್ಲಿ ಮೂಲಭೂತ ಕರ್ತವ್ಯಗಳಲ್ಲಿ ಈ ರೀತಿಯಾಗಿ ಘೋಷಿಸಲಾಗಿದೆ :

ವೈಜ್ಞಾನಿಕ ಮನೋಧರ್ಮ, ಮಾನವೀಯತೆ ಮತ್ತು ಪ್ರಶ್ನೆ ಮಾಡುವ ಮನೋಭಾವ ಹಾಗೂ ಸುಧಾರಣೆ ಮನೋವೃತ್ತಿ ಪ್ರತಿಯೊಬ್ಬ ನಾಗರಿಕನ ಕರ್ತವ್ಯವಾಗಿರುತ್ತದೆ.

ಆದ್ದರಿಂದ ನಮ್ಮೆಲ್ಲರ ಈ ನಾಯಕರು, ಸಂವಿಧಾನದಲ್ಲಿ ಉಲ್ಲೇಖಿಸಲ್ಪಟ್ಟ ನಾಗರಿಕನ ಮೂಲಭೂತ ಕರ್ತವ್ಯಗಳನ್ನು ಉಲ್ಲಂಘಿಸಿದ್ದಾರೆ ಎಂಬುದರಲ್ಲಿ ಸಂಶಯವಿಲ್ಲ! ಯಾರಲ್ಲಿ ಮೊರೆಯಿಡಬೇಕು!!

**ಡಾ|| ಎಚ್. ಚಂದ್ರಶೇಖರ**
ಎಂ.ಐ.ಜಿ. ೭೭, ೬ನೇ ಅಡ್ಡರಸ್ತೆ, ೬ನೇ ಮುಖ್ಯರಸ್ತೆ
ಕೆ.ಎಚ್.ಬಿ. ಕಾಲೋನಿ, ೨ನೇ ಹಂತ, ಬಸವೇಶ್ವರನಗರ
ಬೆಂಗಳೂರು - ೫೬೦ ೦೭೯

**ಪಾತ್ರಗಳು**

ಜನಕರಾಯರು : ಖ್ಯಾತ ಉದ್ಯೋಗಪತಿ
ವಯಸ್ಸು ೫೦

ವಸಿಷ್ಠ : ಜನಕರಾಯನ ಆಪ್ತ ಕಾರ್ಯದರ್ಶಿ
ವಯಸ್ಸು ೫೫

ಸೀತಾ : ಜನಕರಾಯನ ಮಗಳು
ವಯಸ್ಸು ೨೧

ರಾಮಮೂರ್ತಿ : ಕಂಪ್ಯೂಟರ್ ಎಂಜಿನಿಯರ್
ವಯಸ್ಸು ೨೩

ರಾವಣಪ್ಪ : ಶ್ರೀಮಂತ ನಿರುದ್ಯೋಗಿ ಯುವಕ
ವಯಸ್ಸು ೨೪

ಜಯಕುಮಾರ : ಕಾಲೇಜು ಲೆಕ್ಚರರ್
ವಯಸ್ಸು ೨೪

ಭೀಮಣ್ಣ : ಪೈಲವಾನ್ ಮತ್ತು ಹೊಟೇಲ್ ವೇಟರ್
ವಯಸ್ಸು ೨೫



# ಕೌನ್ ಬನೇಗಾ ಸೀತಾಪತಿ – ಒಂದು ಪ್ರಹಸನ

### ದೃಶ್ಯ – ೧

(ಜನಕರಾಯರು ಮನೆಯ ಹಾಲೊಂದರಲ್ಲಿ ಪೇಪರ್ ಓದುತ್ತ ಕುಳಿತಿದ್ದಾರೆ. ಕೈಯಲ್ಲಿ ಫೈಲೊಂದನ್ನು ಹಿಡಿದು ವಸಿಷ್ಠರ ಪ್ರವೇಶ)

**ವಸಿಷ್ಠ** : ನಮಸ್ಕಾರಾಽ ರಾಯರಿಗೆ.

**ಜನಕರಾಯರು** : ಓಹೋಽ ವಸಿಷ್ಠರು, ನಮಸ್ಕಾರಾ, ಬರ್ರಿಽ ಬರ್ರಿಽ. ಕೂತ್ಕೊಳ್ರಿ, ಎಲ್ಲಾ ಆರಾಮಾಽ ? ಕೈಯಾಗೇನೋ ಕಡತ ತಂದೀರಿಽ, ಏನದು ?

**ವಸಿಷ್ಠ** : ಅದಽ, ನಾವು ಇಷ್ಟ ದಿವಸ ಯೋಚಿಸ್ತಿದ್ವೆಲ್ಲಾಽ ಆ ಪ್ರೊಜೆಕ್ಟಿನ ಫೈನಲ್ ರಿಪೋರ್ಟು. ತಯಾರಾತುಽ. ಅದನ್ನು ನಿಮಗಿಷ್ಟು ತೋರ್ಸಿ, ಎಲ್ಲಾ ಸರೀಽ ಅಂತ ನೀವ ಅಂದ್ರಽ ನಾಳೆ ಸಬ್ಮಿಟ್ಟು ಮಾಡಿಬಿಡೋಣ ಅಂತಽ ನಿಮಗ ತೋರಸ್ಲಿಕ್ಕೆ ತಂದೀನಿ, ಇಕಾ ನೋಡ್ರಿ. (ಫೈಲನ್ನು ಜನಕರಾಯರ ಕೈಗೆ ಕೊಡುತ್ತಾನೆ)

**ಜನಕರಾಯರು** : (ಫೈಲನ್ನು ತಿರುವಿಹಾಕಿ) ಆರ್ಭಾಟ್ ಆಗೇದೇಳ್ರಿಽ ರಿಪೋರ್ಟು. ನೀವು ಇದನ್ನು ಸಬ್ಮಿಟ್ ಮಾಡಿಬಿಡ್ರಿ. ಈ ಪ್ರೊಜೆಕ್ಟೇನಽರಽ ನಮಗ ಸ್ಯಾಂಕ್ಶನ್ ಆತೂಽ ಅಂದ್ರಽ ನಮ್ಮ ಕಂಪನಿಗೆ ಹೆಸರೂ ಮತ್ತು ಹಣ ಎರಡೂ ಬರತಾವ ನೋಡ್ರಿ ವಸಿಷ್ಠ ಅವರಽ.
(ಈ ಹೊತ್ತಿಗೆ ಸರಿಯಾಗಿ ಸೀತಾ ಟ್ರೇದಲ್ಲಿ ಎರಡು ಕಪ್ಪು ಚಹಾ ತರುತ್ತಾ ಪ್ರವೇಶಿಸುತ್ತಾಳೆ)

**ಸೀತಾ** : ನಮಸ್ಕಾರಾ ಅಂಕಲ್. ಚಹಾ ತಗೋಳ್ರಿ. ಅಪ್ಪಾ ನೀವೂ ತಗೋಳ್ರಿ.

**ವಸಿಷ್ಠ** : ಎನ್ ಸೀತಾ ಹ್ಯಾಂಗ ಇದ್ದೀ ? ಅಲ್ಲಾಽ, ಎಷ್ಟ ದಿವ್ಸ ಈ ಮನ್ಯಾಗ ಕುಮಾರಿ ಸೀತಾನ್ನ ಕೈಯಿಂದ ಚಹಾ ಕುಡಿಯೋದು. ತಡೀ ಸ್ವಲ್ಪ ದಿವಸ, ಈ ಪ್ರೋಜೆಕ್ಟ್ ಸ್ಯಾಂಕ್ಶನ್ ಆತೂ ಅಂದ್ರ ಭರ್ಜರಿ ಮದುವಿ ಮಾಡಿ ನಿನ್ನಽ ಗಂಡನ ಮನೀಗೆ ಕಳಿಸ್ತೀವಿ.

**ಸೀತಾ** : ಹೋಗ್ರಿಽ ಅಂಕಲ್ (ನಾಚಿ ಒಳಗೆ ಹೋಗುವಳು).

**ಜನಕರಾಯರು** : ಹೌದು ವಸಿಷ್ಠ ಅವರಽ. ಆದಷ್ಟು ಲಗೂನೇ ಸೀತಾನ ಮದ್ವಿ ಮಾಡಿ ಗಂಡನ ಮನೀಗೆ ಕಳಸಬೇಕೂ ಅಂತ ನಾನೂಽ ವಿಚಾರಾ ನಡಿಸೀನಿ. ತಾಯಿ ಇಲ್ಲದ ಹುಡುಗಿ. ಆದ್ರಽ ನಮಗ ತಕ್ಕಂಥ ಶ್ರೀಮಂತ ಹುಡುಗನ್ನ ಹ್ಯಾಂಗ ಹುಡುಕೂದೂ ಅಂತ ?

**ವಸಿಷ್ಠ** : ಅದಕ್ಯಾಕ ಕಾಳಜೀ ಮಾಡತೀರಿ, ಸೀತಾಂದು ಸ್ವಯಂವರ ಅರೇಂಜ ಮಾಡೂಣು.

**ಜನಕರಾಯರು** : ಅಲ್ಲಾಽ, ಸ್ವಯಂವರ ಪದ್ಧತಿಯಿಂದ ಶ್ರೀಮಂತ ಹುಡುಗನಽ ಸಿಗತಾನಽ ಅಂತ ಅನ್ನೂದು ಹ್ಯಾಂಗ ?

**ವಸಿಷ್ಠ** : (ಜನಕರಾಯರ ಕಿವಿಯಲ್ಲಿ ಗುಪ್ತವಾಗಿ ಏನೋ ಹೇಳುತ್ತಾನೆ) ಹ್ಯಾಂಗದಽ ಪ್ಲ್ಯಾನು ? ನಾಳೇನಽ ಪೇಪರಿನ್ಯಾಗ ಜಾಹೀರಾತು ಕೊಡತೇನಿ.

**ಜನಕರಾಯರು** : ಏನಂತ ಜಾಹೀರಾತು ಹಾಕಸ್ತೀರಿ ?

**ವಸಿಷ್ಠ** : ಜಾಹೀರಾತು ಹಿಂಗಿರ್ತದಽ ನೋಡ್ರಿ.
''ನಗರದ ಖ್ಯಾತ ಉದ್ದಿಮೆದಾರ ಶ್ರೀ ಜನಕರಾಯರ ಮಗಳು ಕು. ಸೀತಾ ತನ್ನ ಮದುವೆಯ ಗಂಡನ್ನು ಸ್ವಯಂವರ ಪದ್ಧತಿಯಿಂದ ಬರುವ ಶುಕ್ರವಾರ ಆಯ್ಕೆ ಮಾಡಿಕೊಳ್ಳಲಿದ್ದಾಳೆ. ಕು. ಸೀತಾ ಒಂದು ಬಿಲ್ಲನ್ನು ತಂದು ಇಡಿಸುತ್ತಾಳೆ. ಅದನ್ನು ಯಾರು ಎತ್ತುವರೋ ಆತನಿಗೆ ವರಮಾಲೆ ಹಾಕುತ್ತಾಳೆ. ಇಚ್ಛೆ ಉಳ್ಳವರು ಶುಕ್ರವಾರ ಸಾಯಂಕಾಲ ೭ ಗಂಟೆಗೆ ಅಶೋಕ ಹೊಟೇಲ್ಲಿನ ಲೌಂಜದಲ್ಲಿ ಹಾಜರ ಇರಬೇಕು'' – ನಾ ಹೇಳಿದ್ದಕ್ಕಽ ಇದಕಽ ಸರಿ ಹೋಗ್ತದ, ಹೌದಲ್ರೀಽ ?

**ಜನಕರಾಯರು** : ಅದೇನ್ಮಾಡ್ಕೋತೀರೋಽ ಎಲ್ಲಾಽ ನಿಮಗಽ ಬಿಟ್ಟೇನಿ.

**ವಸಿಷ್ಠ** : ಕಾಳಜೀ ಮಾಡಬ್ಯಾಡ್ರಿ. ಎಲ್ಲಾ ನಾ ನೋಡಿಕೊಳ್ಳುತ್ತೀನಿ. ನಮಸ್ಕಾರಾ. ನಾ ಬರ್ತೀನಿ ಹಂಗಾದ್ರಽ (ಹೊರಡುತ್ತಾನೆ).

### ದೃಶ್ಯ – ೨

(ಹೊಟೇಲ್ ಲೌಂಜು. ಅಲಂಕೃತ ಟೇಬಲ್ಲು ಕುರ್ಚಿಗಳಿವೆ. ಮಧ್ಯದಲ್ಲಿ ಜನಕರಾಯರು, ಸೀತಾ, ಹಾಗೂ ವಸಿಷ್ಠರು ಕುಳಿತಿದ್ದಾರೆ. ಸೀತಾನ ಮಗ್ಗಲು ಕುರ್ಚಿಯಲ್ಲಿ ರಾಮಮೂರ್ತಿ ಕುಳಿತಿದ್ದಾನೆ. ಬಾಕಿ ಕುರ್ಚಿಗಳ ಮೇಲೆ ಜಯಕುಮಾರ, ರಾವಣಪ್ಪ ಮತ್ತು ಭೀಮಣ್ಣ ಕುಳಿತಿದ್ದಾರೆ.)

**ಸರ್ವೋತ್ತಮ ಅಂಬೇಕರ**

**ವಸಿಷ್ಠ** : (ಎದ್ದು ನಿಂತು) ಎಲ್ಲರಿಗೂ ನಮಸ್ಕಾರ. ಸಂತೋಷಕೂಟದ ಪಾರ್ಟಿ ನಿಮಗೆಲ್ಲ ಖುಷಿ ಕೊಟ್ಟದ್ರಽ ಅಂತ ನಾ ತಿಳ್ಕೊಂಡೀನಿ. ಇನ್ಮ್ಯಾಲೆ ಸ್ವಯಂವರ ಪ್ರಾರಂಭ ಆಗ್ತಽದ. ಅದಕಽ ನಿಮಗೆಲ್ಲಾ ಇನ್ನೊಮ್ಮೆ ಸ್ವಾಗತ.

ನೀವೆಲ್ಲಾರು ಜಾಹೀರಾತು ಓದಿಕೊಂಡಽ ಬಂದವರು, ಆದರೂ ಪದ್ಧತಿ ಪ್ರಕಾರ ಇನ್ನೊಮ್ಮೆ ಹೇಳತೀನಿ. ಕು. ಸೀತಾ ಒಂದು ಬಿಲ್ಲ್ ತಂದು ಇಲ್ಲಿ ಇಡಸ್ತಾಳ. ಅದನ್ನ ಯಾರ ಎತ್ತತಾರಽ ಅವನಿಗೆ ವರಮಾಲಿ ಹಾಕ್ತಾಳ. ಇಲ್ಲೆ ನಡುವ ಕೂತಿರುವವರು (ಕೈ ಮಾಡಿ) ಜನಕರಾಯರು. ಮತ್ತಽ (ಸೀತಾನ ಕಡೆ ಕೈ ಮಾಡಿ) ಇವರು ಜನಕರಾಯರ ಮಗಳು ಕು. ಸೀತಾ.

ಇನ್ನಽ ನೀವು ನಿಮ್ಮ ನಿಮ್ಮ ಸಂಕ್ಷಿಪ್ತ ಪರಿಚಯ ಮಾಡಿಕೊಡ್ರಿ. ತಾವು ಪ್ರಾರಂಭ ಮಾಡ್ರಿ. (ಭೀಮಣ್ಣನ ಕಡೆ ಕೈ ತೋರಿಸುವರು)

**ಭೀಮಣ್ಣ** : (ಎದ್ದು ನಿಂತು) ನನ್ನ ಹೆಸರು ಭೀಮಣ್ಣ, ನಾನೊಬ್ಬ ಪೈಲವಾನ. ಎಂಟು ವರುಷದವ ಇರೂವಾಗಿನಿಂದ ಹೊಸಮನಿ ಗರಡಿಮನಿಯೊಳಗ ತಾಲೀಮ ಮಾಡಿಕೋತ ಬಂದೀನಿ. ಎಂತೆಂಥಾ ಪೈಲವಾನರನ್ನ ಅನಾಮತ್ತಾಗಿ ಎತ್ತಿ ಒಗದೀನಿ. ಈ ಬಿಲ್ಲು ಎತ್ತೂದೇನು ನನ್ನ ಎಡಗೈ ಕೆಲಸ ಅಂತ ಬಂದೀನಿ.

**ವಸಿಷ್ಠ** : ತಾವು (ಜಯಕುಮಾರ ಕಡೆಗೆ ಕೈ ಮಾಡುತ್ತಾರೆ).

**ಜಯಕುಮಾರ** : ನಾನು ಜಯಕುಮಾರ ಅಂತ. ಇಲ್ಲೆ ಫಿಸಿಕಲ್ ಎಜ್ಯುಕೇಶನ್ ಕಾಲೇಜದಾಗ ಲೆಕ್ಚರರ್ ಆಗೀನಿ. ಸ್ಟೂಡಂಟ ಇದ್ದಾಗ, ಮ್ಯಾಚ್ ಫಿಕ್ಸಿಂಗ್ ಮಾಡಿ ನನ್ನ ಪ್ರತಿಸ್ಪರ್ಧಿಗಳನ್ನು ಸೋಲಿಸಿ ಬಿಲ್ಲು-ಬಾಣದ ಸ್ಪರ್ಧೆಯೊಳಗ ಬಂಗಾರದ ಪದಕ ಪಡದೀನಿ. ವಶೀಲಿ ಹಚ್ಚಿ ರಾಷ್ಟ್ರೀಯ ಸ್ಪರ್ಧೆಯೊಳಗ ಪ್ರತಿನಿಧಿಸುವ್ವಂಗ ಮಾಡಿಕೊಂಡಿದ್ದೆ. ಆದರಽ ದಿಲ್ಲಿಯೊಳಗ ನನ್ನನ್ನ ಮೀರಿಸುವಂಥ ಮ್ಯಾಚ್ ಫಿಕ್ಸಿಂಗ್ ಜನ ಇದ್ದದ್ದರಿಂದ ನನ್ನ ಆಟ ನಡಿಲಿಲ್ಲ.

**ವಸಿಷ್ಠ** : ತಾವು. (ರಾವಣಪ್ಪನ ಕಡೆ ಕೈ ತೋರಿಸುತ್ತಾರೆ).

**ರಾವಣಪ್ಪ** : ನಾನು ಶ್ರೀಮಂತ ಟಾಡಿ ಕಂಟ್ರಾಕ್ಟರ್ ಶರಾಬಕುಮಾರ್ ಅವರ ಏಕ ಮಾತ್ರ ಪುತ್ರ. ಈ ದಂಧೆಯೊಳಗ ನಮ್ಮ ಅಪ್ಪ ಮಾಡಿದ ಹಣ ಅಷ್ಟಿಷ್ಟಲ್ಲ. ಹೀಗಾಗಿ ನಾನು ಯಾವ ಕೆಲಸಾನೂ ಮಾಡೂದಿಲ್ಲ. ನನ್ನ ಹವ್ಯಾಸ ಅಂದ್ರ ತಿಂದುಂಡು, ಜಿಮ್ಮಿಗೆ ಹೋಗಿ ಮೈ ಬೆಳೆಸೂದು ಒಂದಽ. ನಮ್ಮಪ್ಪನ ದುಡ್ಡಿನ ಬಲದಿಂದ ಮತ್ತ ನಮ್ಮಪ್ಪ ಸಾಕಿದ ಗೂಂಡಾಗಳ ಸಹಾಯದಿಂದ ಬೇಕಾದಂಥ ಕೆಲಸ ಮಾಡಿಕೊಳ್ಳಬಲ್ಲೆ. ಅದಕಂತಽ ಇಲ್ಲಿಗೆ ಬಂದೀನಿ.

**ರಾಮಮೂರ್ತಿ** : ನನ್ನ ಹೆಸರು ರಾಮಮೂರ್ತಿ ಅಂತ. ನಾನು ಸಾಫ್ಟವೇರ್ ಇಂಜಿನಿಯರ್. ನನಗ ಭಾರವಾದ ವಸ್ತು ಎತ್ತೂದಾಗಲೀ, ಬಿಲ್ಲು-ಬಾಣ ಹೂಡೂದರೊಳಗಾಗಲೀ ಅಥವಾ ಗೂಂಡಾಗಿರಿಯಿಂದ ಕೆಲಸ ಸಾಧಿಸಿ ಗೊತ್ತಿಲ್ಲ. ಆದ್ರಽ ನಿಮ್ಮ ಜಾಹೀರಾತಿನೊಳಗಽ ಮದುವೆ ಹೆಣ್ಣೊಂದು ಬಿಲ್ಲುತಂದು ಇಡಸ್‌ತಾಳ ಅನ್ನೂದನ್ನು ನಾನು ಇಡತಾಳ ಅಂತ ಓದಿ ನಾಜೂಕಾದ ಹೆಣ್ಣೊಂದು ಎತ್ತಿ ತಂದಿರುವ ಬಿಲ್ಲನ್ನು ಗಂಡಸಾದ ನನಗ ಎತ್ತಲಿಕ್ಕೆ ಆಗೂದಿಲ್ಲೇನು ಅಂತ ಬಂದೀನಿ. ಆದರಽ ತಪ್ಪ ಓದಿದ್ದೇ ಅಂತ ಈಗ ನನಗ ಗೊತ್ತಾತು. ಇರಲಿ, ಹ್ಯಾಂಗ ಆದರೂ ಬಂದಿನಿ. ಪ್ರಯತ್ನ ಮಾಡತೀನಿ. (ಕುಳಿತುಕೊಳ್ಳುವನು)

**ವಸಿಷ್ಠ** : ಸರಿ. ಇನ್ನಽ ಸ್ವಯಂವರ ಪ್ರಾರಂಭ. ಸೀತಮ್ಮಾ, ಬಿಲ್ಲನ್ನು ತಂದು ಇಲ್ಲಿ ಇಡಮ್ಮಾ ಟೇಬಲ್ ಮ್ಯಾಲೆ. (ಸೀತಾ ಅಲಂಕೃತ ಪೆಟ್ಟಿಗೆಯೊಂದನ್ನು ಮಧ್ಯದಲ್ಲಿ ತಂದಿಡುತ್ತಾಳೆ). ಈ ಪೆಟ್ಟಿಗೆಯನ್ನು ತೆಗೆಯಿರಿ. ನಿಮ್ಮ ತಾಕತ್ತನ್ನು ಉಪಯೋಗಿಸಿ ಅದರಲ್ಲಿಯ ಬಿಲ್ಲನ್ನು ಎತ್ತಿರಿ.

**ಭೀಮಣ್ಣ** : (ಗಂಭೀರವಾಗಿ ಪೈಲವಾನರ ನಡಿಗೆಯಿಂದ ಪೆಟ್ಟಿಗೆಯ ಎದುರಿಗೆ ಪ್ರೇಕ್ಷಕರಿಗೆ ಮುಖ ಕಾಣುವಂತೆ ಬಂದು ಮೆಲ್ಲಗೆ ಅದನ್ನು ತೆಗೆಯುತ್ತಾನೆ.) ಹಾಂ! (ಸ್ವಗತ; ಪ್ರೇಕ್ಷಕರಿಗೆ) ಅಲ್ಲಾಽ ಭಾರವಾದ ಬಿಲ್ಲು ಇರತದಽ ಅದನ್ನ ಎತ್ತಿದರಾಯಿತು ಅಂತ ಬಂದ್ರಽ ಇಲ್ಲೆ ಪೆಟ್ಟಿಗೆ ತಂದು ಇಟ್ಟಾರ. ಇದರೊಳಗ ಬಿಲ್ಲಽ ಇಲ್ಲ! ಒಂದು ಕಾಗದ ಅದಽ. ಇದೇನೋ ಮೋಸ ಅದಽ. ಇದನ್ನ ಎತ್ತಬಾರದು. ಆದರಽ ಮಾರಿಹ್ಯಾಂಗ ಉಳಿಸಿಕೊಳ್ಳಬೇಕೀಗಽ.

(ಬಹಿರಂಗ) ವಸಿಷ್ಠರ ಕಡೆಗೆ ನೋಡುತ್ತಾ, ಅಲ್ರೀ, ಬಿಲ್ಲ ಎತ್ತೂದು ಅಂತ ಹೇಳಿ ಆ ಪೆಟಗ್ಯಾಗ ಒಂದು ಕಾಗದ ಚೂರು ಇಟ್ಟು ಅದನ್ನ ಎತ್ರೀ ಅಂತ ಹೇಳಿ ನನ್ನಂಥ ಪೈಲವಾನನಿಗೆ ನೀವು ಅಪಮಾನ ಮಾಡೀರಿ. ಇಂಥ ಅವಮಾನಕರ ಕೆಲಸ ಮಾಡೂದಂದ್ರೇನು? ಥೆ... ಥೆ... ಥೇ (ಅಂತ ಹೊರಟುಹೋಗುವನು).

**ವಸಿಷ್ಠ** : ಜಯಕುಮಾರ ಅವರಽ, ನೀವು ಆ ಬಿಲ್ ಎತ್ರಿ.

**ಜಯಕುಮಾರ** : (ಅವನೂ ಸಹ ಪೆಟ್ಟಿಗೆಯ ಮುಂದೆ ನಿಂತು ಪೆಟ್ಟಿಗೆಯಲ್ಲಿಯ ಕಾಗದ ನೋಡಿ ಔಡಲೆಣ್ಣಿ ಕುಡಿದವರಂತೆ ಮುಖ ಮಾಡಿ ಪ್ರೇಕ್ಷಕರನ್ನುದ್ದೇಶಿಸಿ, **ಸ್ವಗತ :** ನಾನು ಈ ರಾಜ್ಯದೊಳಗ ಮ್ಯಾಚ್ ಫಿಕ್ಸಿಂಗ್ ಎಕ್ಸಪರ್ಟ್. ಬಿಲ್ಲ ಅಂದ್ರ ಹಂಗಽ ಮಾಡಿ ಎತ್ತಬಹುದು ಅಂತ ಮಾಡಿದ್ದೆ. ಇದು ಅಂಥ ಬಿಲ್ಲ ಅಲ್ಲ. ಆ ಹುಡುಗಿ ಕೊಂಡುಕೊಂಡಂಥ ಸಾಮಾನು, ಈಗ ಎಲ್ಲಾರೂ ಕುಡುದೂ ತಿಂದೂ ಬಂದ್ವೆಲ್ಲ ಇವುಗಳ ಬಿಲ್ಲು. ಈ ಬಿಲ್ಲು ಎತ್ತೂದಂದ್ರ ಈ ಬಿಲ್ಲ ಪಾವತಿ ಮಾಡಬೇಕು. ಇದು ನನ್ನ ಕಡೀಂದ ಆಗೂ ಕೆಲಸ ಅಲ್ಲ. ಆದರಽ ಈಗ ಮರ್ಯಾದೆಯಿಂದ ಹ್ಯಾಂಗ ಕಾಲ ಕಿತ್ತೂದುಽ?

**(ಬಹಿರಂಗ) :** ಹ, ಹ, ಹ, ಅದೇನಾಗೇದಂದ್ರಽ ಈಗ ಸೀತಾ ಅವರನ್ನ ನೋಡಿದ ಮ್ಯಾಲೆ ನನಗೆ ಗೊತ್ತಾತು, ಏನಂದ್ರಽ ನಮ್ಮಜ್ಜನ, ಚಿಕ್ಕಮ್ಮನ ಭಾವನ ಮೊಮ್ಮಗನಿಗೆ ಸೀತಾ ಅವರ ಅಜ್ಜಿಯ ಚಿಕ್ಕಪ್ಪನ ನಾದಿನಿಯ ಮೊಮ್ಮಗಳನ್ನು ಕೊಟ್ಟಾರ. ಅಂದ್ರಽ ದೂರದಿಂದ ಸೀತಾ ನನಗೆ ತಂಗಿ ಆಗತಾಳಽ. ತಂಗೀನ್ನ ಹ್ಯಾಂಗ್ರಽ ಮದ್ವಿ ಆಗೂದು? ಥೇ, ಥೇ, ಥೇ ಧರ್ಮ ಅಲ್ಲ ತಗೀರಿ (ಅನ್ನುತ್ತಾ ಅವನೂ ಅಲ್ಲಿಂದ ಕಾಲು ಕೀಳುತ್ತಾನೆ).

**ವಸಿಷ್ಠ** : ರಾವಣಪ್ಪನವರಽ, ಈಗಽ ನಿಮ್ಮ ಪಾಳಿ.

**ರಾವಣಪ್ಪ** : (ಅವನೂ ಅದೇ ರೀತಿ ಮಾಡುತ್ತಾನೆ. ಪೆಟ್ಟಿಗೆ ಒಳಗೆ ನೋಡುತ್ತಾನೆ. ದೂರದಿಂದ ಅದರಲ್ಲಿಯ ಕಾಗದ ಓದುತ್ತಿದ್ದಂತೆ ಬೆವರುತ್ತಾನೆ, ಸುಸ್ತಾದಂತೆ ಕಾಣುತ್ತಾನೆ) ಪ್ರೇಕ್ಷಕರ ಕಡೆಗೆ ನೋಡುತ್ತ:

**(ಸ್ವಗತ) :** ಅಲ್ಲಾ, ನಮ್ಮಪ್ಪನಽ ಹರಾಮಿ ರೊಕ್ಕಾ ಮಾಡೂದರೊಳಗ ಕಿಲಾಡಿ ಅಂದ್ರಽ ಇವರು ಅವನನ್ನೂ ಮೀರಿಸ್ಯಾರ. ಈ ಪೆಟ್ಟಿಗ್ಯಾಗ ಇರೂದೂ ನಾ ತಿಳಿದಂಥ ಬಿಲ್ಲ ಅಲ್ಲ. ಈ ಹುಡುಗಿ ಕೊಂಡು ಕೊಂಡಂತಹ ವಸ್ತು-ವಡವಿ ಬಿಲ್ಲು, ಪಾರ್ಟಿ ಬಿಲ್ಲು, ಎಲ್ಲಾ ಕೂಡಿಸಿ ಇಟ್ಟಾರ. ನಮ್ಮಪ್ಪಽಒಂದು ಕಾಸೂ ಬಿಚ್ಚಽವಽ ಅಲ್ಲ.

## ಹುಟ್ಟುಹಬ್ಬದ ಶುಭಾಶಯಗಳು



೧೦.೩.೨೦೧೨ರಂದು ತಮ್ಮ ೯೧ನೆಯ ವರ್ಷಕ್ಕೆ ಕಾಲಿರಿಸಿದ ಮಾನ್ಯ ಶ್ರೀ. ಕೋ. ಚೆನ್ನಬಸಪ್ಪ ಅವರಿಗೆ ಹಾರ್ದಿಕ ಶುಭಾಶಯಗಳು. ಅವರು ನೂರ್ಕಾಲ ಬಾಳಿ ತಮ್ಮ ಶ್ರೇಯಸ್ಸನ್ನು ಇನ್ನೂ ಅತಿಶಯವಾಗಿ ವರ್ಧಿಸಿಕೊಳ್ಳಲೆಂದು 'ಹೊಸತು' ಆಶಿಸುತ್ತದೆ.

ಪುಕ್ಕಽಟ ಶ್ರೀಮಂತ ಹುಡಗೀನ್ನ ಮದ್ವಿ ಮಾಡಿಕೊಳ್ಳು ಛಾನ್ಸ ಕಳಕೊಬ್ಯಾಡಾ. ಹರಾಮಿ ಮೈ ಬೆಳೆಸಿದ್ದು ಉಪಯೋಗಿಸು ಅಂತ ಹೇಳಿ ಕಳಿಸಿದ್ದ. ಆದರಽ ಭಾರಿಽ ಶ್ರೀಮಂತ ಅಂತ ಬಡಾಯಿ ಕೊಚಗೊಂಡೀನಿ. ಈಗಽ ಮಾನಾ ಉಳಿಸಿಕೊಂಡು ಪರಾರಿ ಆಗೂದು ಹ್ಯಾಂಗಽ ಅಂತಽ.

**(ಬಹಿರಂಗ) :** ಈ ಬಿಲ್ಲೇನು ಮಹಾ ನನಗಽ. ಆದ್ರಽ ಇವತ್ತು ಶುಕ್ರವಾರ. ಮತ್ತೊಂದು ವಾರ ಆಗಿತ್ತಂದ್ರಽ ರೊಕ್ಕ ಚಿಮ್ಮಿಬಿಡತಿದ್ದೆ. ಶುಕ್ರವಾರ ಸಂಜೀನ್ಯಾಗ ನಾವು ಲಕ್ಷ್ಮೀ ಪೂಜಾ ಮಾಡ್ತೀವಿ. ಹೊರಗಽ ಕಳಸೂದಿಲ್ಲ. ಇಲ್ಲಾಂದ್ರಽ ಹೇಳತಿದ್ದೆ (ಅನ್ನುತ್ತಾ ಹೊರಟುಹೋಗುತ್ತಾನೆ).

**ವಸಿಷ್ಠ** : ರಾಮಮೂರ್ತಿಯವರ, ಈಗ ನಿಮ್ಮ ಪಾಳಿ.

**ರಾಮಮೂರ್ತಿ** : (ಉಳಿದವರಂತೆ ಪೆಟ್ಟಿಗೆಯ ಮುಂದೆ ನಿಂತು ಅದನ್ನು ತೆರೆದು ಅದರಲ್ಲಿಯ ಕಾಗದ (ಹೊಟೇಲ್ ಬಿಲ್) ಎತ್ತಿ ಪ್ರೇಕ್ಷಕರಿಗೆ ಕಾಣುವಂತೆ ಹಿಡಿದು ಓದುತ್ತಾನೆ).

ವಸ್ತ್ರ, ವಡವೆ ಬಾಬತ್ತು - ೧೦ ಲಕ್ಷ ರೂಪಾಯಿ
ಆಡಿಯೋ ವ್ಹಿಡಿಯೋ - ೫ ಲಕ್ಷ ರೂಪಾಯಿ
ಕಾರು ಮತ್ತು ಇಂದಿನ
ಪಾರ್ಟಿ ಬಾಬ್ತು - ೧೦ ಲಕ್ಷ ರೂಪಾಯಿ
ಒಟ್ಟು - ೨೫ ಲಕ್ಷ ರೂಪಾಯಿ

ಇರಲಿ, ಈ ಬಿಲ್ ಎತ್ತೀನಿ ಅಂದ ಮ್ಯಾಲೆ ಈ ಬಿಲ್ ಪಾವತಿ ಮಾಡಬೇಕು. ಮಾಡತೀನಿ, ಶುಕ್ರವಾರ ಆದ್ರ ಏನಾತು. ನಾನೇನು ರೋಖ ರೊಕ್ಕಾ ಕೊಡೂದಿಲ್ಲ. ಕ್ರೆಡಿಟ್ ಕಾರ್ಡ ಕೊಡತೀನಿ. ಅಷ್ಟಾಗಿನೂ ಶುಕ್ರವಾರ ಸಂಜೀ ವ್ಯಾಳ್ಯಾದಾಗ ಸೀತಾನಂಥ ಲಕ್ಷ್ಮೀ ಮನ್ಯಾಗ ಬರತಿದ್ರ ಬ್ಯಾಡಾ ಯಾಕ ಅನ್ನಬೇಕು. ಕಿಸೆಯಿಂದ ಕ್ರೆಡಿಟ್ ಕಾರ್ಡ್ ತೆಗೆದು ಸಹಿ ಮಾಡಿ) ವೇಟರ್, ಬಾಪ್ಪಾ ಇಲ್ಲೆ, ತಗೊ ಈ ಕ್ರೆಡಿಟ್ ಕಾರ್ಡ್. ಮತ್ತ ಈ ಬಿಲ್ಲು ಎಂದು ಅವನ ಕೈಯಲ್ಲಿ ಎರಡನ್ನೂ ಕೊಡುತ್ತಾನೆ. ಆಗ ಆತನ ಕೈಯಿಂದ ಕ್ರೆಡಿಟ್ ಕಾರ್ಡ್ ಸೀತಾನ ಕಾಲ ಹತ್ತಿರ ಬೀಳುತ್ತದೆ. ಸೀತಾ ಅದನ್ನು ಎತ್ತಿದಂತೆ ಮಾಡಿ ಅದರ ಬದಲಿಗೆ ತನ್ನ ಕೈಯಲ್ಲಿಯ ಕ್ರೆಡಿಟ್ ಕಾರ್ಡು ವೇಟರನಿಗೆ ಕೊಡುತ್ತಾಳೆ. ಆತ ಅದನ್ನು ತೆಗೆದುಕೊಂಡು ಹೋಗುತ್ತಾನೆ. (ಎಲ್ಲರೂ ಎದ್ದು ಮುಂದೆ ಬರುತ್ತಾರೆ).

**ಜನಕರಾಯರು** : ಭೇಷ್, ಈ ಬಿಲ್ಲನ್ನು ಪಾವತಿ ಮಾಡಬೇಕಾದ್ರ ನೀನು ಶ್ರೀಮಂತ ಇರಲಿಕ್ಕೇ ಬೇಕು. ವಸಿಷ್ಠ ಅವರೇ, ನನ್ನ ಮಗಳಿಗೆ ಶ್ರೀಮಂತ ಗಂಡನ್ನು ಹುಡುಕುವ ಈ ನಿಮ್ಮ ಉಪಾಯ ಫಲ ಕೊಟ್ಟಿತು., ಸೀತಾ, ನೀ ಬಾ. ರಾಮಮೂರ್ತಿ ಅವರಿಗೆ ಮಾಲಿ ಹಾಕು. (ಮಾಲಿ ಹಾಕುತ್ತಾಳೆ. ಇಬ್ಬರೂ ಜನಕರಾಯ ಮತ್ತು ವಸಿಷ್ಠ ಅವರಿಗೆ ನಮಸ್ಕಾರ ಮಾಡುತ್ತಾರೆ) ಈಗಽ ಸೀತಾನ್ನ ನಿಮಗಽ ಕೊಟ್ಟು ಮದ್ವಿ ಮಾಡೂದು ಅಂತ ಠರಾವ ಆದ್ಹಂಗಾತು. ನಿಮ್ಮ ಲಗ್ನ ಮಾತ್ರ ನಮ್ಮ ಪ್ರೊಜೆಕ್ಟ ಸ್ಯಾಂಕ್ಶನ್ ಆದ ಮ್ಯಾಲೆ. ಅಲ್ಲೀ ತನಕಽ ನೀವು ನಿಮ್ಮ ಮನ್ಯಾಗ, ಸೀತಾ ನನ್ನ ಮನ್ಯಾಗ.

**ರಾಮಮೂರ್ತಿ** : ರಾಯರಽ, ಇನ್ನೆಲ್ಲಿ ಬಂತು ನಮ್ಮನಿ-ನಿಮ್ಮನಿ ಅಂತ. ಸೀತಾ ನನ್ನ ಮನ್ಯಾಗ ಇದ್ರೂ ಒಂದಽ, ನಾ ಸೀತಾನ್ನ ಮನ್ಯಾಗ ಇದ್ರೂ ಒಂದಽ.

**ಜನಕರಾಯರು** : ಅದೇನೋ ಸರೀನಽ. ನನಗೂ ಒಬ್ಬಳೇ ಮಗಳು. ನೀವಿಬ್ಬರೂ ನನ್ಮನ್ಯಾಗ ಇರಬೇಕೂ ಅಂತ ನನಗೂ ಆಶಾ ಅದಽ. ಆದರೂ...

**ಸೀತಾ** : ಆದ್ರೂ ಇಲ್ಲಾ ಪಾದ್ರೂ ಇಲ್ಲ. ನಿನ್ನ ಮನಸ್ಸಿನ್ಯಾಗ ಹಾಂಗ ಇದ್ರ ಇವತ್ತಽ ಅವರಿಗೆ ನಮ್ಮನ್ಯಾಗ ಬಂದಿರಲಿಕ್ಕ ಹೇಳು.

**ಜನಕರಾಯರು** : ಇದೇನಮ್ಮಽ, ರಾಮಮೂರ್ತಿನ್ನ ನೋಡಿ ಜರೂಽರ ಒಂತಾಸ ಆಗೇದ, ಆದರೂ ಈಗಾಗಲೇ ಇಷ್ಟು ಆತುರಾ ?

**ಸೀತಾ** : ಅಪ್ಪಾ! ನಾ ನಿನಗ ಈಗ ಹೇಳತೀನಿ. ಒಂತಾಸಲ್ಲ, ರಾಮಮೂರ್ತಿ ಅವರ ಪರಿಚಯ ನನಗಽ ನಾಲ್ಕಾರು ವರುಷದಿಂದಽನಽ ಅದ. ಪಿ.ಯು.ಸಿ.ಯಿಂದ ಬಿ.ಇ. ತನಕ ನಾವಿಬ್ಬರೂ ಕೂಡೇ ಕಲ್ತೀವಿ. ಒಬ್ಬರನ್ನೊಬ್ಬರು ಅರ್ಥ ಮಾಡಿಕೊಂಡೀವಿ. ಇಬ್ಬರಿಗೂ ಪರಸ್ಪರ ಪ್ರೀತಿ ಅದಽ. ಮದ್ವಿ ಮಾಡಕೋಬೇಕೂ ಅಂತ ಇಷ್ಟಾಪಟ್ಟೀನಿ. ಆದ್ರಽ ನಿನಗಽ ಅಳಿಯಾ ಆಗಿ ಬರುವವ ಶ್ರೀಮಂತ ಇರಬೇಕೂ ಅನ್ನೂದು ತಿಳೀತು. ಆದ್ರ ರಾಮಮೂರ್ತಿ ಅವರು ಬಡತನ ದಲ್ಲಿಯೇ ಕಲಿತು ಬಿ.ಇ. ಆದವರು. ಈ ವಿಷಯ ನಾನು ವಸಿಷ್ಠ ಅಂಕಲ್ ಅವರಿಗೆ ತಿಳಿಸಿದೆ. ಅವರೇ ಈ ಸ್ವಯಂವರದ ಪ್ಲ್ಯಾನ್ ಹಾಕಿದ್ದು. ರಾಮಮೂರ್ತಿ ಅವರಿಗೆ ಬರಲಿಕ್ಕೆ ನಾನೇ ತಿಳಿಸಿದ್ದೆ.

ಅಪ್ಪಾ! ರಾಮಮೂರ್ತಿ ಅವರು ಕೊಟ್ಟ ಕಾರ್ಡು ಅವರದಲ್ಲ. ಅದು ನಂದಽ. ವೇಟರಗಽ ರಾಮಮೂರ್ತಿ ಕಾರ್ಡನ್ನು ಮುದ್ದಾಂ ನನ್ನ ಹತ್ತಿರ ಕೆಡವಲಿಕ್ಕ ಹೇಳಿದ್ದೆ. ಅದು ತಳಗ ಬಿದ್ದಾಗ ಅದಲಾಬದಲಾ ಮಾಡಿದ್ದೆ.

**ಜನಕರಾಯರು** : ಆಂ !

(ಮಿಕ್ಕವರು ನಗುವರು)

(ತೆರೆ ಬೀಳುವದು)

**ಸರ್ವೋತ್ತಮ ಅಂಬೇಕರ**
ನಂ. ೫೧, ೩ನೇ ಅಡ್ಡರಸ್ತೆ, ಜಯನಗರ, ಧಾರವಾಡ - ೫೮೦ ೦೦೧




ಕಳೆದ ೨೮-೨-೨೦೧೨ರಂದು ನಗರದ ವಸಂತನಗರದಲ್ಲಿನ ಇಂಡೋಫ್ರೆಂಚ್ ಕಲ್ಚರಲ್ ಸೆಂಟರ್/ಜಸ್ಟ್‌ಬುಕ್ಸ್ ಇವರ ಸಂಯುಕ್ತ ಆಶ್ರಯದಲ್ಲಿ ನಡೆದ ಸಮಾರಂಭದಲ್ಲಿ ಶ್ರೀ. ಸುಗತ ಶ್ರೀನಿವಾಸರಾಜು ಅವರ ಪುಸ್ತಕ 'ಪಿಕಲ್ಸ್ ಫ್ರಂ ಹೋಮ್' ಲೋಕಾರ್ಪಣೆಗೊಂಡಿತು. ಶ್ರೀ. ಚಿರಂಜೀವ್ ಸಿಂಗ್ ಸಭೆಯ ಅಧ್ಯಕ್ಷತೆ ವಹಿಸಿದ್ದು, ಶ್ರೀ. ಆರ್. ಸುದರ್ಶನ್ ಪುಸ್ತಕ ಬಿಡುಗಡೆ ಮಾಡಿದರು.

ಶ್ರೀ. ಎಂ. ಎಸ್. ಪ್ರಭಾಕರ ಮುಖ್ಯ ಅತಿಥಿಯಾಗಿದ್ದು ಶ್ರೀ ಕಲ್ಯಾಣ ರಾಮನ್ ಅವರೂ ವೇದಿಕೆಯಲ್ಲಿ ಉಪಸ್ಥಿತ ರಿದ್ದರು. ವೇದಿಕೆಯಲ್ಲಿ ಎಡದಿಂದ ಬಲಕ್ಕೆ ಕ್ರಮವಾಗಿ ಸರ್ವಶ್ರೀ ಸುಗತ ಶ್ರೀನಿವಾಸರಾಜು, ಎಂ. ಎಸ್. ಪ್ರಭಾಕರ, ಚಿರಂಜೀವ್ ಸಿಂಗ್, ಕಲ್ಯಾಣ ರಾಮನ್ ಹಾಗೂ ಆರ್. ಸುದರ್ಶನ್ ಅವರನ್ನು ಕಾಣಬಹುದು.

**ಪರಿಸಾರಕ** (ನಾಟಕ)

*ಸತ್ಯನಾರಾಯಣರಾವ್ ಅಣತಿ*

**ಪುಟ : xx + ೬೮ = ೮೮**

**ಬೆಲೆ : ರೂ. ೫೫**

**ಕಾಲ ಪ್ರಕಾಶನ,** ನಂ. ೨೩/ಎ, ೨ನೇ ಮಹಡಿ, ೧೦ನೇ ಅಡ್ಡರಸ್ತೆ, ೧ನೇ 'ಎನ್' ಬ್ಲಾಕ್, ರಾಜಾಜಿನಗರ, ಬೆಂಗಳೂರು

ಪುರಾಣದ ಕಥೆಯೊಂದನ್ನು ವರ್ತಮಾನಕ್ಕೆ ಒಗ್ಗಿಸಿ ಅಂದಿನ ಸಮಸ್ಯೆಗಳೆಲ್ಲ ಇಂದೂ ಜೀವಂತವಾಗಿರುವುದನ್ನು ಸ್ಪಷ್ಟಪಡಿಸುವ ನಾಟಕ. ಒಂದು ವ್ಯವಸ್ಥೆಯಲ್ಲಿ ಬದಲಾವಣೆಯನ್ನು ನಿರಾಕರಿಸುವ ಮನಸ್ಸುಗಳಿಗೆ ತಮ್ಮ ಹಿತವನ್ನಷ್ಟೇ ಕಾಯುವ ಹವಣಿಕೆ. ಪರಂಪರೆಯ ಶ್ರೇಷ್ಠತೆ ಎಂಬ ಕವಚವನ್ನು ಯೋಗ್ಯವಲ್ಲದ ವ್ಯವಸ್ಥೆಗಳಿಗೂ ತೊಡಿಸುತ್ತ ಜಾತಿಯ ಗೋಡೆಗಳನ್ನು ಇನ್ನಷ್ಟು ಗಟ್ಟಿಗೊಳಿಸುವ ಹುನ್ನಾರ ಎಲ್ಲ ಕಾಲದಲ್ಲೂ ನಡೆದಿದೆ. ಹಿಂದೂಧರ್ಮದಲ್ಲಂತೂ ಇದು ಅತಿರೇಕಕ್ಕೆ ಹೋಗಿ ಅನಾಹುತಗಳೇ ಆಗಿವೆ. ದಾಸಿಪುತ್ರ - ಕಾನೀನ - ಚಂಡಾಳ - ಚಾರ್ವಾಕ - ಮುಂತಾದ ಅಂದಿನ ಪದಗಳು ಇಂದೂ ನಮ್ಮ ಮಧ್ಯೆ ಬೇರೆ ಬೇರೆ ಹೆಸರುಗಳಿಂದ ಕರೆಯಲ್ಪಡುತ್ತವೆ. ಈ ವರ್ಗ-ವರ್ಣಪ್ರಜ್ಞೆ ಬಹಳ ಕ್ರೂರ ಹಾಗೂ ಸಮಾನತೆಯ ವಿರೋಧಿ. ಕ್ಷತ್ರಿಯನಾದರೂ ಸೂತಪುತ್ರನೆಂದೆನಿಸಿದ ಕರ್ಣ ತನ್ನ ಹುಟ್ಟನ್ನು ಮರೆಮಾಚಿ ಪರಶುರಾಮರಲ್ಲಿ ತಾನು ಬ್ರಾಹ್ಮಣನೆಂದು ಹೇಳಿ ವಿದ್ಯೆ ಕಲಿಯಬೇಕಾಯಿತು. ಕುಟಿಲ ವ್ಯವಸ್ಥೆಯೊಂದಕ್ಕೆ ಏಕಲವ್ಯ ಬಲಿಯಾಗಿ ಹೆಬ್ಬೆರಳಿನೊಂದಿಗೆ ಅಜೇಯ ಬಿಲ್ಗಾರನಾಗುವ ಅವಕಾಶ ಕಳೆದುಕೊಂಡ. ಹೀಗೆ ಸಮಾನತೆ - ಹೋರಾಟ ಬಯಸಿದ ಪಾತ್ರಗಳು ಅಂದೂ ಸೋತಿವೆ; ಇಂದೂ ಸೋಲುತ್ತಿವೆ. ಈ ನಾಟಕದಲ್ಲಿ ಪುರಾಣದ ಪಾತ್ರಗಳಾದ ಕವಷ-ಐಲೂಷರೆಂಬ ಎರಡು ಪಾತ್ರಗಳಿವೆ. ವಿದ್ಯೆಕಲಿತು ಸಾಧನೆ ಮಾಡಿದರೂ ಬೆಲೆಯಿಲ್ಲದವರಾಗಿ ಅವಗಣನೆಗೆ ಗುರಿಯಾಗಿ ನಾನಾರೀತಿಯ ಕಷ್ಟಗಳಿಗೆ ಒಳಗಾಗುತ್ತಾರೆ. ವಿದ್ಯೆಕಲಿಯುವ ಸಾಮರ್ಥ್ಯವಿದ್ದೂ ಶೂದ್ರ-ದಾಸಿಪುತ್ರ ಎಂಬಂಥ ಹುಟ್ಟಿನ ಕಾರಣಗಳನ್ನು ಮುಂದೊಡ್ಡಿ ಪ್ರತಿಭೆಯನ್ನು ವಂಚಿಸುವ ಪುರೋಹಿತಶಾಹಿ ಮತ್ತು ರಾಜ್ಯಾಡಳಿತವನ್ನು ಪ್ರತಿಭಟಿಸುವ ಉದ್ದೇಶದಿಂದ ನಾಟಕ ರಚನೆ ಆಗಿದೆ.

**ಮಂಜಿನೆಡೆಯ ಚಿತ್ರಗಳು** (ಅನುಭವ ಕಥನ)

*ಪರಂಜ್ಯೋತಿ*

**ಪುಟ : ೨೩೨** **ಬೆಲೆ : ರೂ. ೧೫೦**

**ಇಂಚರ ಪ್ರಕಾಶನ,** ನಂ. ೧೬೭, ೧೦ನೇ ಮುಖ್ಯರಸ್ತೆ, ೩ನೇ ಹಂತ, ಪೀಣ್ಯ ಕೈಗಾರಿಕಾ ಪ್ರದೇಶ, ಬೆಂಗಳೂರು - ೫೬೦ ೦೫೮

ಇವು ನೆನಪಿನಾಳದಿಂದ ಬಗೆದು ತಂದ ಸುಮಾರು ಅರವತ್ತೈದು ವರ್ಷಗಳಷ್ಟು ಸುದೀರ್ಘವಾದ ಜೀವನಾನುಭವದ ರೋಚಕ ಅನುಭವಗಳು. ಇಲ್ಲಿನ ನೀಲಗಿರಿ ಬೆಟ್ಟ - ಕಾಡು ಪ್ರದೇಶದ ಟೀ ಎಸ್ಟೇಟಿನಲ್ಲಿ ಕಳೆದ ತಮ್ಮ ಬಾಲ್ಯ, ಮುಂದೆ ತಮ್ಮ ವೃತ್ತಿಜೀವನದ ನಗರಗಳಲ್ಲಿನ ಜೀವನದರ್ಶನ ಇವೆಲ್ಲವನ್ನು ಪರಂಜ್ಯೋತಿಯವರು ನಮ್ಮ ಮನಸ್ಸಿನಾಳಕ್ಕೆ ಇಳಿಯುವಂತೆ ವರ್ಣಿಸಿದ್ದಾರೆ. ನೀಲಗಿರಿ ಜಿಲ್ಲೆಯ ಬೆಟ್ಟ-ಕಾಡುಗಳು, ಪ್ರಕೃತಿಯ ಸೌಂದರ್ಯ ಪ್ರವಾಸಿಗರಿಗೆ ಬಲು ರಮ್ಯ - ಮನಮೋಹಕ. ಹಾಗೇ ಅಲ್ಲಿನ ಟೀ-ಎಸ್ಟೇಟುಗಳು ಅವುಗಳ ಮಾಲೀಕರಿಗೆ ಹಣ ಗಳಿಸುವ ಸಾಧನಗಳು. ಎಲ್ಲವೂ ನಿಜ; ಇಲ್ಲಿ ಇನ್ನೊಂದು ಬಡ ಕೂಲಿ ಕಾರ್ಮಿಕರ ಬವಣೆಯ ಮುಖವಿದೆ. ಅದು ಎಸ್ಟೇಟುಗಳಲ್ಲಿ ದುಡಿದು ಸಿಕ್ಕ ಕೂಲಿಯಲ್ಲಿ ಸಂಸಾರ ನಡೆಸಲಾಗದೆ ಸಾಲಸೋಲ ಮಾಡಿ ತೀರಿಸಲಾಗದೆ ಬದುಕಿಗಾಗಿ ಹರಸಾಹಸ ಪಡುತ್ತ ದಿನಗಳನ್ನು ದೂಡುವ ಅಸಹಾಯಕ ಮುಖ. ಇಲ್ಲಿ ವರ್ಣಿಸಲ್ಪಟ್ಟ ರೋಚಕ ಬದುಕು ಇಂದಿನ ಮಕ್ಕಳಿಗಾಗಲಿ ನಾಳೆಯ ಬದುಕಿನಲ್ಲಾಗಲೀ ಕಾಣಲು ಸಾಧ್ಯವಿಲ್ಲ. ಇಂದಿನದು ಯಾಂತ್ರಿಕ ಯುಗ. ಎಲ್ಲೆಲ್ಲೂ ಸುಖವನ್ನರಸುತ್ತ ಶ್ರಮಜೀವನಕ್ಕೆ ಬೆನ್ನು ತಿರುಗಿಸಿದ ದಿನಗಳಿವು. ಇಲ್ಲಿನ ಸಾಹಸಮಯ ಬದುಕಿನೊಂದಿಗೆ ಹೋರಾಡಿದ ವಿವಿಧ ಮುಖದ ಜನರನ್ನು ನಾವು ಮೆಚ್ಚಲೇ ಬೇಕಾಗುತ್ತದೆ. ಇವೆಲ್ಲ ಕಥೆಗಳಲ್ಲ; ಬದುಕಿನ ಭಾಗಗಳೆಂಬುದನ್ನು ಒಪ್ಪಲೇ ಬೇಕಾಗುತ್ತದೆ. ತಾವು ವಾಸ ಮಾಡಿದಲ್ಲೆಲ್ಲ ಮೂಡಿಸಿದ ತಮ್ಮ ಹೆಜ್ಜೆ ಗುರುತುಗಳನ್ನು ಒಂದೊಂದಾಗಿ ಲೆಕ್ಕಹಾಕುತ್ತಾ ಬದುಕೆಂಬುದು ಎಲ್ಲಿಂದ ಎಲ್ಲಿಗೆ ಸಾಗುತ್ತದೆ ಎಂಬ ವಿಸ್ಮಯವನ್ನು ಲೇಖಕರು ಮನಗಾಣಿಸುತ್ತಾರೆ.



**ಇಲ್ಲಿ ಯಾವುದೂ ಅಮುಖ್ಯವಲ್ಲ** (ಸಮಾಜವಾದಿ ಸಂಕಥನಗಳು - ೪)

*ಡಿ. ಎಸ್. ನಾಗಭೂಷಣ*

**ಪುಟ : ೨೯೬ + ೪** **ಬೆಲೆ : ರೂ. ೧೫೦**

**ಹಸಿರು ಪ್ರಕಾಶನ,** ನಂ. ೯೦, ೧೬ನೇ ಅಡ್ಡರಸ್ತೆ, ೪ನೇ ಫೇಸ್, ಜೆ. ಪಿ. ನಗರ, ಬೆಂಗಳೂರು - ೫೬೦ ೦೭೮

ತಮ್ಮ ಸುತ್ತಮುತ್ತ ನಡೆಯುವ ಎಲ್ಲ ವಿದ್ಯಮಾನಗಳನ್ನು ಜಾಗ್ರತೆಯಾಗಿ ಅವಲೋಕಿಸಿ ತಮಗೆ ಅನಿಸಿದ ಸೂಕ್ತ ಪ್ರತಿಕ್ರಿಯೆ ನೀಡುವುದು ಶ್ರೀ ಡಿ. ಎಸ್. ನಾಗಭೂಷಣ ಅವರ ಒಂದು ಸ್ಪಂದನಾವಿಧಾನ. ವಿಷಯವೈವಿಧ್ಯಗಳಿರುವುದರಿಂದ ಇವನ್ನು ಲೇಖನಗಳ ಒಕ್ಕೂಟವೆಂದು ಅವರೇ ಹೆಸರಿಸಿದ್ದಾರೆ. ಇತರರ ಬರವಣಿಗೆಗಳು, ಪುಸ್ತಕಗಳು ಮಾತ್ರವಲ್ಲದೆ ಸಿನಿಮಾ - ರಂಗಭೂಮಿ, ರಾಜಕೀಯ ವಿದ್ಯಮಾನಗಳು – ಮುಂತಾದ ಇನ್ನೂ ಅನೇಕ ವಸ್ತು-ವಿಷಯಗಳಿರುವುದರಿಂದ ಎಲ್ಲ ದಿಕ್ಕುಗಳಿಗೂ ಮುಖಮಾಡಿರುವ ಲೇಖನಗಳಿವು. ನಿರ್ದಾಕ್ಷಿಣ್ಯ - ನೇರನುಡಿಗಳಲ್ಲಿ ತನ್ನ ವಿಚಾರಗಳನ್ನು ಸ್ಪಷ್ಟಪಡಿಸುವುದು, ಟೀಕೆ, ವಿಮರ್ಶೆಗಳನ್ನು ಒಳಗೊಂಡಿರುವುದು ಇವರ ಲೇಖನಗಳ ವೈಶಿಷ್ಟ್ಯ. ತಾವು ಬರೆದುದು ಶ್ರೇಷ್ಠ ಮತ್ತು ಅಂತಿಮವೆಂದು ತೀರ್ಮಾನಿಸಿ ಬೀಗುವ ಕೆಲವು ಲೇಖಕರಿಗೆ ಇವರ ಪ್ರತಿಕ್ರಿಯೆಗಳು ಸ್ವಲ್ಪ ಖಾರ-ಕಹಿ-ಒಗರು ಎನ್ನಿಸಬಹುದು. ಆದರೂ ಎಲ್ಲರನ್ನೂ ಒಂದೇ ಬಾರುಕೋಲು ಸೇವೆಗೆ ಒಳಪಡಿಸುವುದೂ ಆಕ್ಷೇಪಾರ್ಹ. ಸಮಾಜದಲ್ಲಿನ ಕಪ್ಪು-ಬಿಳುಪುಗಳು, ಉತ್ತಮ-ಕನಿಷ್ಠಗಳು ಮನದಾಳದಲ್ಲಿ ಹುದುಗಿದ ನಿಜಬಣ್ಣಗಳೆಲ್ಲ ಪರಸ್ಪರ ಸಂವಾದಗಳ ಮೂಲಕವೇ ಹೊರಬರಬೇಕು. ಪ್ರತಿಕ್ರಿಯೆಗಳು ಹೆಚ್ಚು ಹೆಚ್ಚು ಬಂದಷ್ಟೂ ಪರಸ್ಪರರ ಆಕಾಶ-ಪಾತಾಳಗಳಂಥ ಅಂತರಗಳು ಸ್ವಲ್ಪ ಕಡಿಮೆಯಾದಾವು. ಕರ್ನಾಟಕದ ಸರಿಸುಮಾರು ಎಲ್ಲ ಸಾಹಿತ್ಯಿಕ ಮತ್ತು ಇತರ ಪತ್ರಿಕೆಗಳಲ್ಲಿ ಶ್ರೀ ಡಿ. ಎಸ್. ನಾಗಭೂಷಣರ ಲೇಖನ, ಪ್ರತಿಕ್ರಿಯೆ, ಪತ್ರಸಂವಾದ ಪ್ರಕಟವಾಗುತ್ತಿರುತ್ತವೆ. ಅವುಗಳನ್ನು ಅಲ್ಲಲ್ಲಿ ಓದಲು ಸಾಧ್ಯವಾಗದವರಿಗೆ ಇಲ್ಲಿ ಒಂದೆಡೆ ಲಭ್ಯವಾಗಿವೆ.

**ಅಮ್ಮ ಬರುತ್ತಾಳೆ** (ಸಣ್ಣ ಕಥೆಗಳು)

*ಭಾರತೀ ಕಾಸರಗೋಡು*

**ಪುಟ : iv + ೧೩೯** **ಬೆಲೆ : ರೂ. ೭೫**

**ಹೇಮಂತ ಸಾಹಿತ್ಯ,** ನಂ. ೯೭೨-ಸಿ, ೪ನೇ 'ಇ' ಬ್ಲಾಕ್, ರಾಜಾಜಿನಗರ, ಬೆಂಗಳೂರು - ೫೬೦ ೦೧೦




ಕಥೆಗಳು ಅರಳುವುದು, ನಿತ್ಯದ ಬದುಕಿನ ಆಸುಪಾಸಿನಲ್ಲೇ. ಅನುಭವಗಳನ್ನು ಬಿಟ್ಟು ಕಥೆಗಳಿರುವುದಿಲ್ಲ. ನಮ್ಮ ವ್ಯವಸ್ಥೆ ಎಲ್ಲ ರೀತಿಯ ಕಥೆಗಳನ್ನು ಹುಟ್ಟುಹಾಕಿ ತನ್ನ ಪಾಡಿಗೆ ತಾನಿರುತ್ತದೆ. ಕೌಟುಂಬಿಕ ಹಿನ್ನೆಲೆಯಲ್ಲಿ ನಡೆವ ಘಟನೆಗಳನ್ನಾಧರಿಸಿ ಅವನ್ನು ಭಾರತಿ ಕಾಸರಗೋಡು ಮನೋಜ್ಞವಾಗಿ ನಿರೂಪಿಸುತ್ತಾರೆ. ಇವು ಮನದಾಳಕ್ಕಿಳಿದು ಬಹುಕಾಲ ಕಾಡುವ, ಮರೆಯಲಾಗದ ಕಥೆಗಳಾಗಿ ನಮ್ಮೊಂದಿಗೆ ಇದ್ದು, ಮುಂದೆ ನಾವು ಎದುರಿಸುವ ಯಾವುದೋ ಸಂದರ್ಭದಲ್ಲಿ ''ನಮ್ಮ ಗುರುತಾಯಿತೆ ?'' ಎನ್ನುವಂತೆ ಧುತ್ತೆಂದು ಎದುರಿಗೆ ಬಂದು ಕೇಳುತ್ತವೆ. 'ಅಮ್ಮ ಬರುತ್ತಾಳೆ...' ಹಾಗೂ 'ನಾಳೆಯು ನನ್ನದೇ' ಈ ಎರಡು ಕಥೆಗಳು ಓದಿ ಮರೆಯುವಂಥವು ಅಲ್ಲವೇ ಅಲ್ಲ! ಇಲ್ಲಿನ ಚಿಂತನೆಗಳಲ್ಲಿ ಸ್ತ್ರೀಯರ ಅಸಹಾಯಕತೆಗೆ ಮಿಡಿಯುವ ಮನಸ್ಸೊಂದು ಮೇಲುಗೈ ಪಡೆದಿದೆ. ಇಲ್ಲಿನ ಕಥೆಗಳಲ್ಲಿ ಎಲ್ಲೂ ಕೃತಕತೆಯಾಗಲೀ ಅನಗತ್ಯವೆನಿಸುವ ಅತಿರಂಜಕತೆಯಾಗಲೀ ನುಸುಳಿಲ್ಲ. ಪ್ರತಿಯೊಂದು ಕಥೆಯೂ ತನ್ನ ದಾರಿಯಲ್ಲಿ ತನ್ನ ಗಂಭೀರತೆಗೆ ತಕ್ಕಂತೆ ಹೆಜ್ಜೆಹಾಕುತ್ತ ತನ್ನತನವನ್ನಷ್ಟೇ ಉಳಿಸಿಕೊಂಡಿದೆ. ಬಾಳಿನಲ್ಲಿ ಧೈರ್ಯ ಕಳೆದುಕೊಂಡವರಿಗೆ ಇಲ್ಲಿನ ಕಥೆಗಳಲ್ಲಿ ಬರುವ ಕೆಲವು ಮಾತುಗಳು ತುಂಬ ಚೆನ್ನಾಗಿ ಪಾಠ ಹೇಳಬಲ್ಲವು.

## ಪಥಗೀತೆ (ಪಥೇರ್ ಪಾಂಚಾಲಿ)

*ಬಂಗಾಲಿ ಮೂಲ : ವಿಭೂತಿಭೂಷಣ ವಂದ್ಯೋಪಾಧ್ಯಾಯ;*

*ಕನ್ನಡಕ್ಕೆ : ಜಿ. ಜೆ. 'ಹರಿಜಿತ್'*

**ಪುಟ : ೩೪೪** **ಬೆಲೆ : ರೂ. ೨೫೦**

**ಸಪ್ತಲಾ ಪ್ರಕಾಶನ,** ಪೋಸ್ಟ್ ಬಾಕ್ಸ್ ನಂ. ೮೫೧೭, ಬೆಂಗಳೂರು - ೫೬೦ ೦೮೫

*ಬಂಗಾಲಿ ಕಾದಂಬರಿ ಪಥೇರ್ ಪಾಂಚಾಲಿಯ ಹಿಂದಿ ಅನುವಾದವನ್ನೋದಿ ೫೩ ವರ್ಷಗಳ ಹಿಂದೆ ಅದನ್ನು ಕನ್ನಡಕ್ಕೆ ಅನುವಾದಿಸಿದವರು ಜಿ. ಜೆ. ಹರಿಜಿತ್. ಆದರೆ ಪ್ರಕಟಣೆಗೆ ಅಡ್ಡಿಯಾದದ್ದು ಕಾಪಿರೈಟ್ ! ಅಷ್ಟೊಂದು ದೀರ್ಘಕಾಲ ಹಸ್ತಪ್ರತಿಯನ್ನು ಜೋಪಾನ ವಾಗಿಟ್ಟು ಪ್ರಕಟಿಸಬೇಕೆಂಬ ಉತ್ಕಟೇಚ್ಛೆಯಿರಬೇಕೆಂದರೆ ಅದು ಕಾದಂಬರಿಯ ಮಹತ್ವವನ್ನು ತಿಳಿಸುತ್ತದೆ. ಈ ಕೃತಿ, ಸತ್ಯಜಿತ್ ರೇ ನಿರ್ದೇಶನದ ಇದೇ ಹೆಸರಿನ ಚಲನಚಿತ್ರ ಅಂದು ಜಗತ್ತಿನಾದ್ಯಂತ ಪ್ರಸಿದ್ಧಿ ಹೊಂದಿತ್ತು. ಇಲ್ಲಿ ವರ್ಣನೆಗೊಂಡ ಜನಜೀವನ ಸುಮಾರು ನೂರು ವರ್ಷಗಳಷ್ಟು ಹಿಂದಿನದು. ಇಂದಿನ ಯಾವುದನ್ನೂ ಕಲ್ಪಿಸಿಕೊಳ್ಳ ಲಾರದ ಮುಗ್ಧಕಾಲವದು. ಜೀವನದಲ್ಲಿ ಅತಿಯಾದ ನಿರೀಕ್ಷೆ, ಸ್ಪರ್ಧೆ, ಸಾಧಿಸಲಾಗದ ಛಲ ಗಳೇನೂ ಇಲ್ಲದ, ಬದುಕನ್ನು ಬಂದಂತೆ ಸ್ವೀಕರಿಸುವ, ಪ್ರಕೃತಿಯ ನೆರಳಲ್ಲಿ ತಣ್ಣನೆ ಬಾಳುವ ಸುಂದರ ಪಾತ್ರ ಚಿತ್ರಣ. ಇಲ್ಲಿ ಸೋಲು ಗೆಲವುಗಳ ಪ್ರಶ್ನೆಗಳಿಲ್ಲ. ಅಂದಿನ ಬಂಗಾಳದ ಬದುಕಿನ ಅನಾವರಣ. ಎಲ್ಲ ವರ್ಗದ ಸಂಸಾರಗಳ ಸ್ಥಿತಿಗಳು, ಮಾನವ ನಿರ್ಮಿತ ಅಂತಸ್ತು*




*ಜೊತೆಗೇ ಪುಟ್ಟ ಮಕ್ಕಳಾದ ದುರ್ಗಿ ಹಾಗೂ ಅಪೂ ಎಂಬ ಈ ಕಥೆಯ ಜೀವಾಳವಾದ ಮುಗ್ಧ ಸಂವೇದನಾಶೀಲ ಪಾತ್ರಗಳು ಬಹುಕಾಲದವರೆಗೂ ಕಾಡುವಂಥವು. ಇಂಥ ಮಕ್ಕಳನ್ನು ಹೀಗೆಯೇ ಇರಗೊಡುವ ಸಂಸ್ಕೃತಿ ನಮ್ಮದು. ಹಿಂದೆಯೇ ಈ ಕಾದಂಬರಿಯ ಕನ್ನಡ ಅನುವಾದವೊಂದು ನೇರವಾಗಿ ಬಂಗಾಳಿ ಯಿಂದ ಮಾಡಲ್ಪಟ್ಟಿತ್ತು. ಈಗ ಹಿಂದಿಯಿಂದ ಮರು ಭಾಷಾಂತರ ಹೊಂದಿದೆ. ಎರಡನ್ನೂ ತುಲನೆ ಮಾಡಿ ನೋಡುವ ಅಗತ್ಯವಿಲ್ಲವಾದರೂ ಸಹಜವಾಗಿಯೇ ಓದುಗರು ಹಿಂದಿನ ಅನುವಾದವನ್ನು ಹೆಚ್ಚು ಆಪ್ತವಾಗಿ ಕಾಣುವ ಸಂಭವವೇ ಹೆಚ್ಚು.*

## ಭೂ ಸ್ವಾಧೀನದ ಸುತ್ತಾ

*ಸಿ. ಯತಿರಾಜು*

**ಪುಟ : iv + ೭೬ = ೮೦** **ಬೆಲೆ : ರೂ. ೨೫**

**ಧರಣಿ ಮಂಡಲ ಮತ್ತು ಜನಸಂಗ್ರಾಮ ಪರಿಷತ್ತು,**
**ಕರ್ನಾಟಕ,** ಕಾಳಿದಾಸ ಪದವಿಪೂರ್ವ ಕಾಲೇಜು ಹತ್ತಿರ,
ಶಿರಾ ಗೇಟ್, ಕಾಳಿದಾಸ ನಗರ, ತುಮಕೂರು - ೫೭೨ ೧೦೬

*''ಒಂದು ನಾಯಿಯನ್ನು ಕೊಲ್ಲಬೇಕೆಂದರೆ ಅದಕ್ಕೆ ಹುಚ್ಚುನಾಯಿ ಯೆಂದು ಹೆಸರಿಟ್ಟು ಕೊಲ್ಲು'' ಈ ಪುಸ್ತಕದಲ್ಲೊಂದು ಕಡೆ ಬರುವ ಮಾತೊಂದು ಇಂದಿನ ಸರ್ಕಾರಗಳ ಮಾತೇ ಆಗಿರಬಹುದೇ ? ಸಾವಿರಾರು ಎಕರೆ ಗಳಷ್ಟು ಕೃಷಿಯೋಗ್ಯ ಭೂಮಿಯನ್ನು ಬರಡು ಭೂಮಿಯೆಂದು ಘೋಷಿಸಿ ರೈತರಿಂದ ಸ್ವಾಧೀನಪಡಿಸಿಕೊಂಡು ವಿದೇಶಿ ಬಂಡವಾಳ ಹೂಡಿಕೆದಾರರಿಗೆ ನೀಡುವ ಮನೆಮುರುಕ ಸರ್ಕಾರ ಯಾರನ್ನು ಉದ್ಧರಿಸಲು ಹೊರಟಿದೆ ? ಕೃಷಿಗೆ ಹೆಚ್ಚಿನ ಆದ್ಯತೆ ನೀಡಿ ರೈತನ ಕೈಹಿಡಿದೆತ್ತಿ ಆಸರೆ ನೀಡಬೇಕಾಗಿದ್ದ ನಮ್ಮ ಸರ್ಕಾರಗಳು ಮಾಡುತ್ತಿರುವುದೇನು ? ಜಾಗತಿಕ ಬಂಡವಾಳ ಹೂಡಿಕೆದಾರರ ಸಮಾವೇಶಗಳನ್ನೇ ಹಬ್ಬಗಳ ರೀತಿಯಲ್ಲಿ ಏರ್ಪಡಿಸಿ ಪರೋಕ್ಷವಾಗಿ ರೈತನ ಕೊರಳಿಗೆ ನೇಣಿನ ಕುಣಿಕೆ ಬಿಗಿಯುತ್ತಿರುವ ಸರ್ಕಾರ ನಮಗೆ ಬೇಕೆ ? ಬೃಹತ್ ಉದ್ಯಮ, ವ್ಯಾಪಾರ ಮಳಿಗೆಗಳೆಂಬ ದೊಡ್ಡ ಮಾಲ್‌ಗಳು, ಗಣಿಗಾರಿಕೆ – ಮುಂತಾದವನ್ನು ನಿರ್ಮಿಸಲು ನಮ್ಮ ಭೂಮಿಯನ್ನು ಗುತ್ತಿಗೆ ಆಧಾರದ ಮೇಲೆ ನೀಡಲಾಗುತ್ತದೆ. ಅಭಿವೃದ್ಧಿಶೀಲ ದೇಶಗಳಲ್ಲಿ ಹಣ ಹೂಡಲು ಜಗತ್ತಿನ ಶ್ರೀಮಂತರೆಲ್ಲ ತುದಿಗಾಲ ಮೇಲೆ ನಿಂತಿದ್ದಾರೆ. ಅವರಿಗನುಕೂಲವಾದ ಕಾನೂನುಗಳನ್ನು ಮಾಡಲಾಗುತ್ತದೆ. ಪ್ರತಿಭಟಿಸುವ ಚೈತನ್ಯವಿಲ್ಲದ ಹಳ್ಳಿಜನರು ಕೂಲಿ ಹುಡುಕಿಕೊಂಡು ನಗರಗಳತ್ತ ಮುಖ ಮಾಡಬೇಕಿದೆ. ಭೂಮಿ ನಿಜವಾಗಿ ಯಾರದ್ದು ? ಹಣವುಳ್ಳ ಜನರು ಹಣಬಿತ್ತಿ ಹಣದ ಬೆಳೆ ತೆಗೆಯುವವರದ್ದೋ ? ಸರ್ಕಾರದ್ದೋ ? ಧಾನ್ಯ ಬೆಳೆವ ರೈತನದೊ ? ಇಂದಿನ ಜ್ವಲಂತ ಸಮಸ್ಯೆಯೊಂದನ್ನು ಇಲ್ಲಿ ವಿವರವಾಗಿ ಪರಿಚಯಿಸಿ ಎಚ್ಚರಿಸಲಾಗಿದೆ.*

**– ಇಂದಿರಾಕುಮಾರಿ**

*೩೪/೧೧, ೨ನೇ ಕ್ರಾಸ್, ಬಾಂಬೆ ಡೈಯಿಂಗ್ ಸಮೀಪ, ಯಶವಂತಪುರ, ಬೆಂಗಳೂರು - ೨೨*

## ಸಾದರ ಸ್ವೀಕಾರ

**ಇತಿಹಾಸ ದರ್ಪಣ** (ತ್ರೈಮಾಸಿಕ) *ವಿವಿಧ ಲೇಖಕರು*
**ಪುಟ : ೬೮** **ಬೆಲೆ : ಬಿಡಿ ಪ್ರತಿ ರೂ. ೩೦**
**ಇತಿಹಾಸ ದರ್ಪಣ,** ನಂ. ೩೩ಎ, ಐಟಿಐ ಕಾಲೇಜ್ ಹತ್ತಿರ, ಕೆಂಪೇಗೌಡ ನಗರ, ವಿಶ್ವನೀಡಂ ಅಂಚೆ, ಬೆಂಗಳೂರು - ೯೧

**ಜ್ಯೋತಿಷದ ಪಂಚಮುಖ ದರ್ಶನ** ಎ. ಎಸ್. ನಟರಾಜ್
**ಪುಟ : ೮೪** **ಬೆಲೆ : ರೂ. ೬೦**

**ಆತ್ಮ–ಪುನರ್ಜನ್ಮಗಳ ಅಂತರಂಗ** ಎ. ಎಸ್. ನಟರಾಜ್
**ಪುಟ : ೮೪** **ಬೆಲೆ : ರೂ. ೬೦**
ಮೇಲಿನ ಎರಡು ಕೃತಿಗಳ ಪ್ರಕಾಶಕರು
**ರಾಜ್ ವೈಚಾರಿಕ ವೇದಿಕೆ (ರಿ),** ನಂ. ೪೩, ರೋಹಿಣಿ, ೫ನೇ ಮುಖ್ಯರಸ್ತೆ, ಪದ್ಮನಾಭನಗರ, ಬೆಂಗಳೂರು - ೭೦

**ಹಂಸಗೀತೆ** (ಪ್ರೊ|| ಎಚ್. ಆರ್. ದಾಸೇಗೌಡರಿಗೆ ಬರಹ ನಮನ) **ಕೊಡುಗೆ :** *ಸಿವಿಜಿ ಅಕಾಡೆಮಿ (ರಿ.) ಬೆಂಗಳೂರು*
**ಪುಟ : ೧೦೦** **ಬೆಲೆ : ನಮೂದಿಸಿಲ್ಲ**
**ಪ್ರಕಾಶಕರು, ಕರ್ನಾಟಕ ಗಾಂಧೀ ಸ್ಮಾರಕ ನಿಧಿ,** ಗಾಂಧಿಭವನ, ಕುಮಾರ ಪಾರ್ಕ್ ಪೂರ್ವ, ಬೆಂಗಳೂರು - ೫೬೦ ೦೦೧

**ಮುಗಿಲ ಮರೆಯ ಮಿಂಚು** (ವೈಚಾರಿಕ ಬರಹಗಳ/ವ್ಯಕ್ತಿ ಚಿತ್ರಗಳ ಸಂಕಲನ) *ವಿಶ್ವಾರಾಧ್ಯ ಸತ್ಯಂಪೇಟೆ*
**ಪುಟ : ೧೨೦** **ಬೆಲೆ : ರೂ. ೬೦**
**ಪ್ರಕಾಶಕರು, ಅಗ್ನಿ ಅಂಕುರ ಪತ್ರಿಕೆ ಪ್ರಕಾಶನ,** ಬಸವ ಮಾರ್ಗ ರಸ್ತೆ, ಶ್ರೀ ಚರಬಸವೇಶ್ವರ ಕಾಲನಿ, ಶಹಾಪುರ - ೫೮೫ ೨೨೩, ಯಾದಗಿರ (ಜಿಲ್ಲೆ)

**ದೀಪಾಲಿ ನಕ್ಕಳು** (ಸಾಮಾಜಿಕ ಕಾದಂಬರಿ) *ಬಿ. ಪಿ. ಶಿವಾನಂದರಾವ್*
**ಪುಟ : ೧೬೮** **ಬೆಲೆ : ರೂ. ೧೩೦**
**ಕಣ್ವ ಪಬ್ಲಿಕೇಷನ್ಸ್ ಪ್ರೈವೇಟ್ ಲಿಮಿಟೆಡ್,** ನಂ. ೭೭೭, ಗ್ರೌಂಡ್ ಫ್ಲೋರ್, ೭ನೇ ಅಡ್ಡರಸ್ತೆ, ೫ನೇ ಮುಖ್ಯರಸ್ತೆ, ಎಂ. ಸಿ. ಲೇಔಟ್, ವಿಜಯನಗರ, ಬೆಂಗಳೂರು - ೪೦

**ವಚನ ನಿಚಯ** *ಸಿ. ಪಿ. ಕೆ.*
**ಪುಟ : ೪೮** **ಬೆಲೆ : ರೂ. ೨೦**

**ಜನ್ನನ ಯಶೋಧರ ಚರಿತ** *ಸಂಪಾದನ ಮತ್ತು ಗದ್ಯಾನುವಾದ : ಸಿ. ಪಿ. ಕೆ.*
**ಪುಟ : ೧೫೨** **ಬೆಲೆ : ರೂ. ೭೦**
ಮೇಲಿನ ಎರಡು ಕೃತಿಗಳ ಪ್ರಕಾಶಕರು
**ಪ್ರಕಾಶಕರು, ನಾಗಾರ್ಜುನ ಎಂಟರ್‌ಪ್ರೈಸಸ್,** ನಂ. ೫೮, ಅಕ್ಕಮಹಾದೇವಿ ರಸ್ತೆ, ದಾವಣಗೆರೆ

**ಚಿಲುಮೆ** (ಚಿಂತನ ಬರಹಗಳು) *ಸಿ. ಪಿ. ಕೆ.*
**ಪುಟ : ೧೦೨** **ಬೆಲೆ : ರೂ. ೪೦**
**ಕನ್ನಡ ಸಾಹಿತ್ಯ ಪರಿಷತ್ತು,** ಪಂಪಮಹಾಕವಿ ರಸ್ತೆ, ಚಾಮರಾಜಪೇಟೆ, ಬೆಂಗಳೂರು - ೫೬೦ ೦೧೮

**ಮುಕ್ತಾಂಜಲಿ** *ಸಿ. ಪಿ. ಕೆ.*
**ಪುಟ : ೨೦೨** **ಬೆಲೆ : ರೂ. ೧೨೦**
**ರೂಪ ಪ್ರಕಾಶನ,** ನಂ. ೨೬, ೧೧ನೆಯ ಬ್ಲಾಕ್, ಜೆಎಸ್‌ಎಸ್ ಬಡಾವಣೆ, ನಜರ್‌ಬಾದ್ ಮೊಹಲ್ಲಾ, ಮೈಸೂರು - ೧೧

**ಅಯ್ಯಂಗಾರಿಯ ಹತ್ತುಪೈಸೆಯ ಬ್ರೆಡ್ಡು** (ಕವಿತೆಗಳು) *ಸೈಫ್ ಜಾನ್ಸೆ ಕೊಟ್ಟೂರು*
**ಪುಟ : ೮೬** **ಬೆಲೆ : ರೂ. ೮೦**
**ಪಲ್ಲವ ಪ್ರಕಾಶನ,** ಚನ್ನಪಟ್ಟಣ, ವಯಾ ಎಮ್ಮಿಗನೂರು, ಬಳ್ಳಾರಿ - ೫೮೩ ೧೧೩

**ತಿನ್ನಲಾಗದ ಬಿಸ್ಕತ್ತು, ನುಂಗಲಾಗದ ಟ್ಯಾಬ್ಲೆಟ್ಟು** (ಇಂಟರ್‌ನೆಟ್ ಒಳಗೊಂದು ಇಣುಕುನೋಟ) *ಟಿ. ಜಿ. ಶ್ರೀನಿಧಿ*
**ಪುಟ : ೧೨೦** **ಬೆಲೆ : ರೂ. ೮೫**

**ಒಡಲಾಳದ ತಳಮಳ** (ಒಂದಿಷ್ಟು ಸಣ್ಣ ಕಥೆಗಳು) *ಕೇಶವ ಕುಡ್ಲ*
**ಪುಟ : ೧೭೨** **ಬೆಲೆ : ರೂ. ೯೫**

**ಜನಾರಣ್ಯ** (ಕವನ ಸಂಕಲನ) *ಶಂಕರ್*
*ಕನ್ನಡಕ್ಕೆ : ಗೀತಾ ವಿಜಯಕುಮಾರ್*
**ಪುಟ : ೨೬೭** **ಬೆಲೆ : ರೂ. ೧೬೫**
ಮೇಲಿನ ಮೂರು ಕೃತಿಗಳ ಪ್ರಕಾಶಕರು
**ಆಕೃತಿ ಪುಸ್ತಕ,** ನಂ. ೩೧/೧, ೧೨ನೇ ಮುಖ್ಯರಸ್ತೆ, ೩ನೇ ಬ್ಲಾಕ್, ರಾಜಾಜಿನಗರ, ಬೆಂಗಳೂರು - ೫೬೦ ೦೧೦

**ಮೌನರಾಗ** (ಕವನ ಸಂಕಲನ) *ದೇವೇಂದ್ರ ಹುಡಾ*
**ಪುಟ : ೬೪** **ಬೆಲೆ : ರೂ. ೫೦**

**ಕೊರಗು** (ಕವನ ಸಂಕಲನ) *ಸುಜಾತಾ ಚಲವಾದಿ*
**ಪುಟ : ೫೬** **ಬೆಲೆ : ರೂ. ೫೦**

**ಬುದ್ಧ ಬೆಳಕು** (ಕವನ ಸಂಕಲನ) *ಡಾ|| ಅರ್ಜುನ ಗೊಳಸಂಗಿ*
**ಪುಟ : ೪೮** **ಬೆಲೆ : ರೂ. ೫೦**

**ಬುಡ್ಗ ಜಂಗಮರು** (ಸಂಶೋಧನೆ) *ಡಾ|| ಅರ್ಜುನ ಗೊಳಸಂಗಿ*
**ಪುಟ : ೫೫** **ಬೆಲೆ : ರೂ. ೫೦**
ಮೇಲಿನ ನಾಲ್ಕು ಕೃತಿಗಳ ಪ್ರಕಾಶಕರು
**ದಲಿತ ಸಾಹಿತ್ಯ ಪರಿಷತ್ತು,** ರಾಜ್ಯ ಘಟಕ, ಗದಗ, ಹುಡ್ಕೊ ಕಾಲನಿ, ಹುಲಕೋಟಿ - ೫೮೨ ೨೦೫, ಜಿಲ್ಲೆ ಗದಗ

**ಚಿನ್ನದ ಕಳಶಗಳು** (೩೦೮ ಮಹನೀಯರುಗಳ ಕಿರು ಪರಿಚಯ ಲೇಖನಗಳು) *ಸಿ. ಎನ್. ಕೃಷ್ಣಮೂರ್ತಿ*
**ಪುಟ : xxii + ೭೭೦** **ಬೆಲೆ : ರೂ. ೪೦೦**
**ಭಾಗ್ಯಲಕ್ಷ್ಮೀ ಪ್ರಕಾಶನ,** ೮೭, ೩ನೇ ಕ್ರಾಸ್, ೪ನೇ ಬ್ಲಾಕ್, ಬನಶಂಕರಿ ೩ನೇ ಸ್ಟೇಜ್, ೩ನೇ ಫೇಸ್, ಬೆಂಗಳೂರು - ೮೫

# ನಕ್ಷತ್ರಗಳ ನಡುವೆ ಶುಕ್ರ




ತಿಂಗಳ ಆರಂಭದಲ್ಲಿ ನೆತ್ತಿಯ ಮೇಲೆ ಅರ್ಧಚಂದ್ರ ಕಾಣುತ್ತದೆ. ಅಂದರೆ ಶುಕ್ರಗ್ರಹದಿಂದ ದೂರ ಎನ್ನಬಹುದು. ಶುಕ್ರ ದಿನೇ ದಿನೇ ಮೇಲೆ ಏರುತ್ತಿದೆ ಅನ್ನಿಸುತ್ತದೆ. ಅದನ್ನು ೨ರಿಂದ ೬ ತಾರೀಖುಗಳ ಸಂಜೆ ಗಮನವಿಟ್ಟು ನೋಡಿ. ದುರ್ಬೀನು ಇದ್ದರೆ ಇನ್ನೂ ಒಳ್ಳೆಯದು. ಕೃತ್ತಿಕಾ ನಕ್ಷತ್ರಗುಚ್ಛದ ಮೂಲಕ ಅದು ಈ ಮೂರು ದಿನಗಳಲ್ಲಿ ಹಾದುಹೋಗುವುದು. ಕ್ಯಾಮೆರಾ ಇದ್ದವರು ಚಿತ್ರ ತೆಗೆಯುವುದನ್ನು ಪ್ರಯತ್ನಿಸಲು ಇದು ಒಳ್ಳೆಯ ಅವಕಾಶ. ಹೆಚ್ಚು ಎಕ್ಸ್‌ಪೋಷರ್ ಕೊಟ್ಟು ತೆಗೆದಲ್ಲಿ ಆ ಗುಚ್ಛದ ಕ್ಷೀಣ ನಕ್ಷತ್ರಗಳು ಜೊತೆಗೆ ಪ್ರಖರ ನಕ್ಷತ್ರಗಳ ಸುತ್ತಲೂ ವ್ಯಾಪಿಸಿರುವ ಕ್ಷೀಣ ನೆಬ್ಯುಲಾ ಸಹ ಕಾಣುವುದು ಸಾಧ್ಯ.

ಎರಡು ತಿಂಗಳ ಹಿಂದೆ ೨೬ರಂದು ಶುಕ್ರ ಮತ್ತು ಗುರು ಗ್ರಹಗಳ ನಡುವೆ ಚಂದ್ರ ಕಂಡಿತ್ತು. ಕಳೆದ ತಿಂಗಳು ೨೬ರಂದು ಗುರು ಮತ್ತು ಶುಕ್ರ ಸ್ಥಾನ ಅದಲು ಬದಲು ಮಾಡಿಕೊಂಡಿದ್ದವು. ಈ ತಿಂಗಳ ೨೬ರಂದು ಚಂದ್ರ ಮತ್ತು ಶುಕ್ರ ಎರಡೇ ಕಾಣುವುವು. ಗುರು ಇಲ್ಲ; ಅದು ದಿಗಂತದ ಅಂಚಿಗೆ ಸರಿಯುತ್ತಿದೆ. ತಿಂಗಳ ಕೊನೆಗೆ ಅದನ್ನು ಗುರುತಿಸುವುದೇ ಕಷ್ಟವಾಗ ಬಹುದು. ಮುಂದಿನ ತಿಂಗಳಲ್ಲಿ ಅದರ ಯುತಿ ಅಂದರೆ ಸೂರ್ಯನೊಡನೆ ಸಮಾಗಮ. ಅದಾದ ನಂತರ ಅದು ಬೆಳಗಿನಜಾವ ಕಾಣುವುದು.

ಸಂಜೆ ಕಾಣುವ ಇನ್ನೊಂದು ಗ್ರಹ ಮಂಗಳ. ಪೂರ್ವದಲ್ಲಿ ಕೆಂಪು ಬಣ್ಣಕ್ಕೆ ಪ್ರಕಾಶಮಾನ ವಾಗಿ ಕಾಣುವ ಇದನ್ನು ಗುರುತಿಸುವುದು ಸುಲಭ. ಇದುವರೆಗೂ ಹಿನ್ನಡೆಯುತ್ತಿದ್ದ ಇದು ೧೩ರಂದು ತಟಸ್ಥವಾಗುತ್ತದೆ. ಆಮೇಲೆ ಅದರ ನೇರಚಲನೆ ಮುಂದುವರೆಯುತ್ತದೆ. ಹಿನ್ನಡೆಯಲ್ಲಿರುವ ಇನ್ನೊಂದು ಗ್ರಹ ಶನಿ ಸುಮಾರು ಏಳು ಗಂಟೆಯ ಹೊತ್ತಿಗೆ ಪೂರ್ವದಲ್ಲಿ ಉದಯಿಸುತ್ತದೆ. ಹುಣ್ಣಿಮೆಯ ಮರುದಿನ ಚಂದ್ರನ ಪಕ್ಕದಲ್ಲಿ ಕಾಣುತ್ತದೆ. ೧೫ರಂದು ಅದರ ವಿಯುತಿ. ಅಂದರೆ ಸೂರ್ಯಾಸ್ತವಾಗುವಾಗಲೇ ಉದಯಿಸುತ್ತದೆ. ರಾತ್ರಿ ಇಡೀ ನೋಡಲು ಸಿಗುತ್ತದೆ. ಅದರ ಉಂಗುರಗಳನ್ನು ನೋಡಲು ಮತ್ತು ಎಲ್ಲರಿಗೆ ತೋರಿಸಲು ಇದು ಒಳ್ಳೆಯ ಅವಕಾಶ.


೩ರಂದು ಕೃತ್ತಿಕಾಗುಚ್ಛದ ನಡುವೆ ಶುಕ್ರ

ಬುಧಗ್ರಹವನ್ನು ನೋಡುವ ಅವಕಾಶ ೧೯ರಂದು ಬೆಳಗಿನ ಜಾವ ಇದೆ. ಅಂದು ಗರಿಷ್ಠ ಕೋನೋನ್ನತಿ ಉಂಟು. ೩ರಂದು ಅದರ ಹಿನ್ನಡೆ ಮುಕ್ತಾಯವಾಗುತ್ತದೆ. ಮುಂದಿನ ತಿಂಗಳು ಅದು ಸೂರ್ಯನ ಆಚೆ ಬದಿಯಿಂದ ಹಾದುಬಂದಾಗ ಪುನಃ ಸಂಜೆ ಕಾಣತೊಡಗುತ್ತದೆ.

ನೆತ್ತಿಯ ಮೇಲೆ ಕಾಣುವ ಪುಂಜಗಳೆಂದರೆ ಮಹಾವ್ಯಾಧ (ಒರೈಯನ್), ಮಿಥುನ, ಪಾರ್ಥ (ಆರಿಗಾ). ಇದಲ್ಲದೆ ವೃಷಭ, ಕಟಕ, ಸಿಂಹ, ಕನ್ಯಾ ಈ ರಾಶಿಗಳು ಮತ್ತು ಮಹಾಶ್ವಾನ, ಸಪ್ತರ್ಷಿ ಮಂಡಲ, ನೌಕಾಪಟ ಇವುಗಳನ್ನೂ ಗುರುತಿಸಬಹುದು.

ಇದು ಚೈತ್ರಮಾಸವಾದದ್ದರಿಂದ ಈ ತಿಂಗಳ ಹುಣ್ಣಿಮೆಯ ಚಂದ್ರ ಚಿತ್ರಾ ನಕ್ಷತ್ರದ ಪಕ್ಕಕ್ಕೆ ಕಾಣಬೇಕು. ಆದರೆ ಹುಣ್ಣಿಮೆಯ ಮರುದಿವಸ ಚಿತ್ರಾ ಜೊತೆಗೂಡುತ್ತದೆ. ಈ ಬಗೆಯ ಸಣ್ಣ ವ್ಯತ್ಯಾಸಗಳೇ ಅಧಿಕಮಾಸ ಮುಂತಾದ ತಿದ್ದುಪಡಿಗಳಿಗೆ ಕಾರಣವಾದವು.




ಹುಣ್ಣಿಮೆಯ ಮರುದಿನ ಚಂದ್ರ-ಭೂಮಿ ದೂರ ಕನಿಷ್ಠ. ಆದ್ದರಿಂದ ''ದೊಡ್ಡ'' ಚಂದ್ರ ಕಾಣಬಹುದೆಂಬ ಗುಲ್ಲು ಏಳಬಹುದು. ಭರತ-ಇಳಿತಗಳು ಬೇರೆ ಹುಣ್ಣಿಮೆಗಿಂತ ಜೋರು ಎಂಬುದನ್ನು ಕರಾವಳಿ ಯವರು ಗುರುತಿಸಬಲ್ಲರು. ಹಾಗೆಯೇ ಅಮಾವಾಸ್ಯೆಯಂದು ಏನೂ ಜೋರಿಲ್ಲ ಎನ್ನಬಹುದು. ಏಕೆಂದರೆ ಭೂಮಿ-ಚಂದ್ರ ಅಂತರ ಅಂದು ಗರಿಷ್ಠ.

ಈ ತಿಂಗಳಲ್ಲಿ ಲಿರಿಡ್ಸ್ ಎಂಬ ಉಲ್ಕಾವೃಷ್ಟಿ ಇದೆ. ಲೈರಾ ಅಥವಾ ವೀಣಾ ಪುಂಜದ ವೇಗಾ (ಅಭಿಜಿತ್) ಎಂಬ ನಕ್ಷತ್ರದ ದಿಕ್ಕಿನಿಂದ ಹೊರಟುಬರುತ್ತಿರುವಂತೆ ಕಾಣುತ್ತವೆ. ಥ್ಯಾಚರ್ ಎಂಬ ಹೆಸರಿನ ಧೂಮಕೇತು ಉಳಿಸಿಹೋಗಿರುವ ಧೂಳು ಹೀಗೆ ಭೂಮಿಯ ಮೇಲೆ ಸುರಿಯುತ್ತದೆ. ಸಾಧಾರಣವಾಗಿ ೨೧ರಿಂದ ೨೩ರವರೆಗೆ ಬೆಳಗಿನ ಜಾವ ಕಾಣುತ್ತದೆ. ಈ ಬಾರಿ ಚಂದ್ರನ ಬೆಳಕೂ ಇರುವುದಿಲ್ಲ. ಕೆಲವೊಮ್ಮೆ ಗಂಟೆಗೆ ೧೦೦ ಉಲ್ಕೆಗಳೂ ಕಾಣುತ್ತವೆ. ಆದ್ದರಿಂದ ಕಾದು ನೋಡುವುದು ಒಳ್ಳೆಯದು.

**ಖಗೋಳ ದಿನಚರಿ**

| | |
|---|---|
| ೩- ೫ | ಶುಕ್ರ - ಕೃತ್ತಿಕಾ ಮೂಲಕ ಹಾದು ಹೋಗುವುದು* |
| ೬ | ಹುಣ್ಣಿಮೆ ನಡುರಾತ್ರಿಗೆ |
| ೭ | ಚಂದ್ರ, ಶನಿ ಮತ್ತು ಚಿತ್ರಾ ಪುಟ್ಟ ಗುಂಪು*; |
| | ಚಂದ್ರ - ಭೂಮಿ ನಡುವೆ ಕನಿಷ್ಠ ಅಂತರ |
| ೧೩ | ಚಾಂದ್ರಮಾಸದ ಕೊನೆಯ ಪಾದ - ಚಂದ್ರೋದಯ ನಡುರಾತ್ರಿಗೆ |
| ೧೫ | ಶನಿ ಗ್ರಹದ ವಿಯುತಿ |
| ೧೮ | ಮುಂಜಾವು ಬುಧಗ್ರಹದ ಗರಿಷ್ಠ ಕೋನೋನ್ನತಿ* |
| ೨೧ | ಅಮಾವಾಸ್ಯೆ ೧೨:೦೦ಕ್ಕೆ |
| ೨೨ | ಭೂಮಿ-ಚಂದ್ರ ನಡುವೆ ಗರಿಷ್ಠ ಅಂತರ |
| ೨೧- ೨೩ | ಲಿರಿಡ್ಸ್ ಉಲ್ಕಾವೃಷ್ಟಿ* |
| ೨೫ | ಚಂದ್ರ - ಶುಕ್ರ ಜೋಡಿ |

(* ಛಾಯಾಗ್ರಹಣಕ್ಕೆ ಉತ್ತಮ ಅವಕಾಶ)

**ಡಾ॥ ಬಿ. ಎಸ್. ಶೈಲಜಾ**
ಜವಾಹರ್‌ಲಾಲ್ ನೆಹರೂ ತಾರಾಲಯ, ಹೈಗ್ರೌಂಡ್ಸ್, ಬೆಂಗಳೂರು - ೫೬೦ ೦೦೧

# ಚಟ ಬೇಕು ಮನುಜಂಗೆ

ವಿ. ಶ್ರೀನಿವಾಸ

ಪೂರ್ಣಚಂದ್ರ ತೇಜಸ್ವಿಯವರ ಬಹಳಷ್ಟು ಕತೆಗಳಲ್ಲಿ ಕಡಿದಾಳು ಶಾಮಣ್ಣ ಒಂದು ಪಾತ್ರವಾಗಿ ಬರುತ್ತಾರೆ. ಅವರ 'ಅಣ್ಣನ ನೆನಪು' ಶಾಮಣ್ಣನ ನೆನಪು ಆಗಿದೆ ಅಂತ ಟೀಕೆ ಕೂಡ ಎದುರಿಸಬೇಕಾಯ್ತು. ಅದಿರ್ಲಿ, ವಿಚಾರ ಅದಲ್ಲ, ಹೀಗೆ ಕತೆ ಕಾದಂಬರಿಗಳ ಪಾತ್ರವಾದ ಕಡಿದಾಳು ಶಾಮಣ್ಣನವರು ಸಾಮಾನ್ಯ ನರಮನುಷ್ಯರ ಹಾಗೆ ನಮ್ಮೆದುರಿಗೆ ಓಡಾಡುವಾಗ, ಸಭೆ ಸಮಾರಂಭಗಳಲ್ಲಿ ಸಾಮಾನ್ಯ ಪ್ರೇಕ್ಷಕರಂತೆ ಕೂತಿದ್ದಾಗ ನನಗಂತೂ ಏನೋ ಒಂಥರ ಸೋಜಿಗವಾಗಿತ್ತು. ಕಡಿದಾಳು ಶಾಮಣ್ಣನವರು ತೇಜಸ್ವಿಯವರ ಕತೆ ಕಾದಂಬರಿಗಳ ಪಾತ್ರವಾದಂತೆ, ಇತ್ತೀಚೆಗೆ ನಾನು ಜೋಕೊಂದರ ಪಾತ್ರವಾದಂತಾಗಿ ನನಗೆ ವಿಚಿತ್ರ ಭಾವನೆಗಳೂ, ಗೊಂದಲಗಳೂ ಶುರುವಾಗಿಬಿಟ್ಟಿವೆ. ಆ ಪ್ರಸಂಗ ಹೀಗಿದೆ: ಇತ್ತೀಚೆಗೆ ಸಣ್ಣ ಪುಟ್ಟ ತೊಂದರೆಗಳ ಚೆಕಪ್‌ಗಾಗಿ ಡಾಕ್ಟರ್ ಬಳಿ ಹೋಗಿದ್ದೆ. ಅವರು ಮಾಮೂಲಿನಂತೆ ಚೆಕಪ್ ಎಲ್ಲ ಮುಗಿಸಿ, ''ನೀವು ಡ್ರಿಂಕ್ಸ್ ಕಡಿಮೆ ಮಾಡಬೇಕು'' ಅಂದ್ರು. ನಾನು ಕುಡಿಯೋದೇ ಇಲ್ಲ ಅಂದೆ. ''ಸಿಗರೇಟ್ ಬಿಟ್ಬಿಡಿ'' ಅಂದ್ರು. ನಾನು ಶುರುನೇ ಮಾಡ್ಕೊಂಡಿಲ್ಲ ಅಂದೆ. ''ಗುಟ್ಕ-ಗಿಟ್ಕ ?'' ಅಂದ್ರು. ಅಯ್ಯೋ ವಿಳೆದೆಲೆ, ಅಡಕೆ ಕೂಡ ಹಾಕಲ್ಲ ಎಂದೆ. ''ಕಾಫಿ/ಟೀ'' ಎಂದು ಕೇಳಿದರು. ದಿನಕ್ಕೊಂದೆರಡು ಬಾರಿ ಮಾತ್ರ ಎಂದೆ. ''ಹಾಗಾದ್ರೆ ಇನ್ನೂ ಯಾಕೆ ಬದುಕಿದ್ದೀರಿ/ಬದುಕಬೇಕು'', ಎಂದು ಬಾಯಿಬಿಟ್ಟು ಹೇಳಲಿಲ್ಲ. ಏಕೆಂದರೆ ಅವರು ನನ್ನನ್ನು ಒಂದು ವಿಚಿತ್ರ, ಅಪರೂಪದ ಪ್ರಾಣಿಯನ್ನು ನೋಡುವಂತೆ ನೋಡಿದ ನೋಟವೇ ಅದನ್ನು ಹೇಳುತ್ತಿತ್ತು. ಹೀಗೆ ಪೂರ್ ಜೋಕೊಂದರ ಪಾತ್ರದಂತಾದ ನಾನು ವಿಚಿತ್ರ ಭಾವನೆಗಳು, ಗೊಂದಲಗಳು, ತಳಮಳಗಳಿಂದ ಒದ್ದಾಡುತ್ತಿದ್ದೇನೆ.

ವ್ಯಕ್ತಿ ತಾನಾಗೇ ರೂಢಿಸಿಕೊಂಡ ಅಭ್ಯಾಸವು ಕ್ರಮೇಣ ಅವನ ನಿಯಂತ್ರಣಕ್ಕೊಳಪಡದೇ ಬಿಡಲಾರದಂತೆ ಮುಂದುವರಿಯುವ ಅಭ್ಯಾಸಕ್ಕೆ ಚಟ ಎನ್ನುವ ವ್ಯಾಖ್ಯಾನವಿದೆ. ಚಟಕ್ಕೂ, ಹವ್ಯಾಸಕ್ಕೂ, ಆಭಾಸಕ್ಕೂ ಅಂಥಾ ವ್ಯತ್ಯಾಸವೇನಿಲ್ಲದಿದ್ದರೂ, ಇವುಗಳನ್ನು ಬಹಳ ಸೂಕ್ಷ್ಮ ವ್ಯತ್ಯಾಸಗಳೊಂದಿಗೆ ಒಂದಕ್ಕೊಂದಕ್ಕೆ ಸಂಬಂಧವೇ ಇಲ್ಲವೇನೋ ಎಂಬಂತೆ ಎಚ್ಚರಿಕೆಯಿಂದ ಬಳಕೆ ಮಾಡುತ್ತೇವೆ. ಚಟವನ್ನು ಕೆಟ್ಟದ್ದೆಂದೂ, ಹವ್ಯಾಸವನ್ನು ಒಳ್ಳೆಯದೆಂದೂ ಬ್ಲಾಕ್ ಅಂಡ್ ವೈಟ್ ಮಾಡಿ ಬಳಸುತ್ತೇವೆ. ಆದರೆ ಕನ್ನಡ ರತ್ನಕೋಶದಲ್ಲಿ 'ಚಟ' ಎಂಬುದಕ್ಕೆ ಹವ್ಯಾಸ, ಚಾಳಿ ಎಂತಲೂ, 'ಹವ್ಯಾಸ' ಎಂಬುದಕ್ಕೆ ಚಟ, ಆಸಕ್ತಿ ಎಂದೂ ಅರ್ಥ ವಿವರಣೆ ನೀಡಿದ್ದಾರೆ. ಇದು ಸರಿ ಎಂಬುದೇ ನನ್ನ ಅಭಿಪ್ರಾಯ ಕೂಡ. ಕುಡಿತ, ಸಿಗರೇಟು, ಜೂಜಿನಂಥ ದುಶ್ಚಟಗಳಲ್ಲದಿದ್ದರೂ, ಬೇರೆಯವರಿಗೆ ಹಾನಿಯುಂಟು ಮಾಡದ ನಿರಪಾಯಕಾರಿ ಚಟಗಳು ಪ್ರತಿ ಮನುಷ್ಯರಿಗೂ ಇರುತ್ತವಲ್ಲವೇ ? ಉದಾಹರಣೆಗೆ ಉಪನ್ಯಾಸಕರುಗಳಿಗೆ ಯಾವುದಾದರೂ ಒಂದೆರಡು ಪದಗಳನ್ನು ಪದೇ ಪದೇ ಬಳಸುವ ಚಟವಿರುತ್ತದೆ. ವಿದ್ಯಾರ್ಥಿಗಳು ಪಾಠ ಕೇಳದಿದ್ದರೂ, ಲೆಕ್ಚರರು ಎಷ್ಟು ಬಾರಿ 'ಯು ನೋ', 'ಯು ಸೀ', 'ಆ್ಯಕ್ಚುಯಲಿ', 'ಇನ್ ಫ್ಯಾಕ್ಟ್' ಎಂಬ ಪದಗಳನ್ನು ಬಳಸಿದರು ಅಂತ ಎಣಿಸುತ್ತ ಕೂರುವುದು ಸಾಮಾನ್ಯ ಸಂಗತಿ.

ಇಂಗ್ಲಿಷಿನಲ್ಲಿ 'ಹ್ಯಾಬಿಟ್' ಎಂಬ ಪದವನ್ನು ಗುಡ್ ಹ್ಯಾಬಿಟ್/ಬ್ಯಾಡ್ ಹ್ಯಾಬಿಟ್ ಎಂಬುದಾಗಿ ವರ್ಗೀಕರಿಸಿ ಬಳಸುವರು. ಆದರೆ ಕನ್ನಡದಲ್ಲಿ ಚಟ ಎಂಬುದನ್ನು ಕೆಟ್ಟದ್ದು ಎಂಬರ್ಥದಲ್ಲಿಯೇ ಬಳಸುತ್ತೇವೆ. ಚಟ/ದುಶ್ಚಟ ಎಂದು ಬಳಸುತ್ತೇವೆಯೇ ಹೊರತು, ಕನ್ನಡದಲ್ಲಿ 'ಸು' ಚಟ ಎಂಬುದಿಲ್ಲ. ಕುಡಿತವನ್ನು ದುಶ್ಚಟ ಎನ್ನುತ್ತೇವೆ. ಅದೇ ಕುಡಿದು ಖಾಲಿ ಮಾಡಿದ ಬಾಟಲಿಗಳನ್ನು ಸಂಗ್ರಹಿಸಿ ಜೋಡಿಸಿಟ್ಟರೆ ಹವ್ಯಾಸವೆನ್ನುತ್ತೇವೆ. ಸಿಗರೇಟ್ ಸೇವನೆ ದುಶ್ಚಟ. ಆದರೆ ಖಾಲಿ ಸಿಗರೇಟ್ ಪ್ಯಾಕ್‌ಗಳನ್ನು ಸಂಗ್ರಹಿಸಿ ಅವುಗಳಿಂದ ನಾಯಿ, ಬುಟ್ಟಿ ಮುಂತಾದ ವಿನ್ಯಾಸಗಳನ್ನು ರಚಿಸುವುದು ಹವ್ಯಾಸ. ( ಈ ಹವ್ಯಾಸ/ಕಲೆ ಈಗ ಕಾಣೆಯಾಗಿದೆಯಲ್ಲ!) ಹಳೇ ನಾಣ್ಯ, ಸ್ಟ್ಯಾಂಪ್ ಇತ್ಯಾದಿಗಳ ಸಂಗ್ರಹ, ಚಾಲ್ತಿಯಲ್ಲಿ ಅದಕ್ಕೇನೂ ಬೆಲೆಯಿಲ್ಲದಿದ್ದರೂ ಹೆಚ್ಚಿನ ಬೆಲೆ ಕೊಟ್ಟು ಸಂಗ್ರಹಿಸಿಟ್ಟು ಕೊಳ್ಳುವುದು ಚಟವೆನ್ನಿಸಿಕೊಳ್ಳದೆ ಹವ್ಯಾಸವೆನಿಸಿ ಕೊಳ್ಳುತ್ತದೆ. ಆದರೆ ಇಂಥ ಹವ್ಯಾಸದವರ ಹೆಂಡತಿಯನ್ನು ಕೇಳಿ ನೋಡಿ. ''ಅಯ್ಯೋ, ನಮ್ಮನೆಯವರಿಗೊಂದು ಚಟ!'' ಎಂದು ಸ್ಪಷ್ಟವಾಗಿ ಹೇಳುತ್ತಾರೆ. ಹಲವರಿಗೆ




**'ಹೆಣ್ಣಿಗೆ ಹಠ ಇರಬಾರದು, ಗಂಡಿಗೆ ಚಟ ಇರಬಾರದು' ಎಂಬ ಮಾತೊಂದಿದೆ. ಈಗ ನಮ್ಮ ರಾಜಕಾರಣಿಗಳಿಗೆ ಇರುವುದು ಅಧಿಕಾರಕ್ಕಂಟಿ ಕೊಂಡಿರುವ ಹಠವೋ ? ಹಣ ಕೊಳ್ಳೆ ಹೊಡೆಯುವ ಚಟವೋ ? ಈ ರಾಜಕಾರಣಿಗಳೆಂಬುವವರಲ್ಲಿ ಕೆಲವರು ಮನುಷ್ಯರು ಎಂಬ ವರ್ಗೀಕರಣದೊಳಕ್ಕೆ ಬರಲೂ ಅನರ್ಹರಾಗಿರುವ ಕಾರಣ ಅವರ ಹಠ ಚಟಗಳ ಬಗ್ಗೆ ವಿಚಾರ ಮಾಡುವುದನ್ನು ಮುಂದುವರಿಸಿದರೆ ಪ್ರಬಂಧ ಗಲೀಜಾಗಿ ಗಬ್ಬೆದ್ದು ಎಕ್ಕುಟ್ಟಿ ಹಾಳಾಗಿ ಹೋಗುವ ಸಂಭವವಿರುವುದು**

ಶಾಪಿಂಗ್ ಚಟ. ಅವರು ಅದನ್ನು ಹಾಬಿ ಎನ್ನುತ್ತಾರೆ. ಕೆಲವರಿಗೆ ಸಿನಿಮಾ ನೋಡುವ ಚಟ, ಅದನ್ನು ಹುಚ್ಚು ಎನ್ನುವುದೂ ಉಂಟು. ಆದರೆ ಅವರು ಅದನ್ನು ಅಭಿಮಾನ ಎನ್ನುತ್ತಾರೆ. ಕೆಲವರಿಗೆ ಊರೂರು ತಿರುಗುವ ಚಟ. ಅವರು ಅದನ್ನು ಪ್ರವಾಸದ ಹವ್ಯಾಸ ಎನ್ನುತ್ತಾರೆ. ಯಾವುದೇ ಕೆಲಸ ಕಾರ್ಯ ಇಲ್ಲದೆ ಅಥವಾ ಇರುವ ಕೆಲಸ ಬಿಟ್ಟು ದಿನಗಟ್ಟಲೆ ಪಕ್ಷಿಗಳನ್ನು ನೋಡುತ್ತ, ರಾತ್ರಿಗಳನ್ನು ನಕ್ಷತ್ರ ನೋಡುತ್ತ ಸೋಂಭೇರಿತನದಿಂದ ಕಾಲ ಕಳೆಯುವ ಚಟವು ಉತ್ತಮ ಹವ್ಯಾಸ ಎನ್ನಿಸಿಕೊಂಡಿದೆ. ಕೆಲವರಿಗೆ ಸುಳ್ಳು ಹೇಳುವ ಚಟ ಇದೆ ಎಂದು ಹೇಳುತ್ತಾರೆ. ಸುಳ್ಳು ಹೇಳುವುದೊಂದು ಕಲೆ ಎಂದೂ ಹೇಳುತ್ತಾರೆ. ಸುಳ್ಳಿನ ಅರ್ಥ, ವ್ಯಾಪ್ತಿ, ಪ್ರಪಂಚ ಬಹಳ ವಿಶಾಲವಾದ್ದರಿಂದ ಪ್ರಸ್ತುತ ಪ್ರಬಂಧದಲ್ಲಿ ಅದರ ಪ್ರಸ್ತಾಪವನ್ನಷ್ಟೇ ಮಾಡಿ ನಿಲ್ಲಿಸುತ್ತಿದ್ದೇನೆ. 'ಕ್ಲೆಪ್ಟೋಮೇನಿಯಾ' ಎಂಬ ಕಳ್ಳತನ ಮಾಡುವ ಚಟದವರೂ ಇರುತ್ತಾರಂತೆ! ಇವರಿಗೆ ಕಳ್ಳತನ ವೃತ್ತಿಯಲ್ಲ. ಹಣಕಾಸಿನ ಕೊರತೆಯಿರುವುದಿಲ್ಲ. ಆದರೂ ಚಟಕ್ಕಾಗಿ ಸಣ್ಣ ಪುಟ್ಟ ಕಳ್ಳತನ ಮಾಡುತ್ತಾರಂತೆ. ಚಟಕ್ಕಾಗಿ ಮಾಡಿದರೂ ಕಳ್ಳತನ ಅಪರಾಧವೇ ತಾನೇ?

'ಹೆಣ್ಣಿಗೆ ಹಠ ಇರಬಾರದು, ಗಂಡಿಗೆ ಚಟ ಇರಬಾರದು' ಎಂಬ ಮಾತೊಂದಿದೆ. ಈಗ ನಮ್ಮ ರಾಜಕಾರಣಿಗಳಿಗೆ ಇರುವುದು ಅಧಿಕಾರಕ್ಕಂಟಿಕೊಂಡಿರುವ ಹಠವೋ? ಹಣ ಕೊಳ್ಳೆ ಹೊಡೆಯುವ ಚಟವೋ? ಈ ರಾಜಕಾರಣಿಗಳೆಂಬುವವರಲ್ಲಿ ಕೆಲವರು ಮನುಷ್ಯರು ಎಂಬ ವರ್ಗೀಕರಣದೊಳಕ್ಕೆ ಬರಲೂ ಅನರ್ಹರಾಗಿರುವ ಕಾರಣ ಅವರ ಹಠ ಚಟಗಳ ಬಗ್ಗೆ ವಿಚಾರ ಮಾಡುವುದನ್ನು ಮುಂದುವರಿಸಿದರೆ ಪ್ರಬಂಧ ಹಾಳಾಗಿ ಹೋಗುವ ಸಂಭವವಿರುವುದರಿಂದ ಇದನ್ನು ಇಲ್ಲಿಗೇ ಬಿಟ್ಟು ಹಿಂದಿನ ಪುರಾಣ ಕಾಲಕ್ಕೆ ಹೋಗ ಬಹುದು. ಅಲ್ಲಿಯೂ ಇದೇ! ದೇವೇಂದ್ರನಿಗೆ ಸಿಂಹಾಸನ ಬಿಡಬಾರದೆಂಬ ಹಠ. ಅದಕ್ಕಾಗಿ ವಿಶ್ವಾಮಿತ್ರನಿಗೆ ಮೇನಕೆಯ ಚಟ ಹತ್ತಿಸಿದ! ಇನ್ನು ಮಹಾಭಾರತದಲ್ಲಿ ಧರ್ಮರಾಯ! ಅವನಿಗಿದ್ದುದು ಪಗಡೆ ಆಟವೆಂಬ ಜೂಜಿನ ಚಟ! ಇನ್ನು ಶ್ರೀ ಕೃಷ್ಣ ಪರಮಾತ್ಮನಿಗೋ ಮದುವೆಯ ಚಟ. ಹದಿನಾರು ಸಾವಿರ ಹೆಂಡತಿಯರಂತೆ! ಇನ್ನು ಈಶ್ವರನನ್ನು ಕುರಿತು 'ಸದಾಶಿವನಿಗೆ ಅದೇ ಧ್ಯಾನ' ಎಂಬ ಗಾದೆಯೇ ಇದೆ. 'ಆ' ಚಟವನ್ನು ಸದಾಶಿವ ಧ್ಯಾನದಂತಹ ಅತ್ಯುನ್ನತ ಹಂತಕ್ಕೇರಿಸಿದ್ದಾನೆ. ಓಶೋ ರಜನೀಶರೂ ಅದನ್ನೇ ಪ್ರತಿಪಾದಿಸಿದ್ದಾರೆ. ಒಟ್ಟಿನಲ್ಲಿ ಚಟವೆಂಬುದು ದೇವಾನು ದೇವತೆಗಳನ್ನೂ ಬಿಟ್ಟಿಲ್ಲ ಎಂಬುದಕ್ಕೆ ಇಷ್ಟು ಉದಾಹರಣೆಗಳು ಸಾಕು ಎನ್ನಿಸುತ್ತದೆ. ಚಟಗಳು ಮಠಾಧಿಪತಿಗಳನ್ನೂ ಬಿಟ್ಟಿಲ್ಲ. ಇತ್ತೀಚೆಗೊಬ್ಬ ಮಠಾಧಿಪತಿ ಪರಮಾನಂದ ಹೊಂದುವ ಸದಾಶಿವನ ಆ ಚಟವನ್ನು ನಿತ್ಯಾನಂದದ ತೆವಲು ಎನ್ನುವ ಹಂತಕ್ಕೆ ಎಳೆದೊಯ್ದು ಗಬ್ಬೆಬ್ಬಿಸಿಬಿಟ್ಟ.

ಮತ್ತೆ ಈ ಕಾಲಕ್ಕೆ ಬಂದರೆ ಟೀವಿಯ ಚಟ, ಮೊಬೈಲ್ ಚಟ ಹೆಚ್ಚಿನವರಿಗೆ ಹತ್ತಿಕೊಂಡಿದೆ. ಹೆಂಗಸರಿಗೆ ಧಾರಾವಾಹಿಯ ಚಟವಾದರೆ ಗಂಡಸರಿಗೆ ನ್ಯೂಸ್ ಚಾನಲ್ ಚಟ. ಹುಡುಗ ಹುಡುಗಿಯರಿಗೆ ಕ್ರಿಕೆಟ್, ಸಿನಿಮಾಗಳ ಚಟ. ಮೊಬೈಲ್ ಚಟದಲ್ಲೂ ಎರಡು ವಿಧ. ಮಾತನಾಡುವ ಚಟ. ಎಸ್.ಎಂ.ಎಸ್. ಚಟ. ಮಾತನಾಡುವ ಚಟದಲ್ಲಿ ಇನ್ನೊಂದು ದುಶ್ಚಟ ಎಂದರೆ ವಾಹನ ಚಾಲನೆ ಮಾಡುವಾಗ ಮೊಬೈಲಿನಲ್ಲಿ ಮಾತನಾಡುವುದು. 'ಮೊದಲೇ ಕೋತಿ, ಅದಕ್ಕೆ ಹೆಂಡ ಕುಡಿಸಿ ಚೇಳಿನಿಂದ ಕುಟುಕಿಸಿದ ಹಾಗೆ' ಎಂಬುದೊಂದು ಗಾದೆ ಮಾತು. ಅದನ್ನು ಇದಕ್ಕೆ ಹೊಂದಿಸಿ, 'ಮೊದಲೇ ಹರೆಯ, ಜತೆಗೆ ಹೆಂಡ ಕುಡಿದು, ವಾಹನ ಚಾಲನೆ ಮಾಡುವಾಗ ಮೊಬೈಲಿನಲ್ಲಿ ಮಾತು' ಎಂದು ಹೇಳಬಹುದು. ಆಹಾ ಈ ಚಟವಿದ್ದವರಿಗೆ ಸ್ವರ್ಗಕ್ಕೆ ಮೂರೇ ಗೇಣು! ಲಾಟರಿ, ಜೂಜಿನ ಚಟಗಳ ವೈವಿಧ್ಯತೆಯೂ ಅಪಾರ. ಅಬ್ಬಾ ಹೀಗೇ ಚಟಗಳ ವೈವಿಧ್ಯತೆಯನ್ನು ಪಟ್ಟಿ ಮಾಡುತ್ತಾ ಹೋದರೆ ಕೊನೆಯೇ ಇಲ್ಲ. ಪ್ರಬಂಧದ ಮಿತಿಯಲ್ಲಿ ಅಸಾಧ್ಯವೇ ಸರಿ. ಸಂಶೋಧನಾ ಪ್ರಬಂಧವೇ ಬೇಕು. ಚಟಗಳನ್ನು ಬಿಡುವುದು ಎಷ್ಟು ಕಷ್ಟ ಎಂಬುದರ ಬಗ್ಗೆ ಇಂಗ್ಲಿಷಿನ 'ಹ್ಯಾಬಿಟ್' ಪದದ ಬಗ್ಗೆ ಹೀಗೆ ಹೇಳುತ್ತಾರೆ: 'ಹ್ಯಾಬಿಟ್'ನಲ್ಲಿ 'ಎಚ್' ತೆಗೆದರೆ 'ಎ ಬಿಟ್' ಉಳಿದುಕೊಳ್ಳುತ್ತದೆ. 'ಎ' ತೆಗೆದರೂ 'ಬಿಟ್' ಉಳಿಯುತ್ತದೆ. ಬಿಟ್‌ನಲ್ಲಿ 'ಬಿ' ತೆಗೆದರೂ 'ಇಟ್' ಉಳಿಯುತ್ತೆ. ಎಲ್ಲಾ ದೇಶ-ಕಾಲಗಳಲ್ಲೂ ಕುಡಿತ ಇದೆಯಾದರೂ ಎಲ್ಲರಿಗೂ ಅದು ಚಟವಾಗಿರುವುದಿಲ್ಲ. ಕೆಲವರಿಗೆ ಆಹಾರದ ಒಂದು ಭಾಗ ಮಾತ್ರ. ಹಲವರು ಅಭ್ಯಾಸದ ಹೆಸರಿನಲ್ಲಿ ಆರಂಭಿಸಿ ಅದನ್ನು ಚಟವಾಗಿಸಿಕೊಂಡು ದುಶ್ಚಟದ ಹಂತಕ್ಕಿಳಿದು ಬಿಡಲಾಗದೆ ತಾವು ಸರ್ವನಾಶ ವಾಗುವುದಲ್ಲದೇ ತಮ್ಮ ಸಂಸಾರವನ್ನೂ ಆಮೂಲಕ ಸಮಾಜವನ್ನೂ ದುಸ್ಥಿತಿಗೆ ದೂಡುತ್ತಾರೆ. ವೈಯಕ್ತಿಕ, ಸಾಂಸಾರಿಕ, ಸಾಮಾಜಿಕ, ಆರ್ಥಿಕ ಕೆಡುಕುಗಳನ್ನುಂಟು ಮಾಡುವ ಕುಡಿತದ ಚಟಕ್ಕೆ ಜಾಗತಿಕ ಮಟ್ಟದಲ್ಲಿ ಅಗ್ರಪಟ್ಟ ಎನ್ನಬಹುದೇನೋ?

ಹೆಚ್ಚಿನ ಹಿರಿಯರು ಮತ್ತು ಎಲ್ಲಾ ವೈದ್ಯರು ಚಟಗಳಿಗೂ ಆರೋಗ್ಯಕ್ಕೂ ದೀರ್ಘಾಯುಷ್ಯಕ್ಕೂ ನೇರ ಸಂಬಂಧ ಕಲ್ಪಿಸುತ್ತಾರೆ. (ಸ್ವತಃ ವೈದ್ಯರೂ ಸಹ ಚಟಗಳಿಂದ ಹೊರತಲ್ಲ!) ಆದರೆ ಇದು ಎಷ್ಟರಮಟ್ಟಿಗೆ ಸರಿ ಎಂಬುದು ಚರ್ಚಾರ್ಹ. ಎಷ್ಟೋ ಜನ ಯಾವುದೇ ದುಶ್ಚಟಗಳಿಲ್ಲದವರೂ ಸಹ ಸಣ್ಣ ವಯಸ್ಸಿಗೇ ಖಾಯಿಲೆಗಳಿಂದ ಬಳಲುತ್ತಾರೆ. ಆಯಸ್ಸೂ ಮುಗಿದು ಹೋಗಿಬಿಡುತ್ತದೆ. ಆದರೆ ಕೆಲವು ಮುದುಕರು ಬುಸ್-ಬುಸ್ ಎಂದು ಬೀಡಿ ಹೊಗೆ ಬಿಡುತ್ತಲೇ ಆರಾಮಾಗಿರುತ್ತಾರೆ. ಈ ಬಗ್ಗೆ ಒಂದು ಹಳೇ ಜೋಕ್ ನೆನಪಾಗುತ್ತದೆ. ಒಬ್ಬ ಪ್ರಖ್ಯಾತ ವ್ಯಕ್ತಿಗೆ ೮೦ ವರ್ಷ ತುಂಬಿದಾಗ ಸಂದರ್ಶಕರು ಅವನನ್ನು ಕೇಳಿದರಂತೆ, ''ನಿಮ್ಮ ದೀರ್ಘಾಯುಷ್ಯದ ಗುಟ್ಟೇನು'' ಎಂದು. ಯಾವುದೇ ಚಟಗಳಿಲ್ಲದಿರುವುದೇ ನನ್ನ ದೀರ್ಘಾಯುಷ್ಯದ ಗುಟ್ಟು ಎಂದು ಆತ ಹೇಳಿದನಂತೆ. ಅಷ್ಟರಲ್ಲಿ ಒಳಗೆ ಗಲಾಟೆ ಕೇಳಿಸಿತು. ಸಂದರ್ಶಕರು, ''ಅದೇನು ಗಲಾಟೆ'' ಎಂದು ಕೇಳಿದರು. ಆಗ ಆ ವ್ಯಕ್ತಿ, ''ನನ್ನ ಅಪ್ಪನೂ, ಅಜ್ಜನೂ ಹೀಗೆ ಕುಡಿದು, ಬೀಡಿ ಬೆಂಕಿಪೊಟ್ಟಣಗಳಿಗಾಗಿ ಆಗಾಗ ಹೀಗೆ ಗಲಾಟೆ ಮಾಡುತ್ತಿರುತ್ತಾರೆ'' ಎಂದು ಹೇಳಿದನಂತೆ!

ಇಂಥಾ ವೈವಿಧ್ಯಮಯ ಚಟ ಪ್ರಪಂಚದಲ್ಲಿ ನನಗಿರುವ ಚಟ ಯಾವುದು, ಈಗಲಾದ್ರೂ ಏನಾದರೂ ಚಟ ಕಲಿಯಲೇ, ಚಟ ಬಿಡಬೇಕಾದ ವಯಸ್ಸಿನಲ್ಲಿ ಕಲಿತರೆ ಬಿಡಲಾದೀತೆ, ಅಂದರೆ ಚಟಕ್ಕೂ ವಯಸ್ಸಿಗೂ ಸಂಬಂಧವಿದೆಯೇ, ಎಂಬಿತ್ಯಾದಿ ವಿಚಾರಗಳ ಬಗ್ಗೆ ಗಹನವಾಗಿ ಯೋಚಿಸುತ್ತಾ ಕುಳಿತಿದ್ದೆ. ಆಗ ಪಕ್ಕದ ಮನೆಯಾಕೆಯೂ ನನ್ನ ಹೆಂಡತಿಯೂ ಮಾತನಾಡುತ್ತಿದ್ದರು. (ಇಬ್ಬರಿಗೂ ಮಾತಿನ ಚಟ? - ಹೆಂಗಸರ ಸಹಜ ಪ್ರವೃತ್ತಿಯನ್ನು ಚಟ ಎನ್ನಲಾದೀತೆ?) ನನ್ನ ಹೆಂಡತಿ ಹೇಳುತ್ತಿದ್ದುದು ಕೇಳಿಸಿತು: 'ಮೂರು ಕಾಸಿಗೆ ಪ್ರಯೋಜನವಿಲ್ಲದಿದ್ದರೂ ನಮ್ಮ ಮನೆಯವರಿಗೆ ಅದೇನೋ ಬರೆಯೋ ಚಟ ಕಣ್ರೀ' ಅಂತ. ನನಗಂತೂ 'ಯುರೇಖಾ' ಎಂದು ಕೂಗುವಷ್ಟು ಖುಷಿಯಾಯಿತು. ನನಗೆ ಬರೆಯುವ ಚಟ ಇದೆ! ಬೆಳಗಾಗೆದ್ದು ಪೇಪರ್ ಓದೋದು ನನಗೆ ಅಂಟಿರುವ ಚಟ ಅಂತಲೇ ಅವಳು ಹೇಳುತ್ತಿರುತ್ತಾಳೆ. ಪಕ್ಕದ ಮನೆಯಾಕೆ ಹೋದ ನಂತರ ನನ್ನ ಮಡದಿಯನ್ನು ಬರಸೆಳೆದು, ಬಿಗಿದಪ್ಪಿ, ಮುತ್ತಿನ ಮಳೆಗರೆದೆ, ಎಂದು ಹೇಳಲು ಇದು ಕತೆಯಲ್ಲ ಜೀವನ! ಆದರೂ ಸಂತೋಷ ಅಡಗಿಸಿಡಲಾಗದೆ, ''ಏನೇ, ನಿನಗೊಂದು ಸೀರೆ ಕೊಡಿಸೋಣ ಅಂತಿದೀನಿ'' ಎಂದೆ. ಸೀರೆ ಕೊಳ್ಳುವ ಚಟವಿರುವ (ಸಹಜ ಪ್ರವೃತ್ತಿ!) ನನ್ನ ಹೆಂಡತಿಗೆ ಇದುವರೆಗೂ ಒಂದೂ ಸೀರೆ ಕೊಡಿಸದಂಥ ನನ್ನಿಂದ ಈ ಮಾತನ್ನು ಕೇಳಿ ಗಾಬರಿಯಾಯಿತು! ''ಏನ್ರೀ ಹುಷಾರಾಗಿದೀರ ತಾನೆ? ಯಾಕೋ ಏನೇನೋ ಮಾತಾಡ್ತಿದೀರಲ್ಲ'' ಎಂದು ಕಾಳಜಿ ತೋರಿದಳು.

ಬರೆಯುವುದು ನನ್ನ ಚಟ ಎಂದು ಒಪ್ಪಿಕೊಂಡರೂ, ನಾನೇಕೆ ದೊಡ್ಡ ಬರಹಗಾರನಾಗಲಿಲ್ಲ ಎಂಬ ದಿಕ್ಕಿನಲ್ಲಿ ಯೋಚನೆ ಹರಿಯಿತು. ದೊಡ್ಡ ದೊಡ್ಡ ಬರಹಗಾರರಿಗೆ ಎಂತೆಂಥವೋ ಚಟಗಳಿರುತ್ತವೆಯಂತೆ. ಕೆಲವರಂತೂ ಚಟ ಚಕ್ರವರ್ತಿ/ಚಟ ಸಾರ್ವಭೌಮರೇ ಆಗಿರುತ್ತಾರೆ. ಅವರುಗಳು ಅದನ್ನೆಲ್ಲ ಎಷ್ಟು ಸಹಜವಾಗಿ ಹೆಮ್ಮೆಯಿಂದ ಹೇಳಿಕೊಳ್ಳುತ್ತಾರೆ! ಆ ಚಟಗಳ ಅನುಭವವಿರುವ ಅವರ ಸಾಹಿತ್ಯ ರಸಮಯವಾಗಿ ಸತ್ವಯುತವಾಗಿರುತ್ತದೆಯೇ? ಬರೆಯುವ ಚಟ ಬಿಟ್ಟು ಬೇರೆ ಚಟವಿಲ್ಲದ ನನ್ನ ಬರವಣಿಗೆ ಅದರಿಂದಲೇ ಸೊರಗಿದೆಯೆ? ಯೋಚನಾಲಹರಿ ಮುಗಿಯುತ್ತಿಲ್ಲ, ಬಿಡುವುದಕ್ಕೆ ಒಂದು ಒಳ್ಳೆ ದುಶ್ಚಟವಿಲ್ಲವಲ್ಲ ಎಂಬ ಕೊರಗು ಮತ್ತು ನೀವು ಬದುಕಿದ್ದೇನು ಪ್ರಯೋಜನ ಎಂಬಂತೆ ನೋಡಿದ ಡಾಕ್ಟರರ ನೋಟ, ಹೀಗೆ ಜೋಕೊಂದರ ಪಾತ್ರವಾಗಿದ್ದಕ್ಕೆ ವಿಚಿತ್ರ ತಳಮಳ ಎಲ್ಲವೂ ಕಾಡುತ್ತಿವೆ.

ನಾನು ಜೋಕೊಂದರ ಪಾತ್ರವಾಗಿದ್ದಕ್ಕೂ, ಕಡಿದಾಳು ಶಾಮಣ್ಣನವರು ತೇಜಸ್ವಿಯವರ ಕತೆ ಕಾದಂಬರಿಗಳ ಪಾತ್ರವಾಗಿದ್ದಕ್ಕೂ ಅರ್ಥಾತ್ ಹೋಲಿಕೆ ಇಲ್ಲದಿದ್ದರೂ, ಶಾಮಣ್ಣನವರು ಎದುರಿಗೆ ಸಿಕ್ಕಾಗ ಅವರನ್ನೊಮ್ಮೆ ಕೇಳಬೇಕು ಎಂಬ ಯೋಚನೆ ತಲೆ ಕೊರೆಯುತ್ತಿದೆ. ನನಗೆ ಚಿತ್ರ ವಿಚಿತ್ರ ಯೋಚನೆ/ಕಲ್ಪನೆಗಳನ್ನು ಮಾಡುವ ಚಟವೂ ಇದೆಯೇನೋ ಅನ್ನಿಸುತ್ತಿದೆ!

ವಿ. ಶ್ರೀನಿವಾಸ
ನಂ. ೧೨, 'ಆಹ್ಲಾದ', ೧ನೇ ತಿರುವು
ದೂರವಾಣಿ ಬಡಾವಣೆ
ಶಿವಮೊಗ್ಗ - ೫೭೭ ೨೦೪

ಉದ್ದೇಶಿತ ನವೀನಾತ್ಮಕ ವಿಶ್ವವಿದ್ಯಾಲಯಗಳ ಸ್ಥಾಪನೆ ಅಥವಾ ಮರುರೂಪಣೆಯ ಹಿಂದೆ ಇರುವ ಉದ್ದೇಶ-ಗುರಿಗಳಿಗನುಸಾರವಾಗಿ ತೇಪೆ ಹಾಕಿ ಹಳೆಯ ವ್ಯವಸ್ಥೆಯನ್ನು ಮಾರ್ಪಾಡುಮಾಡಲಾಗಿದೆ. ಮೇಲುನೋಟಕ್ಕೆ ಆಕರ್ಷಕವಾಗಿ ಕಾಣುವ ಈ ನಿಯಮಗಳು ನಿಜವಾಗಿ ಮೂಲ ಉದ್ದೇಶಗಳನ್ನು ಈಡೇರಿಸುತ್ತವೆಯೆ? ರಾಜಕೀಯ ಹಸ್ತಕ್ಷೇಪವನ್ನು ತಪ್ಪಿಸುವುದು ಇದರಿಂದ ಸಾಧ್ಯವೇ? ಶಿಕ್ಷಣ ಹಾಗೂ ಸಂಶೋಧನೆಗಳ ಗುಣಮಟ್ಟ ಪ್ರಸ್ತುತ ವ್ಯವಸ್ಥೆಯಿಂದ ಸುಧಾರಿಸಬಲ್ಲದೇ? ವಿಕೇಂದ್ರೀಕರಣದಿಂದ ಆಡಳಿತ ಶಕ್ತಿಶಾಲಿಯಾಗಬಲ್ಲದೇ? ಎಂಬಿತ್ಯಾದಿ ಪ್ರಶ್ನೆಗಳು ಇಲ್ಲಿ ಪ್ರಸ್ತುತವಾಗುತ್ತವೆ. ಇಂಥ ಪ್ರಶ್ನೆಗಳು ಪ್ರಸ್ತುತ ಮಸೂದೆಯನ್ನು ವಿಮರ್ಶಾತ್ಮಕವಾಗಿ ನೋಡಲು ಪ್ರೇರೇಪಿಸುತ್ತವೆ.

ಇಂದು ದೇಶದ ಉನ್ನತ ಶಿಕ್ಷಣ ವ್ಯವಸ್ಥೆ ಹಲವಾರು ಆಂತರಿಕ ದೋಷಗಳು ಹಾಗೂ ವಿಪರೀತ ರಾಜಕೀಯ ಹಸ್ತಕ್ಷೇಪದ ಕಾರಣದಿಂದಾಗಿ ರೋಗಗ್ರಸ್ತ ವ್ಯವಸ್ಥೆಯಾಗಿ ಮಾರ್ಪಾಡಾಗಿದೆ. ಇದೇ ಸಂದರ್ಭಕ್ಕೆ ಶಿಕ್ಷಣ ಉದಾರೀಕರಣ ನೀತಿಗಳಿಗೊಳಗಾದ ಪರಿಣಾಮವಾಗಿ ವಿದೇಶಿ ವಿಶ್ವವಿದ್ಯಾಲಯಗಳು ಭಾರತದೊಳಕ್ಕೆ ಪ್ರವೇಶ ಪಡೆಯಲಾರಂಭಿಸಿವೆ. ಹಾಗಾಗಿ ನಮ್ಮ ಉನ್ನತ ಶಿಕ್ಷಣ ವ್ಯವಸ್ಥೆಯ ಪುನರ್‌ರಚನೆಯ ಅಗತ್ಯತೆಯನ್ನು ಭಾರತದ ಜ್ಞಾನ ಆಯೋಗ ಒತ್ತಿ ಹೇಳಿದೆ. ಈ ಹಿನ್ನೆಲೆಯಲ್ಲಿ ಕೇಂದ್ರ ಮಾನವ ಸಂಪನ್ಮೂಲ ಸಚಿವಾಲಯ ಗಂಭೀರವಾಗಿ ಆಲೋಚಿಸಿದ ಪರಿಣಾಮ ನವೀನಾತ್ಮಕ ವಿಶ್ವವಿದ್ಯಾಲಯಗಳ ಕಲ್ಪನೆ ಒಡಮೂಡಿದೆ. ಭಾರತದಲ್ಲಿ ಇಂಥ ಪ್ರಯತ್ನದ ಫಲವಾಗಿ ಸುಮಾರು ೧೪ ವಿಶ್ವವಿದ್ಯಾಲಯಗಳು ಹಳೆಯ ಪದ್ಧತಿಗಳಿಂದ ಬಿಡುಗಡೆಗೊಂಡು ನವೀನಾತ್ಮಕ ವಿಶ್ವ ವಿದ್ಯಾಲಯಗಳ ರೂಪವನ್ನು ಪಡೆಯುವ ಪ್ರಯತ್ನದಲ್ಲಿವೆ.

ಉನ್ನತ ಶಿಕ್ಷಣ ವ್ಯವಸ್ಥೆಯನ್ನು ಪುನರ್‌ರಚಿಸುವ ಪ್ರಯತ್ನಗಳಿಗೆ ಕರ್ನಾಟಕ ರಾಜ್ಯವೂ ಕೈ ಜೋಡಿಸಿರುವುದು ಸ್ವಾಗತಾರ್ಹ ಬೆಳವಣಿಗೆಯಾಗಿದೆ. ಕರ್ನಾಟಕ ಸರ್ಕಾರ ಮೊದಲಿಗೆ ರಾಜ್ಯದ ಅತ್ಯಂತ ಪ್ರಾಚೀನ ಹಾಗೂ ಪ್ರತಿಷ್ಠಿತ ವಿಶ್ವವಿದ್ಯಾಲಯಗಳಾಗಿರುವ ಮೈಸೂರು ಹಾಗೂ ಕರ್ನಾಟಕ ವಿಶ್ವವಿದ್ಯಾಲಯಗಳನ್ನು ಪುನರ್‌ರಚಿಸಲು ದಿನಾಂಕ ೧೨-೫-೨೦೧೧ರಂದು ಕರ್ನಾಟಕ ಜ್ಞಾನ ಆಯೋಗದ ಅಧ್ಯಕ್ಷರಾಗಿರುವ ಡಾ॥ ಕೆ. ಕಸ್ತೂರಿರಂಗನ್ ಅವರ ಅಧ್ಯಕ್ಷತೆಯಲ್ಲಿ ಐದು ಜನರ ಸಮಿತಿಯೊಂದನ್ನು ರಚಿಸಿತು. ಈ ಸಮಿತಿಯು ಐದು ತಿಂಗಳ ನಿರಂತರ ಪರಿಶ್ರಮದಿಂದ ಅದೇ ವರ್ಷದ ಅಕ್ಟೋಬರ್‌ನಲ್ಲಿ ವರದಿಯೊಂದನ್ನು ಸಲ್ಲಿಸಿತು.

**ಡಾ॥ ಎಸ್. ಎಂ. ಮುತ್ತಯ್ಯ**

ವರದಿಯಲ್ಲಿ ಮುಖ್ಯವಾಗಿ ನವೀನಾತ್ಮಕ ವಿಶ್ವವಿದ್ಯಾಲಯಗಳ ಆಡಳಿತಕ್ಕೆ ಸಂಬಂಧಿಸಿದ ಪಂಚತತ್ವಗಳನ್ನು ಹೇಳಿತು. ಆ ತತ್ವಗಳೆಂದರೆ 'ಸ್ವಾಯತ್ತತೆ', 'ವೈವಿಧ್ಯತೆ', 'ನಮನೀಯತೆ', ಸಾರ್ವತ್ರೀಕರಣ ಹಾಗೂ 'ನಿಯೋಗ ಮತ್ತು ವಿಕೇಂದ್ರಿಕರಣ' ಈ ಪ್ರಮುಖ ತತ್ವಗಳ ಆಧಾರದ ಮೇಲೆ ವಿಶ್ವವಿದ್ಯಾಲಯಗಳನ್ನು ಮರುರೂಪಿಸಬೇಕೆಂದು ಸಲಹೆ ನೀಡಿತು. ಸಮಿತಿಯ ಶಿಫಾರಸ್ಸು, ಸಲಹೆಗಳ ಅನ್ವಯ ಕರಡು ಮಸೂದೆಯೊಂದನ್ನು ತಯಾರಿಸಲು ಹೈದರಾಬಾದಿನ ಎ. ಸಿ. ಆರ್. ಐ.ನ ಆಡಳಿತ ಮಂಡಳಿಯ ನಿರ್ದೇಶಕರಾದ ಪ್ರೊ॥ ಪಿ. ರಾಮರಾವ್ ಅವರ ನೇತೃತ್ವದಲ್ಲಿ ಮೂರು ಜನರ ಕಾರ್ಯತಂಡವನ್ನು ರಚಿಸಲಾಯಿತು. ಈ ತಂಡವು 'ಕರ್ನಾಟಕ ರಾಜ್ಯ ನವೀನಾತ್ಮಕ ವಿಶ್ವವಿದ್ಯಾಲಯಗಳ ಮಸೂದೆ'ಯನ್ನು ಸಿದ್ಧಪಡಿಸಿ ಸರ್ಕಾರಕ್ಕೆ ಸಲ್ಲಿಸಿತು. ಸದರಿ ಮಸೂದೆ ಸಾರ್ವಜನಿಕರ ತಿಳುವಳಿಕೆಗೆ ಬರದೆ, ಸದನದಲ್ಲಿಯೂ ಚರ್ಚೆಯಾಗದೆ ಅಂಗೀಕಾರ ಪಡೆದು ಕಾನೂನು ರೂಪ ಪಡೆಯಲು ರಾಜ್ಯಪಾಲರ ಅಂಕಿತಕ್ಕಾಗಿ ಕಾಯುತ್ತಿದೆ. ಹೀಗೆ ಸಮಕಾಲೀನ ಅಗತ್ಯಕ್ಕೆಂದು ರೂಪಿಸಲ್ಪಟ್ಟ ಕಾಯ್ದೆ ಸದನದ ಹೊರಗೆ-ಒಳಗೆ ಯಾವುದೇ ಚರ್ಚೆಗಳಿಲ್ಲದೆ ಏಕಾಏಕಿ ಅಂಗೀಕಾರವಾಗಿರುವುದು ಸಾಕಷ್ಟು ಗೊಂದಲಗಳಿಗೆ ಕಾರಣವಾಗಿದೆ. ಅದಕ್ಕಾಗಿ ಈಗಲಾದರೂ ಆ ಕಾಯ್ದೆಯಲ್ಲಿ ಏನಿದೆ, ಅದರ ಸಾಧಕ-ಬಾಧಕಗಳೇನು, ಎಂಬುದು ಸಾರ್ವಜನಿಕ ಚರ್ಚೆಗೆ ಒಳಗಾಗಬೇಕಿದೆ. ಈ ಹಿನ್ನೆಲೆಯಲ್ಲಿ ಕಾಯ್ದೆಯ ಸ್ವರೂಪವನ್ನು ತಿಳಿಯುವ ಹಾಗೂ ಅದರ ಸಾಧ್ಯಾಸಾಧ್ಯತೆಗಳ ಬಗೆಗೆ ಒಂದಿಷ್ಟು ವಿಚಾರ ಮಾಡುವ ಪ್ರಯತ್ನ ಇದಾಗಿದೆ.

**ಕಾಯ್ದೆಯ ಸ್ವರೂಪ**

'ಕರ್ನಾಟಕ ರಾಜ್ಯ ನವೀನಾತ್ಮಕ ವಿಶ್ವವಿದ್ಯಾಲಯಗಳ ಮಸೂದೆ ೨೦೧೧' ಎಂಬ ಹೆಸರಿನ ಈ ಕಾಯ್ದೆ, ಈಗಾಗಲೇ ನಮ್ಮಲ್ಲಿ ಜಾರಿಯಲ್ಲಿದ್ದ / ಜಾರಿಯಲ್ಲಿರುವ ''ಕರ್ನಾಟಕ ವಿಶ್ವವಿದ್ಯಾಲಯಗಳ ಕಾಯ್ದೆ - ೨೦೦೦'' ಕ್ಕಿಂತ ಸಂಪೂರ್ಣವಾಗಿ ಭಿನ್ನವಲ್ಲ. ಆದರೂ ನವೀನಾತ್ಮಕ



# ಕರ್ನಾಟಕ ರಾಜ್ಯ ನವೀನಾತ್ಮಕ ವಿಶ್ವವಿದ್ಯಾಲಯಗಳ ಕಾಯ್ದೆ – ೨೦೧೧ : ಸ್ವರೂಪ ಮತ್ತು ಸಾಧ್ಯತೆಗಳು

ವಿಶ್ವವಿದ್ಯಾಲಯಗಳ ಉದ್ದೇಶ - ಗುರಿಗಳಿಗನುಗುಣವಾಗಿ ಹಲವಾರು ವೈಶಿಷ್ಟ್ಯಗಳನ್ನು ಹೊಂದಿದ್ದು ಅವು ಹಳೆಯ ಕಾಯ್ದೆಗಿಂತ ಭಿನ್ನವಾಗಿವೆ. ಇಲ್ಲಿ ಮೊದಲಿಗೆ ಹೊಸ ರೂಪದಲ್ಲಿ ಹೊರಹೊಮ್ಮುವ ವಿಶ್ವವಿದ್ಯಾಲಯಗಳಿಗೆ ಬೇಕಾಗಿರುವ ಉದ್ದೇಶ-ಗುರಿಗಳನ್ನು ಪ್ರಸ್ತಾಪಿಸಿದ್ದು ಅವು ಈ ಮುಂದಿನಂತಿವೆ :

೧. ಸಮಕಾಲೀನ ಸ್ಪರ್ಧಾತ್ಮಕ ಪರಿಸರದಲ್ಲಿ ಸಮರ್ಥವಾಗಿ ಉನ್ನತ ಶಿಕ್ಷಣ ವ್ಯವಸ್ಥೆಯನ್ನು ರಾಜ್ಯದಲ್ಲಿ ಬೆಳೆಸುವುದು.

೨. ಕುಸಿಯುತ್ತಿರುವ ಶೈಕ್ಷಣಿಕ, ಆಡಳಿತಾತ್ಮಕ, ಸಂಶೋಧನೆಯ ಗುಣಮಟ್ಟವನ್ನು ಉತ್ತಮಪಡಿಸುವುದು, ನಿಯಂತ್ರಿಸುವುದು.

೩. ವಿಶ್ವವಿದ್ಯಾಲಯಗಳಲ್ಲಿ ಶೈಕ್ಷಣಿಕ ಹಾಗೂ ಆಡಳಿತಾತ್ಮಕ ಕಾರ್ಯಗಳನ್ನು ಬೇರ್ಪಡಿಸುವ ಮತ್ತು ಅಧಿಕಾರಗಳನ್ನು ವಿಕೇಂದ್ರೀಕರಣಗೊಳಿಸುವ ಮೂಲಕ ಶೈಕ್ಷಣಿಕ ಸಂಸ್ಥೆಗಳಿಗೆ ಬೇಕಾಗಿರುವ ಸ್ವಾಯತ್ತತೆಯನ್ನು ನೀಡುವುದು.

೪. ಅಂತರ್‌ಶಿಸ್ತೀಯ ಹಾಗೂ ಬಹು ಶಿಸ್ತೀಯ ದೃಷ್ಟಿಕೋನಗಳ ಹಿನ್ನೆಲೆಯಲ್ಲಿ ಶೈಕ್ಷಣಿಕ ಮತ್ತು ಸಂಶೋಧನಾ ಸಂರಚನೆಗಳಲ್ಲಿ ಮಹಾನ್ ನಮನೀಯತೆಯನ್ನು ತರುವುದು.

೫. ನೀತಿ - ನಿಯಮಗಳು ಹಾಗೂ ಕಾರ್ಯಕ್ರಮಗಳ ಮೂಲಕ ಮಾನವೀಯ ವ್ಯಕ್ತಿತ್ವದ ಅಭಿವೃದ್ಧಿ ಮತ್ತು ರಾಷ್ಟ್ರೀಯ ಭಾವೈಕ್ಯತೆಯನ್ನು ಬೆಳೆಸುವುದು.

ಈ ಪ್ರಧಾನ ಉದ್ದೇಶಗಳ ಜೊತೆಗೆ ವಿಶ್ವವಿದ್ಯಾಲಯಗಳು ಎಲ್ಲ ವರ್ಗದ ಜನರಿಗೆ ಮುಕ್ತವಾಗಿರಬೇಕು. ವಿಶೇಷವಾಗಿ ಪರಿಶಿಷ್ಟ ಜಾತಿ, ಪರಿಶಿಷ್ಟ ಪಂಗಡ, ವಿಕಲಚೇತನರು, ಮೊದಲಾದ ಸಾಮಾಜಿಕ ದುರ್ಬಲರಿಗೆ ಸಿಗಬೇಕಾದ ಮೀಸಲಾತಿ ಸೌಲಭ್ಯಗಳನ್ನು ನೀಡುವ ಗುರಿಗಳನ್ನು ನಿಗದಿಪಡಿಸಲಾಗಿದೆ.

ಇಂಥ ದೊಡ್ಡ ಪ್ರಮಾಣದ ಧ್ಯೇಯೋದ್ದೇಶಗಳನ್ನು ಸಾಧಿಸಲು ವಿಶ್ವವಿದ್ಯಾಲಯಗಳು ನಿರ್ದಿಷ್ಟವಾದ ಪ್ರಾಧಿಕಾರಗಳನ್ನು ಹಾಗೂ ಅವುಗಳ ಮುಖ್ಯಸ್ಥ ಅಧಿಕಾರಿಗಳನ್ನು ಗುರುತಿಸಲಾಗಿದೆ. ಈ ಕಾಯ್ದೆಯ ಪ್ರಕಾರ ಇಡೀ ವಿಶ್ವವಿದ್ಯಾಲಯಕ್ಕೆ ಉನ್ನತಾಧಿಕಾರಿಯಾಗಿ ಸರ್ವೋಚ್ಚ ಅಧಿಕಾರವುಳ್ಳ ಅಧ್ಯಕ್ಷರನ್ನು ನೇಮಿಸಲಾಗುತ್ತದೆ. ಹಳೆಯ ಪದ್ಧತಿಯಲ್ಲಿ ರಾಜ್ಯಪಾಲರಿಗಿದ್ದ ಎಲ್ಲಾ ಅಧಿಕಾರಗಳು ಇವರಿಗಿರುತ್ತವೆ. ವಿ. ವಿ. ಗೆ ಕುಲಪತಿಗಳನ್ನು ನೇಮಿಸುವುದರಿಂದ ಹಿಡಿದು ಹಲವು ಅಧಿಕಾರಿಗಳನ್ನು ನೇಮಿಸುವ ಹಾಗೂ ಅವರನ್ನು ನಿಯಂತ್ರಿಸುವ ಅಧಿಕಾರ ಇವರಿಗೆ ಇರುತ್ತದೆ. ಇಂಥ ಅಧ್ಯಕ್ಷರನ್ನು ಮುಖ್ಯಮಂತ್ರಿ ಅವರ ಅಧ್ಯಕ್ಷತೆಯಲ್ಲಿ ಸಭಾಪತಿ, ವಿರೋಧ ಪಕ್ಷದ ನಾಯಕರು, ರಾಜ್ಯದ ಹೈಕೋರ್ಟ್‌ನ ಮುಖ್ಯನ್ಯಾಯಮೂರ್ತಿಗಳನ್ನೊಳಗೊಂಡ ಸಮಿತಿ ಆಯ್ಕೆಮಾಡುತ್ತದೆ. ಅಧ್ಯಕ್ಷರ ಆಯ್ಕೆಗೆ ಇರುವ ಪ್ರಮುಖ ಮಾನದಂಡಗಳೆಂದರೆ : ಅಧ್ಯಕ್ಷರಾಗುವವರು ಶಿಕ್ಷಣ / ಸಂಶೋಧನೆ / ಉದ್ಯಮ/ ಕಾನೂನು ಈ ಕ್ಷೇತ್ರಗಳಲ್ಲಿ ಅಥವಾ ಇವುಗಳಲ್ಲಿ ಯಾವುದಾದರೊಂದು ಕ್ಷೇತ್ರದಲ್ಲಾಗಲಿ ಅತ್ಯುತ್ತಮ ಸಾಧನೆ ಮಾಡಿರಬೇಕು. ಈ ಕಾಯ್ದೆಯನ್ನು ಅಳವಡಿಸಿಕೊಂಡ ಪ್ರತಿ ವಿಶ್ವವಿದ್ಯಾಲಯಕ್ಕೂ ಪ್ರತ್ಯೇಕವಾಗಿ ಅಧ್ಯಕ್ಷರು ಇರುತ್ತಾರೆ. ಅಧ್ಯಕ್ಷರು ನೇಮಕವಾದ ತಕ್ಷಣ ರಾಜ್ಯಪಾಲರು ಹಾಗೂ ಸರ್ಕಾರ ವಿಶ್ವವಿದ್ಯಾಲಯದ ಆಡಳಿತಕ್ಕೆ ಕೇವಲ ಸಲಹೆಗಾರರಾಗಿ, ಪ್ರವರ್ತಕರಾಗಿರುತ್ತಾರೆ. ಇದು ಅಧ್ಯಕ್ಷ ಹುದ್ದೆ ವಿಶ್ವವಿದ್ಯಾಲಯಕ್ಕೆ ಹೊಸ ಸೃಷ್ಟಿಯಾಗಿದ್ದು ಶಿಕ್ಷಣ ವ್ಯವಸ್ಥೆಯಲ್ಲಿ ರಾಜಕೀಯ ಹಸ್ತಕ್ಷೇಪವನ್ನು ತಡೆಯುವ ಉದ್ದೇಶಕ್ಕೆ ಪೂರಕವಾದ ಬೆಳವಣಿಗೆಯಾಗಿದೆ.

ಪ್ರಸ್ತುತ ನವೀನಾತ್ಮಕ ವಿಶ್ವವಿದ್ಯಾಲಯಗಳ ಕಾಯ್ದೆ ಅನ್ವಯ ಪುನರ್‌ರಚನೆಗೊಳ್ಳುವ ವಿಶ್ವವಿದ್ಯಾಲಯಗಳು ಪ್ರಮುಖವಾಗಿ ಮೂರು ಹಂತಗಳಲ್ಲಿ ರೂಪುಗೊಳ್ಳುತ್ತವೆ. ಆ ಮೂರು ಹಂತಗಳೆಂದರೆ : ೧. ಸಾಮಾನ್ಯ ವ್ಯವಸ್ಥೆ, ೨. ಏಕೀಕೃತ ವ್ಯವಸ್ಥೆ, ೩. ಸಂಯೋಜಿತ ವ್ಯವಸ್ಥೆ. ಈ ವ್ಯವಸ್ಥೆಗಳಲ್ಲಿ ನಿರ್ದಿಷ್ಟವಾದ ಅಧಿಕಾರಿಗಳು ಹಾಗೂ ಪ್ರಾಧಿಕಾರಗಳು ಕಾರ್ಯ ನಿರ್ವಹಿಸುತ್ತವೆ. ಈ ಮೂರು ವ್ಯವಸ್ಥೆಗಳ ರಚನೆಗಳನ್ನು ಮುಂದಿನಂತೆ ವಿವರಿಸಬಹುದು:

೧. ಸಾಮಾನ್ಯ ವ್ಯವಸ್ಥೆ : ಪ್ರಸ್ತುತ ವ್ಯವಸ್ಥೆಯಲ್ಲಿ ಅಧ್ಯಕ್ಷರು, ಕುಲಪತಿಗಳು, ಕುಲಸಚಿವರು, ಹಣಕಾಸು ಅಧಿಕಾರಿಗಳು, ಓಂಬುಡ್ಸ್‌ಮನ್ ಮೊದಲಾದ ಅಧಿಕಾರಿಗಳು; ಆಡಳಿತ ಮಂಡಳಿ, ಓಂಬುಡ್ಸ್‌ಮನ್ ಸಮಿತಿ, ಹಣಕಾಸು ಮತ್ತು ಲೆಕ್ಕಪತ್ರ ಸಮಿತಿ ಮುಂತಾದ ಪ್ರಾಧಿಕಾರಗಳು ಕಾರ್ಯ ನಿರ್ವಹಿಸುವ ವ್ಯವಸ್ಥೆಯಿದೆ. ಇದರಲ್ಲಿ ಅಧ್ಯಕ್ಷರು ಹಾಗೂ ಓಂಬುಡ್ಸ್‌ಮನ್ ಕಲ್ಪನೆಗಳು ನವೀನಾತ್ಮಕವಾದುವು. ಹಾಗೆಯೇ ಆಡಳಿತ ಮಂಡಳಿ ಹಳೆಯ ಪದ್ಧತಿಯ ಸಿಂಡಿಕೇಟ್‌ನ ಮರುನಾಮಕರಣವಾಗಿದೆ.

## ಯುದ್ಧದಲ್ಲಿ ಕ್ಷಮೆ



ಇದೊಂದು ಪ್ರಸಂಗ
ಪ್ರವಾದಿ ಮಹಮ್ಮದರ ಕಸಿನ್ನು
ಇಮಾಂ ಅಲಿ ಯುದ್ಧಭೂಮಿಯಲ್ಲಿದ್ದರು.
ಶತ್ರು ಸಿಕ್ಕಿ ಬಿದ್ದಿದ್ದ

ಇಮಾಂ ಅಲಿಯ ಖಡ್ಗ
ಶತ್ರುವಿನ ಕೊರಳನ್ನ
ಆತುಕೊಂಡಿತ್ತು ಮೃತ್ಯುವಿನಂತೆ

ಆ ಶತ್ರು, ಸಾವಿನ ಹೊಸ್ತಿಲಿನಲ್ಲಿದ್ದವನು
ಇಮಾಂನ ಮುಖಕ್ಕೆ ಉಗಿದುಬಿಟ್ಟ
ಇಮಾಂನ ಮುಖಕ್ಕೆ ಉಗಿದುಬಿಟ್ಟ
ಇಮಾಂನ ಮುಖಕ್ಕೆ ಉಗಿದುಬಿಟ್ಟ

ಇಮಾಂ ಖಡ್ಗವನ್ನು ಹಿಂದೆಳೆದು
ಹೋಗು, ಬದುಕಿಕೋ.
ನಿನ್ನ ಕೊಲ್ಲುವುದು
ನಿಯಮಬಾಹಿರ ಎಂದುಬಿಟ್ಟರು

ಶತ್ರುವಿಗೆ ಆಘಾತವಾಯಿತು
ಅವನಿದನ್ನು ಅರಗಿಸಿಕೊಳ್ಳದೇ ಹೋದ
ಇನ್ನೀಗ ಇಮಾಂ ನನ್ನ ಕೊಲ್ಲುವುದಿಲ್ಲ
ಆದರೆ ನನ್ನ ಬಿಡುವುದಾದರೂ ಏಕೆ ?

ಇಮಾಂ ಹೇಳಿದರು :

ಅಯ್ಯಾ ನೀನೆನ್ನ ಮುಖಕ್ಕೆ ಉಗಿದೆ
ಅದರಿಂದ ಏನಾಯಿತು
ನನ್ನ ಆತ್ಮಗೌರವಕ್ಕೆ
ಪೆಟ್ಟು ಬಿತ್ತು

ಈ ಮನಸ್ಥಿತಿಯಲ್ಲಿ ನಿನ್ನ
ಕೊಂದರೆ ಅದು ಘೋರ
ಕೊಲೆಯಂತೆ.
ನಾನು ಕೊಲೆಗಾರನಾಗುವೆ.

***

ನನ್ನ ಕಣ್ಣಲ್ಲಿರುವುದು ಆ ಚಿತ್ರವಲ್ಲ
ಬದಲಿಗೆ ಕೂಫಾ ನಗರದಲ್ಲಿ
ರಮದಾನಿನ ಇಪ್ಪತ್ತೊಂದನೇ ದಿನ
ಪ್ರಾರ್ಥನೆ ಮಾಡುತ್ತಿದ್ದ ಇಮಾಂರನ್ನು
ವಿಷ ಸವರಿದ ಕತ್ತಿಯಿಂದ ಶತ್ರು
ಇರಿದು ಕೊಂದಿದ್ದು

ಮತ್ತು ವಿಷ ಸವರಿದ ಕತ್ತಿಯಿಂದ
ಇರಿಸಿಕೊಂಡ ಅದೆಷ್ಟು ಇಮಾಮರು

**ಆರ್. ವಿಜಯರಾಘವನ್**
ಸೀನಿಯರ್ ಮ್ಯಾನೇಜರ್, ಪ್ರಗತಿ ಗ್ರಾಮೀಣ ಬ್ಯಾಂಕ್, ಪ್ರಧಾನ ಕಚೇರಿ, ಬಳ್ಳಾರಿ - ೫೮೩ ೧೦೩.

೨. ಏಕೀಕೃತ ವ್ಯವಸ್ಥೆ: ಇದರಲ್ಲಿ ಶೈಕ್ಷಣಿಕ ಮಂಡಳಿ, ನೇಮಕಾತಿ ಮಂಡಳಿ, ಅಧ್ಯಾಪಕ ವರ್ಗ ಸಮಿತಿ, ಸಂಶೋಧನೆ ಮತ್ತು ನಾವೀನ್ಯ ಸಮಿತಿ ಇವೇ ಮೊದಲಾದ ಪ್ರಾಧಿಕಾರಗಳು, ಸಮಕುಲಾಧಿಪತಿ, ವಿವಿಧ ನಿಕಾಯಗಳ ಡೀನರು, ಜ್ಞಾನ ಸಂಪನ್ಮೂಲ ನಿರ್ದೇಶಕರು, ದೈಹಿಕ ಶಿಕ್ಷಣ ಹಾಗೂ ವಿದ್ಯಾರ್ಥಿ ಕ್ಷೇಮಪಾಲನಾ ನಿರ್ದೇಶಕರು, ಸಂಶೋಧನಾ ಗುಣಮಟ್ಟ ಮತ್ತು ನವೀನತೆಯ ನಿರ್ದೇಶಕರು ಮೊದಲಾದ ಅಧಿಕಾರಿಗಳು ಸ್ಥಾನೀಕರಣಗೊಂಡಿರುತ್ತಾರೆ. ಇಲ್ಲಿ ಹಲವಾರು ಹುದ್ದೆಗಳು ಮತ್ತು ಪ್ರಾಧಿಕಾರಗಳು ಹೊಸ ಸೃಷ್ಟಿಗಳಾಗಿವೆ. ಮುಖ್ಯವಾಗಿ ಸಮಕುಲಾಧಿಪತಿ ಹುದ್ದೆ. ಇದಕ್ಕೆ ವಿಶ್ವವಿದ್ಯಾಲಯದ ಹಿರಿಯ ಪ್ರಾಧ್ಯಾಪಕರನ್ನು ನೇಮಿಸಲಾಗುತ್ತದೆ. ಇವರು ಇಡೀ ಏಕೀಕೃತ ವ್ಯವಸ್ಥೆಗೆ ಮುಖ್ಯಸ್ಥರಾಗಿ ಕಾರ್ಯ ನಿರ್ವಹಿಸುತ್ತಾರೆ. ಈವರೆಗೆ ದೈಹಿಕ ಶಿಕ್ಷಣ ಹಾಗೂ ವಿದ್ಯಾರ್ಥಿ ಕ್ಷೇಮಪಾಲನ ವಿಭಾಗಗಳು ಬೇರೆಯಾಗಿದ್ದು ಪ್ರಸ್ತುತ ವ್ಯವಸ್ಥೆಯಲ್ಲಿ ಒಂದೇ ವಿಭಾಗವಾಗಿ ಕಾರ್ಯ ನಿರ್ವಹಿಸುತ್ತವೆ. ಸಂಶೋಧನೆಯಲ್ಲಿ ನವೀನತೆ ತಂದು ಅದರ ಗುಣಮಟ್ಟ ಕಾಯ್ದುಕೊಳ್ಳುವುದಕ್ಕಾಗಿ ಒಂದು ವಿಭಾಗ ಮತ್ತು ಅದಕ್ಕೊಂದು ನಿರ್ದೇಶಕ ಹುದ್ದೆಯನ್ನು ಸೃಜಿಸಿರುವುದು ವಿಶೇಷವಾಗಿದೆ.

೩. ಸಂಯೋಜಿತ ವ್ಯವಸ್ಥೆ : ಇಲ್ಲಿ ನಿರ್ವಹಣಾ ಮಂಡಳಿ, ಸಂಯೋಜನೆ ಮತ್ತು ಪರೀಕ್ಷಾ ಮಂಡಳಿ, ಮುಕ್ತ ಮತ್ತು ದೂರ ಶಿಕ್ಷಣ ಮಂಡಳಿ ಅಧ್ಯಯನ ಮಂಡಳಿ ಇತ್ಯಾದಿ ಪ್ರಾಧಿಕಾರಗಳು ಅಸ್ತಿತ್ವದಲ್ಲಿದ್ದು, ಇವುಗಳನ್ನು ನಿರ್ವಹಿಸಲು ಪ್ರತಿ ವಿಭಾಗಕ್ಕೂ ಒಬ್ಬೊಬ್ಬ ನಿರ್ದೇಶಕರು ಇರುತ್ತಾರೆ. ಇವರೆಲ್ಲರನ್ನು ಮೇಲ್ವಿಚಾರಣೆ ಮಾಡಲು ಮತ್ತೊಬ್ಬ ಸಮಕುಲಾಧಿಪತಿ ಇರುತ್ತಾರೆ.

**ಸಾಧ್ಯತೆಗಳು**

ಉದ್ದೇಶಿತ ನವೀನಾತ್ಮಕ ವಿಶ್ವವಿದ್ಯಾಲಯಗಳ ಸ್ಥಾಪನೆ ಅಥವಾ ಮರುರೂಪಣೆಯ ಹಿಂದೆ ಇರುವ ಉದ್ದೇಶ-ಗುರಿಗಳಿಗನುಸಾರವಾಗಿ ಮೇಲಿನಂತೆ ಹಳೆಯ ವ್ಯವಸ್ಥೆಯನ್ನು ಮಾರ್ಪಾಡು ಮಾಡಲಾಗಿದೆ. ಮೇಲುನೋಟಕ್ಕೆ ಆಕರ್ಷಕವಾಗಿ ಕಾಣುವ ಈ ನಿಯಮಗಳು ನಿಜವಾಗಿ ಮೂಲ ಉದ್ದೇಶಗಳನ್ನು ಈಡೇರಿಸುತ್ತವೆಯೆ ? ರಾಜಕೀಯ ಹಸ್ತಕ್ಷೇಪವನ್ನು ತಪ್ಪಿಸುವುದು ಇದರಿಂದ ಸಾಧ್ಯವೇ ? ಶಿಕ್ಷಣ ಹಾಗೂ ಸಂಶೋಧನೆಗಳ ಗುಣಮಟ್ಟ ಪ್ರಸ್ತುತ ವ್ಯವಸ್ಥೆಯಿಂದ ಸುಧಾರಿಸಬಲ್ಲದೇ ? ವಿಕೇಂದ್ರಿಕರಣದಿಂದ ಆಡಳಿತ ಶಕ್ತಿಶಾಲಿಯಾಗಬಲ್ಲದೇ ? ಎಂಬಿತ್ಯಾದಿ ಪ್ರಶ್ನೆಗಳು ಇಲ್ಲಿ ಪ್ರಸ್ತುತವಾಗುತ್ತವೆ. ಇಂಥ ಪ್ರಶ್ನೆಗಳು ಪ್ರಸ್ತುತ ಮಸೂದೆಯನ್ನು ವಿಮರ್ಶಾತ್ಮಕವಾಗಿ ನೋಡಲು ಪ್ರೇರೇಪಿಸುತ್ತವೆ. ಈ ಹಿನ್ನೆಲೆಯೊಳಗೆ ಇತರ ಕೆಲವು ವಿಚಾರಗಳನ್ನು ಪ್ರಸ್ತಾಪಿಸಬಹುದು

೧. ಉದ್ದೇಶಿತ ಸದರಿ ಮಸೂದೆಯು ರಾಜಕೀಯ ಹಸ್ತಕ್ಷೇಪವನ್ನು ತಪ್ಪಿಸುವುದು, ಅಧಿಕಾರ ವಿಕೇಂದ್ರೀಕರಣಗೊಳಿಸುವ ಉದ್ದೇಶದಿಂದ ಕಂಡುಕೊಂಡಿರುವ ಹೊಸ ವ್ಯವಸ್ಥೆಯಲ್ಲಿ ಅಧ್ಯಕ್ಷರಿಗೆ ನೀಡಿರುವ ಅಧಿಕಾರಗಳು ಅನೇಕ ಅನುಮಾನಗಳನ್ನು ಹುಟ್ಟುಹಾಕುತ್ತವೆ. ಅಧ್ಯಕ್ಷರ ಆಯ್ಕೆ ಪ್ರಜಾಸತ್ತಾತ್ಮಕ ರೀತಿಯಲ್ಲಿ ಇದೆಯಾದರೂ ಅದು ಸಮಕಾಲೀನ ವ್ಯವಸ್ಥೆಯಲ್ಲಿ ಎಷ್ಟರಮಟ್ಟಿಗೆ ಸಾಕಾರಗೊಳ್ಳುತ್ತದೆ ಎಂಬುದು ನಮಗೆ ಎದುರಾಗುವ ಮೊದಲ ಪ್ರಶ್ನೆ. ಅಧ್ಯಕ್ಷರ ಹುದ್ದೆಗೆ ಬರುವವರು ಕೇವಲ ಶೈಕ್ಷಣಿಕ ವಲಯದಿಂದಲೇ ಬರಬೇಕಿಲ್ಲ, ಕೈಗಾರಿಕಾ ಉದ್ಯಮಿಗಳು ಕೂಡ ಈ ಸ್ಥಾನಕ್ಕೆ ಅರ್ಹವಾದ್ದರಿಂದ ಅಂಥ ಹಿನ್ನೆಲೆಯಿಂದ ಬಂದವರು ಶಿಕ್ಷಣ ಪದ್ಧತಿಯನ್ನು ಒಂದು ಉದ್ಯಮವೆಂಬಂತೆ ನೋಡುವುದರಲ್ಲಿ ಅನುಮಾನವಿಲ್ಲ. ಹೀಗಾದರೆ, ಅದರ ದುಷ್ಪರಿಣಾಮಗಳು ಅಗಾಧವಾಗಿರುತ್ತವೆ. ಇನ್ನು ಅಧಿಕಾರ ವಿಕೇಂದ್ರೀಕರಣದ ನೆಪದಲ್ಲಿ ವಿಶ್ವವಿದ್ಯಾಲಯದ ವ್ಯವಸ್ಥೆಯೊಳಗೆ ಸೃಷ್ಟಿಯಾಗಲಿರುವ ಓಂಬುಡ್ಸ್‌ಮನ್, ಸಮಕುಲಾಧಿ ಪತಿಗಳು, ಆಡಳಿತ ಮಂಡಳಿ ಈ ವಿಭಾಗಗಳ ಮಧ್ಯೆ ವೃತ್ತಿ ಕಲಹಗಳು ಹೆಚ್ಚಾಗುವ ಸಂಭವವೇ ಹೆಚ್ಚು. ಇವೆಲ್ಲದರ ನಡುವೆ ಸರ್ಕಾರದ ಪಾತ್ರ ನಗಣ್ಯವೆ ಎಂಬುದು ಬಹುಮುಖ್ಯ ಪ್ರಶ್ನೆಯಾಗಿದೆ. ಅಧ್ಯಕ್ಷರು, ಆಡಳಿತ ಮಂಡಳಿ ಸದಸ್ಯರು ಸರ್ಕಾರದಿಂದಲೇ ನೇಮಕಗೊಳ್ಳುವವರಾದ್ದರಿಂದ ಇವರು ರಾಜಕಾರಣದ ಮುಖವಾಡವಾಗಿ ಕೆಲಸ ಮಾಡುತ್ತಾರೆಂಬುದು ಈಗಿನ ಕಲುಷಿತ ರಾಜಕೀಯ ವ್ಯವಸ್ಥೆಯನ್ನು ಗಮನಿಸಿದ ಯಾರಿಗಾದರೂ ಅರ್ಥವಾಗುವ ಸಂಗತಿಯಾಗಿದೆ.

೨. ಜಾಗತಿಕ ಮಟ್ಟಕ್ಕೆ ನಮ್ಮ ಶೈಕ್ಷಣಿಕ ಹಾಗೂ ಸಂಶೋಧನಾತ್ಮಕ ಗುಣಮಟ್ಟವನ್ನು ಎತ್ತರಿಸುವ ಆಶಯವುಳ್ಳ ಈ ಮಸೂದೆಯಲ್ಲಿ ಅಂಥ ಬೆಳವಣಿಗೆಗೆ ಬೇಕಾದ ನಿರ್ದಿಷ್ಟ ಕಲ್ಪನೆಗಳು ಇಲ್ಲದಿರುವುದು ಸ್ಪಷ್ಟವಾಗಿ ಕಾಣುತ್ತದೆ. ಈ ಆಶಯ ಈಡೇರುವುದಕ್ಕೆ ಶಿಕ್ಷಕರ ಬೆಳವಣಿಗೆ ಹಾಗೂ ವೃತ್ತಿಕೌಶಲಗಳು, ಇವುಗಳಿಗಿಂತ ಹೆಚ್ಚಾಗಿ ಕೆಲಸ ಮಾಡುವ ಮನಸ್ಸು ಬೇಕಾಗುತ್ತದೆ. ಶಿಕ್ಷಕರಲ್ಲಿ ಇಂಥ ಮನಸ್ಥಿತಿಯನ್ನು ತರುವುದಕ್ಕೆ ವಿಶ್ವವಿದ್ಯಾಲಯ ಮಾಡಬೇಕಾದ ಪ್ರಯತ್ನ ಎಂಥದ್ದು ಎಂಬುದರ ಬಗ್ಗೆ ಗಂಭೀರವಾಗಿ ಆಲೋಚಿಸಬೇಕಿದೆ.

೩. ವಿಶ್ವವಿದ್ಯಾಲಯದಲ್ಲಿ ಉನ್ನತಮಟ್ಟದ ಸಂಶೋಧನೆಗಳು ನಡೆಯಬೇಕೆಂಬುದರ ಬಗ್ಗೆ ಭಿನ್ನಾಭಿಪ್ರಾಯಗಳು ಇರಲಾರವು. ಆದರೆ ಅದಕ್ಕೆ ಬೇಕಾಗಿರುವ ಮೂಲಭೂತ ಸೌಕರ್ಯಗಳು ಮತ್ತು ಹಣಕಾಸಿನ ಸೌಲಭ್ಯಗಳು ಎಲ್ಲಿಂದ ದೊರೆಯುತ್ತವೆ ಎಂಬ ಪ್ರಶ್ನೆ ಎದುರಾಗುತ್ತದೆ. ಸರ್ಕಾರಗಳು ಯಾವುದೇ ಯೋಜನೆಗಳ ತತ್ವಗಳನ್ನು ಒಪ್ಪಿಕೊಂಡಷ್ಟು ಸುಲಭವಾಗಿ ಆರ್ಥಿಕ ಸಹಾಯವನ್ನು ನೀಡಲು ಒಪ್ಪಲಾರವು. ಸರ್ಕಾರಗಳ ಇಂಥ ಇಬ್ಬಗೆಯ ನೀತಿಗಳು ಉದ್ದೇಶಿತ ಗುರಿಗಳನ್ನು ತಲುಪುವದಕ್ಕೆ ಅಡ್ಡಿಯಾಗುತ್ತವೆ. ಈ ಹಿನ್ನೆಲೆಯೊಳಗೆ ವಿಶ್ವವಿದ್ಯಾಲಯಗಳು ಹಠಕ್ಕೆ ಬಿದ್ದರೆ ವಿದ್ಯಾರ್ಥಿಗಳ ಶುಲ್ಕವನ್ನು ಏರಿಸಿಕೊಳ್ಳಬಹುದು. ಇದು ಸಹ ಮತ್ತೊಂದು ದೊಡ್ಡ ಸಮಸ್ಯೆಗೆ ನಮ್ಮೆಲ್ಲರನ್ನು ಸಿಲುಕಿಸುತ್ತದೆ.

೪. ಈ ಮಸೂದೆಯ ಹಿಂದಿರುವ ಗುಪ್ತ ಅಜೆಂಡಾಗಳೆಂದರೆ ಭಾರತಕ್ಕೆ ಪ್ರವೇಶಿಸುವ ವಿದೇಶಿ ವಿಶ್ವವಿದ್ಯಾಲಯಗಳಿಗೆ ನಮ್ಮ ಶಿಕ್ಷಣ ವ್ಯವಸ್ಥೆಯಲ್ಲಿ ಸ್ಥಾನ ಕಲ್ಪಿಸಿಕೊಡುವುದು ಮತ್ತು ಸ್ವಾಯತ್ತತೆಯ ಹೆಸರಿನಲ್ಲಿ ಶಿಕ್ಷಣ ಸಂಸ್ಥೆಗಳನ್ನು ಖಾಸಗೀಕರಣಗೊಳಿಸುವುದೇ ಆಗಿದೆ. ಇದಕ್ಕೆ ಬೇಕಾಗಿರುವ ನಿಯಮಗಳು ಮಸೂದೆಯಲ್ಲಿ ಸೇರ್ಪಡೆಯೂ ಆಗಿವೆ. ಹಾಗಾಗಿ ಮಸೂದೆಯ ಈ ಮುಖದ ಬಗೆಗೆ ಗಂಭೀರ ಚಿಂತನೆಗಳು ನಡೆಯಬೇಕಿದೆ.

೫. ಪ್ರಸ್ತುತ ಮಸೂದೆಯಲ್ಲಿ ಕಂಡುಬರುವ ಮತ್ತೊಂದು ದೋಷವೆಂದರೆ, ವಿಶ್ವವಿದ್ಯಾಲಯವು ತನ್ನ ಆರ್ಥಿಕ ಸಂಪನ್ಮೂಲಗಳನ್ನು ಹೊಂದಿಸಿಕೊಳ್ಳುವ ಪ್ರಯತ್ನದಲ್ಲಿ ಸರ್ಕಾರಗಳನ್ನಷ್ಟೇ ಅಲ್ಲದೆ ಕೈಗಾರಿಕೋದ್ಯಮಿಗಳು, ಖಾಸಗೀ ಸಂಘ-ಸಂಸ್ಥೆ-ವ್ಯಕ್ತಿಗಳು, ಅಷ್ಟೇ ಅಲ್ಲದೆ ವಿದೇಶಿ ಮೂಲಗಳಿಂದಲೂ ಸಹಾಯ ಪಡೆದುಕೊಳ್ಳಬಹುದಾಗಿದೆ. ಹೀಗೆ ಮಾಡುವುದರಿಂದ ನಾವು ಅಂದುಕೊಂಡಿರುವ ಗುರಿಗಳನ್ನು ತಲುಪಲು ಹಲವಾರು ರೀತಿಯ ಅಡಚಣೆಗಳು ಎದುರಾಗುತ್ತವೆ.

೬. ನೇಮಕಾತಿಗಳಲ್ಲಿ ಸಾಮಾಜಿಕ ನ್ಯಾಯ ಹಾಗೂ ಗುಣಮಟ್ಟ ಇವೆರಡೂ ಸಮಾನವಾಗಿ ಪರಿಗಣಿತವಾಗಬೇಕಾಗಿದೆ. ಇದು ಸಹ ಸಮಕಾಲೀನ ಸಾಮಾಜಿಕ ಸಂದರ್ಭಗಳಲ್ಲಿ ಕಷ್ಟಸಾಧ್ಯ ಎನ್ನಬೇಕಾಗುತ್ತದೆ.

೭. ಇನ್ನು ವಿದ್ಯಾರ್ಥಿಗಳ ಪ್ರವೇಶಾತಿಯಲ್ಲಿ ದೇಶೀಯ ಹಾಗೂ ವಿದೇಶೀಯ ವಿದ್ಯಾರ್ಥಿಗಳ ಪ್ರವೇಶಕ್ಕೆ ಇಲ್ಲಿ ಅವಕಾಶವಿರುವುದರಿಂದ ಸಮಸ್ಯೆಗಳು ಮತ್ತಷ್ಟು ಉಲ್ಬಣವಾಗುತ್ತವೆ. ದೇಶೀಯ ವಿದ್ಯಾರ್ಥಿಗಳು ಹೊರಗಿನವರ ಜೊತೆ ಸ್ಪರ್ಧಿಸಬೇಕಾದ ಒತ್ತಡಕ್ಕೆ ಒಳಗಾಗುತ್ತಾರೆ.

ಇಂಥ ಹತ್ತಾರು ಸವಾಲುಗಳು ಪ್ರಸ್ತುತ ರೂಪುಗೊಳ್ಳುತ್ತಿರುವ ನವೀನಾತ್ಮಕ ವಿಶ್ವವಿದ್ಯಾಲಯಗಳಿಗೆ ಇರುತ್ತವೆ. ಸವಾಲುಗಳನ್ನು ಸಮರ್ಥವಾಗಿ ನಿಭಾಯಿಸಿ ನಮ್ಮ ನೆಲದ ಸ್ಥಿತಿ-ಗತಿಗಳಿಗನುಗುಣವಾಗಿ ರೂಪುಗೊಂಡರೆ ಇದೊಂದು ಉತ್ತಮ ಬೆಳವಣಿಗೆ ಆಗುತ್ತದೆ. ಇಷ್ಟೆಲ್ಲ ಸಮಸ್ಯೆ-ಸವಾಲುಗಳಿರುವ ಮಸೂದೆಯೊಂದು ಚರ್ಚೆಗಳಿಲ್ಲದೆ, ಮಾಹಿತಿಯೇ ಇಲ್ಲದೆ ಅಂಗೀಕಾರ ಪಡೆದಿರುವುದು ಪ್ರಜಾಸತ್ತಾತ್ಮಕ ವ್ಯವಸ್ಥೆಯ ವ್ಯಂಗ್ಯವೇ ಸರಿ. ಕಾಲ ಇನ್ನೂ ಮಿಂಚಿಲ್ಲ. ಮಸೂದೆ ರಾಜ್ಯಪಾಲರ ಅಂಗೀಕಾರಕ್ಕೆ ಕಾಯುತ್ತಿರುವ ಈ ಸಂದರ್ಭದಲ್ಲಾದರೂ ಅದರ ಕುರಿತ ಚರ್ಚೆಗಳಾಗಬೇಕಿದೆ. ಈ ನಡುವೆ ಎಐಡಿಎಸ್‌ಒನಂಥ ಒಂದೆರಡು ಸಂಘಟನೆಗಳು ಈ ಮಸೂದೆಯನ್ನು ವಿರೋಧಿಸುವ ಸಣ್ಣ ಪ್ರಮಾಣದ ಪ್ರಯತ್ನಗಳನ್ನು ಮಾಡಿರುವುದನ್ನು ಬಿಟ್ಟರೆ, ವ್ಯಕ್ತಿಗತವಾಗಿ ಯು. ಆರ್. ಅನಂತಮೂರ್ತಿ, ಎಂ.ವಿ. ನಾಡಕರ್ಣಿ, ಎಂ.ಎಸ್. ತಿಮ್ಮಪ್ಪ, ಹಿ.ಶಿ.ರಾಮಚಂದ್ರೇಗೌಡ ಅವರುಗಳು ಮಸೂದೆಯ ವಿರುದ್ಧ ಧ್ವನಿ ಎತ್ತಿದ್ದಾರೆ. ಈ ಪ್ರಯತ್ನಗಳನ್ನು ಹೊರತು ಪಡಿಸಿದರೆ ಇನ್ಯಾವುದೇ ಧ್ವನಿಗಳು ಕೇಳಿಸಿಲ್ಲ. ಇದೊಂದು ಆತಂಕದ ಸಂಗತಿಯೆ ! ಹಾಗಾಗಿ ಈಗಲಾದರೂ ಬರಲಿರುವ ಹೊಸ ವ್ಯವಸ್ಥೆಯನ್ನು ರೂಪಿಸುವ ಮಸೂದೆಯಲ್ಲಿ ಸಮಾಜಪರವಾದದ್ದು ಏನಿದೆ, ಜನವಿರೋಧಿಯಾದದ್ದು ಏನಿದೆ, ಎಂಬುದರ ಬಗ್ಗೆ ಅಧ್ಯಯನ- ಚಿಂತನ-ಮಂಥನಗಳು ನಡೆಯಬೇಕಿದೆ.

ಡಾ|| ಎಸ್. ಎಂ. ಮುತ್ತಯ್ಯ
ಸಹಾಯಕ ಪ್ರಾಧ್ಯಾಪಕರು, ಕನ್ನಡ ವಿಭಾಗ
ಸಹ್ಯಾದ್ರಿ ವಿಜ್ಞಾನ ಕಾಲೇಜು (ಸ್ವಾಯತ್ತ)
ಶಿವಮೊಗ್ಗ - ೫೭೭ ೨೦೩.



'ಮೆಲ್ಲಿಸುಗ ಹೆಲೆನೆ' ಅತಿ ಚಿಕ್ಕ ಹಕ್ಕಿ

# ಪ್ರಪಂಚದ ಅತಿ ಚಿಕ್ಕ ಹಕ್ಕಿ ಮೆಲ್ಲಿಸುಗ ಹೆಲೆನೆ !



ಅದರ ಆಹಾರ

ನಮ್ಮ ಕನ್ನಡ ಕವಿ ಬೇಂದ್ರೆಯವರು ಒಂದು ಕವನ ಬರೆದಿದ್ದಾರೆ. ಅದರಲ್ಲಿ ಅವರು ''ಹಕ್ಕಿ ಹಾರುತಿದೆ ನೋಡಿದಿರಾ ?'' – ಎಂದು ಓದುಗರನ್ನು ಪ್ರಶ್ನಿಸಿದ್ದಾರೆ. ಈ ಕವನ ಅತ್ಯಂತ ಜನಪ್ರಿಯವಾಗಿದ್ದು, ಸಾವಿರಾರು ಮಂದಿ ಓದಿ ಆನಂದಿಸಿದ್ದಾರೆ. ಆದರೂ ಕವಿವರ್ಯರು ಕೇಳಿದ ಪ್ರಶ್ನೆಗೆ ಯಾರೂ ''ನೋಡಿದೆ'' ಎಂದು ನೇರ ಉತ್ತರ ಕೊಟ್ಟಿಲ್ಲ. ಪ್ರಾಯಶಃ ಉತ್ತರಿಸಬೇಕಾದ ಪ್ರಮೇಯವೇ ಬಂದಿಲ್ಲ ಎನ್ನಬಹುದು. ಹಕ್ಕಿಯೊಂದು ಹಾರೋದನ್ನು ಎಲ್ಲರೂ ನೋಡಿಯೇ ಇರುವುದರಿಂದ ನೋಡಿದ್ದೀನಿ ಎಂದು ಹೇಳಬೇಕಾದ ಅಗತ್ಯವೇನಿದೆ ಎಂಬುದು ಎಲ್ಲರ ಅಭಿಪ್ರಾಯ. ಆದರೆ ಇದೇ ಪ್ರಶ್ನೆಯನ್ನು ವೆಸ್ಟ್ ಇಂಡೀಸ್‌ನ ಕ್ಯೂಬಾ ದ್ವೀಪದ ನಿವಾಸಿಗಳನ್ನು ಕೇಳಿದರೆ, ಮತ್ತು ಹಾರುತ್ತಿರುವ ಹಕ್ಕಿ 'ಮೆಲ್ಲಿಸುಗ ಹೆಲೆನೆ' ಎಂಬ ಪಕ್ಷಿವರ್ಗಕ್ಕೆ ಸೇರಿದ್ದರೆ, ''ಹಕ್ಕಿ ಹಾರೋದನ್ನು ನೋಡಿದ್ದೇವೆ'' ಎಂದು ಎದೆ ತಟ್ಟಿ ಹೇಳಬಲ್ಲವರು ಅತಿ ವಿರಳ.

ಕೇವಲ ಐದು ಪೈಸೆ ನಾಣ್ಯದಷ್ಟು, ಅಂದರೆ 2 ಗ್ರಾಂಗಳಷ್ಟು ತೂಕವಿರುವ 'ಬೀ ಹಮಿಂಗ್ ಬರ್ಡ್' ಎಂಬ ಹೆಸರಿನ ಪಕ್ಷಿವರ್ಗಕ್ಕೆ ಸೇರಿದ ಮೆಲ್ಲಿಸುಗ ಹೆಲೆನೆ ಎಂಬ ಭವ್ಯ ಹೆಸರನ್ನು ಹೊತ್ತಿರುವ ಕಪ್ಪು, ಕೆಂಪು, ಹಳದಿ, ನೀಲಿ, ಹಸಿರು ಇತ್ಯಾದಿ ಪಂಚವರ್ಣರಂಜಿತ ಪುಟ್ಟ ಪಕ್ಷಿಗಳು ವೆಸ್ಟ್‌ಇಂಡೀಸ್‌ನ ದ್ವೀಪ ಸಮೂಹಗಳಲ್ಲಿ ಆಗಾಗ್ಗೆ ಕಾಣಬರುತ್ತವೆ. ಇಡೀ ಪ್ರಪಂಚದಲ್ಲಿ ಅತಿ ಚಿಕ್ಕ ಹಕ್ಕಿ ಎಂದು ದಾಖಲೆ ಪಡೆದಿವೆ. ಇವುಗಳು ಉದ್ದ ಕೊಕ್ಕಿನಿಂದ ಪುಕ್ಕದವರೆಗೆ ಕೇವಲ ಎರಡು ಇಂಚು, ಪುಕ್ಕವನ್ನು ಬಿಟ್ಟರೆ ಇದರ ಮೈ ಉದ್ದ ಒಂದರಿಂದ ಒಂದೂಕಾಲು ಇಂಚು. ನೋಡಲು ಅತಿ ಸುಂದರ, ಆಕರ್ಷಕ.

ಇವುಗಳ ವಾಸ ಘನಘೋರ ಅರಣ್ಯಗಳಲ್ಲಿರುವ ನೂರಾರು ಅಡಿ ಎತ್ತರದ ಹೆಮ್ಮರಗಳ ಮೇಲೆ ಮಾತ್ರ! ಮರದ ಮೇಲೆ ಕೂತಿದ್ದಾಗ ಇವುಗಳ ದರ್ಶನ ತೀರ ದುರ್ಲಭ. ಏಕೆಂದರೆ, ಹಕ್ಕಿಯನ್ನು ಕಣ್ಣಿಗೆ ಗೋಚರಿಸದಂತೆ ಮುಚ್ಚಿ ಮರೆಮಾಡಲು ಮರದ ಒಂದೇ ಒಂದು ಎಲೆ ಸಾಕು. ಹಕ್ಕಿ ಹಾರುತ್ತಿರುವಾಗ ನೋಡಬಹುದಲ್ಲಾ, ಎನ್ನುವಿರಾ ? ಅದೂ ಕಷ್ಟಸಾಧ್ಯ. ಮೊದಲನೆಯದಾಗಿ, ಎಲ್ಲಿ ಮನುಷ್ಯ ಪ್ರವೇಶ ಸುಲಭವೋ ಅಂತಹ ಸಾಮಾನ್ಯ ಕಾಡುಗಳಲ್ಲಿ ಈ ಹಕ್ಕಿಗಳು ಕಂಡುಬರುವುದಿಲ್ಲ. ಅತಿ ದುರ್ಗಮವಾದ ಘನ ಗೊಂಡಾರಣ್ಯಗಳಲ್ಲಿ ಮಾತ್ರ ಆಗಾಗ್ಗೆ ಇವುಗಳ ದರ್ಶನ ಸಾಧ್ಯ. ಎರಡನೆಯದಾಗಿ, ಈ ಪುಟ್ಟ ಹಕ್ಕಿ ನಿಮ್ಮ ಕಣ್ಮುಂದೆಯೇ ಹಾರಿಹೋದರೂ ನೀವು ಅದನ್ನು ಗುರುತಿಸಲಾರಿರಿ. ಹಾರಿಹೋದದ್ದು ದುಂಬಿಯೋ, ಜೀರುಂಡೆಯೋ ಅಥವಾ ಹಕ್ಕಿಯೋ ಎಂದು ನೀವು ಭ್ರಮೆಗೊಳಗಾಗುವುದು ಖಚಿತ. ಮತ್ತೊಮ್ಮೆ ಕಣ್ಬಿಟ್ಟು ನೋಡೋಣ ಎನ್ನುವಷ್ಟರಲ್ಲಿ ಇದು ತನ್ನ ರೆಕ್ಕೆಗಳನ್ನು ಒಂದು ಸೆಕೆಂಡಿಗೆ 80 ಬಾರಿ ಪಟಪಟ ಬಡಿದು, ವಾಯುವೇಗದಲ್ಲಿ ಹಾರಿ ಎತ್ತಲೋ ಮಾಯವಾಗಿರುತ್ತೆ. ಈ ಕಾರಣಗಳಿಂದ ಬರಿಕಣ್ಣಿನಿಂದ ಅದನ್ನು ನೋಡಿ ಗುರುತಿಸುವುದು ಅತಿ ಕಷ್ಟ. ಎಷ್ಟೋ ಸಲ ವಿಡಿಯೋ ಕ್ಯಾಮೆರಾಗಳ ವ್ಯಾಪ್ತಿಗೇ ಬರುವುದಿಲ್ಲ ಎಂದ ಮೇಲೆ ಅದರ ಕಿರಿಮೆಯನ್ನು ವೇಗದ ಮಿತಿಯನ್ನು ನೀವೇ ಊಹಿಸಬಹುದು. ಹಾರುತ್ತಿರುವಾಗ ಈ ಹಕ್ಕಿ ಒಂದು ಸಣ್ಣ ದುಂಬಿಯಂತೆ ಝೇಂಕರಿಸುತ್ತಾ ತೀವ್ರಗತಿಯಲ್ಲಿ ಸಾಗಿ ಎತ್ತಲೋ ಮಾಯವಾಗಿಬಿಡುತ್ತೆ.

ಮೂರ್ತಿ ಚಿಕ್ಕದಾದರೂ ಕೀರ್ತಿ ದೊಡ್ಡದು ಎಂಬ ನಾಣ್ಣುಡಿಯಂತೆ ಈ ಚಿಕ್ಕ ಹಕ್ಕಿಯ ಗ್ರಾಸ ಮಾತ್ರ ಅತ್ಯಧಿಕ. ತನ್ನ ತೂಕದ ಎಷ್ಟೋ ಪಟ್ಟು ಜಾಸ್ತಿ ಆಹಾರ ಬೇಕು ಇದಕ್ಕೆ. ಇದರ ಮುಖ್ಯ ಆಹಾರ ಒಂದು ಬಗೆಯ ಮಕರಂದ. ಸಮುದ್ರದಂಡೆಯಲ್ಲಿ ಯಥೇಷ್ಟವಾಗಿ ಬೆಳೆಯುವ ಒಂದು ಜಾತಿಯ ಕೋರಲ್ ಸಸ್ಯದ ಹೂವುಗಳಲ್ಲಿ ಅಧಿಕ ಪ್ರಮಾಣದಲ್ಲಿ ಶೇಖರವಾಗುವ ಜೇನುತುಪ್ಪವೇ ಇದರ ಮುಖ್ಯ ಆಹಾರ. ಇದರ ಜೊತೆಗೆ ಸಣ್ಣಪುಟ್ಟ ಜೇಡಗಳು, ನೊಣ ಮತ್ತಿತರ ಕೀಟಗಳನ್ನು ಫಲಾಹಾರವಾಗಿ ನುಂಗುವುದೂ ಉಂಟು.

ಈ ಪುಟ್ಟ ಹಕ್ಕಿ ಮೊಟ್ಟೆ ಇಡುವುದು ಒಂದು ಸಲಕ್ಕೆ ಎರಡೇ ಎರಡು. ಗಾತ್ರದಲ್ಲಿ ಅವು ಕಡಲೆಕಾಳಿನಷ್ಟು ಚಿಕ್ಕದಾಗಿರುತ್ತವೆ. ಮೇ ಮತ್ತು ಜೂನ್ ತಿಂಗಳಲ್ಲಿ ಮೊಟ್ಟೆ ಒಡೆದು ಮರಿಗಳು ಈಚೆ ಬರುತ್ತವೆ.

ಮೆಲ್ಲಿಸುಗ ಹೆಲೆನೆ ಪಕ್ಷಿಗಳ ಬಗ್ಗೆ ಹೆಚ್ಚು ಮಾಹಿತಿ, ಪಕ್ಷಿ ವಿಶೇಷತಜ್ಞರಿಗೆ ಇನ್ನೂ ಲಭ್ಯವಾಗಿಲ್ಲ. ಈ ಕುರಿತು ಅವರ ಸಂಶೋಧನಾ ಕಾರ್ಯ ಮುಂದುವರಿದಿದೆ. ಕೆಲವು ವರ್ಷಗಳ ಹಿಂದೆ ಸಮೃದ್ಧಿಯಾಗಿ ಕಾಣಬರುತ್ತಿದ್ದ ಈ ಪಕ್ಷಿವರ್ಗ, ಇತ್ತೀಚೆಗೆ ವಿರಳ ವಾಗುತ್ತಿರುವುದು ಸಂಶೋಧಕರ ಆತಂಕಕ್ಕೆ ಕಾರಣವಾಗಿದೆ. ಕ್ಯೂಬಾ ಮತ್ತು ಸುತ್ತಮುತ್ತಣ ದ್ವೀಪಗಳಲ್ಲಿ ಸ್ವೇಚ್ಛೆಯಿಂದ ಹಾರಾಡುತ್ತಿದ್ದ ಮೆಲ್ಲಿಸುಗ ಹೆಲೆನೆಗಳ ಸಂಖ್ಯೆ ಈಗ ಹುಡುಕಿದರೂ ಸಿಗದಷ್ಟು ಕಡಿಮೆ ಪ್ರಮಾಣದಲ್ಲಿದೆ. ನಿಕಟ ಭವಿಷ್ಯದಲ್ಲಿ ನಿರ್ನಾಮವಾಗ ಬಹುದಾದ ಸೂಚನೆಗಳು ಕಂಡುಬರುತ್ತಿವೆ. ಕ್ಯೂಬಾ ಸರಕಾರವು ಈ ಪಕ್ಷಿವರ್ಗವನ್ನು ಸಂರಕ್ಷಿಸಲು, ಅವುಗಳನ್ನು ಅಭಿವೃದ್ಧಿಗೊಳಿಸಲು ಸಕಲ ಪ್ರಯತ್ನಗಳನ್ನೂ ಮಾಡುತ್ತಿದೆ. ಆದರೂ ಇದರ ಭವಿಷ್ಯ ಏನೆಂದು ಹೇಳಲು ಯಾವ ವಿಜ್ಞಾನಿಗೂ ಸಾಧ್ಯವಾಗುತ್ತಿಲ್ಲ.

ಬಿ. ವಿ. ಸುಬ್ಬರಾವ್
೨೨೦೩-ಎಫ್, ೨೩ನೇ ಅಡ್ಡರಸ್ತೆ, ಬನಶಂಕರಿ ೨ನೇ ಹಂತ, ಬೆಂಗಳೂರು - ೫೬೦ ೦೭೦

# ಕನ್ನಡ ದಿನಪತ್ರಿಕೆಗಳಲ್ಲಿ ಎಷ್ಟು ಕೃಷಿ ಸುದ್ದಿ ?

ಡಾ|| ನಿರಂಜನ ವಾನಳ್ಳಿ



ಈ ವರೆಗೂ ನಾವು ಅಂದಾಜಿಗೆ ಹೇಳುತ್ತಿದ್ದ ಒಂದು ವಿಷಯಕ್ಕೆ ಇಂದು ಆಧಾರ ಸಿಕ್ಕಿದೆ. ಕನ್ನಡ ದಿನಪತ್ರಿಕೆಗಳಲ್ಲಿ ಕೃಷಿ ಸುದ್ದಿಗೆ ಎಷ್ಟು ಮಹತ್ವ ಸಿಗುತ್ತಿದೆ ಎಂಬ ಬಗ್ಗೆ ಮೈಸೂರು ವಿಶ್ವವಿದ್ಯಾನಿಲಯದಲ್ಲಿ ಪ್ರೊ|| ಎನ್. ಉಷಾರಾಣಿಯವರ ಮಾರ್ಗದರ್ಶನದಲ್ಲಿ ಶ್ರೀ. ಸುರೇಶ್ ಕುಮಾರ್ ಅವರು ಅಧ್ಯಯನ ನಡೆಸಿ ಒಂದು ವರ್ಷ ಸತತವಾಗಿ ಕನ್ನಡದ ಪ್ರಮುಖ ಐದು ದಿನಪತ್ರಿಕೆಗಳನ್ನು ಅಳೆದು ಕೃಷಿ ಸುದ್ದಿಗಳ ದೃಷ್ಟಿಯಿಂದ ಅವುಗಳ ಬಂಡವಾಳವನ್ನು ಬಯಲುಮಾಡಿದ್ದಾರೆ. ಅದನ್ನು ಶ್ರೀ ಸುರೇಶ ಕುಮಾರ ಅವರು ಪುಸ್ತಕ ರೂಪದಲ್ಲಿಯೂ ಹೊರತಂದಿದ್ದು ''ಕನ್ನಡ ದಿನಪತ್ರಿಕೆಗಳಲ್ಲಿ ಕೃಷಿ ಸುದ್ದಿಗಳು'' ಎಂಬ ಶಿರೋನಾಮೆಯಲ್ಲಿ ಪ್ರಕಟಗೊಂಡಿದೆ. ಈ ಅಧ್ಯಯನದ ವಿಶೇಷವೆಂದರೆ ಕನ್ನಡದ ಐದು ಪ್ರಮುಖ ದಿನಪತ್ರಿಕೆಗಳಲ್ಲಿ ರಾಜಕೀಯ, ಕೃಷಿ, ಅಪರಾಧ, ಕ್ರೀಡೆ ಹಾಗೂ ಇತರ ವರದಿಗಳು ಎಷ್ಟು ಪ್ರಮಾಣದಲ್ಲಿವೆ ಎಂಬುದನ್ನು ಒಂದು ವರ್ಷ ನಿಖರವಾಗಿ ಇಂಚುಪಟ್ಟಿ ಇಟ್ಟು ಅಳೆದಿದ್ದಾರೆ. ೨೦೦೧ರ ಏಪ್ರಿಲ್‌ನಿಂದ ಹಿಡಿದು ೨೦೦೨ರ ಮಾರ್ಚ್‌ವರೆಗೆ ಈ ಅಧ್ಯಯನ ಕೈಗೊಳ್ಳಲಾಗಿದೆ. ಇದರ ಪರಿಣಾಮವೆಂದರೆ ಕನ್ನಡ ಪತ್ರಿಕೋದ್ಯಮದಲ್ಲಿ ರಾಜಕೀಯ ವರದಿಗಳೆಷ್ಟು, ಕೃಷಿ ವರದಿಗಳೆಷ್ಟು, ಕ್ರೀಡಾವರದಿಗಳೆಷ್ಟು ಎಂದು ನಿಖರವಾಗಿ ಈಗ ನಾವು ಹೇಳಬಹುದು. ದೇಶಸೇವೆ ಮಾಡುತ್ತೇವೆಂದು ಬೊಗಳೆ ಬಿಡುವ ಸಂಪಾದಕರುಗಳನ್ನು ಅವರಿಗಿರುವ ಸಾಮಾಜಿಕ ಜವಾಬ್ದಾರಿ ಎಷ್ಟು ಎಂದು ಕೇಳಬಹುದು. ಸುರೇಶ ಕುಮಾರ ತಮ್ಮ ಅಧ್ಯಯನದಲ್ಲಿ ಇದಕ್ಕೆ ನಿಖರವಾಗಿ ಆಧಾರ ಒದಗಿಸಿರುವುದರಿಂದ ಅವರಿಗೆ ಅಭಿನಂದನೆ ಸಲ್ಲಬೇಕು.

ಇರುವುದರಲ್ಲಿ ಒಂದು ಸಮಾಧಾನದ ವಿಷಯವೆಂದರೆ ನಮ್ಮ ಕನ್ನಡದ ಪ್ರಮುಖ ದಿನಪತ್ರಿಕೆಗಳು ಇಂಗ್ಲಿಷ್ ಪತ್ರಿಕೆಗಳಷ್ಟು ಜಾಹೀರಾತುಮಯವಾಗಿಲ್ಲ. ಎರಡನೇ ಪತ್ರಿಕಾ ಆಯೋಗವು ಪತ್ರಿಕೆಗಳಲ್ಲಿ ಸುದ್ದಿ ಹಾಗೂ ಜಾಹೀರಾತಿನ ಪ್ರಮಾಣವು ೬೦:೪೦ ಇರಬೇಕು, ಇದಕ್ಕಿಂತ ಸುದ್ದಿಯ ಪ್ರಮಾಣ ಕಡಿಮೆಯಾಗಬಾರದು ಎಂದು ಆದೇಶಿಸಿದೆ. ಇಂಗ್ಲಿಷ್ ಪತ್ರಿಕೆಗಳಲ್ಲಿ ಈ ಮಟ್ಟ ತಿರುಗುಮುರುಗಾಗಿರುತ್ತದೆ. ಆದರೆ ಕನ್ನಡ ಪತ್ರಿಕೆಗಳಲ್ಲಿ ಪತ್ರಿಕಾ ಆಯೋಗ ಹೇಳಿದ ಮಟ್ಟವನ್ನು ಮೀರಿಲ್ಲ ಎಂಬುದು ಸಮಾಧಾನದ ಸಂಗತಿ. ಆದರೆ ಈ ಒಳ್ಳೆಯತನ ಜಾಹೀರಾತು ಸಿಗದ ಕಾರಣಕ್ಕೋ ಅಥವಾ ಸುದ್ದಿ ನೀಡುವ ಬದ್ಧತೆಯಿಂದಲೋ ಎಂಬುದು ಸ್ಪಷ್ಟವಿಲ್ಲ. ಅದೇನೇ ಇದ್ದರೂ ಕನ್ನಡದ ಪ್ರಮುಖ ದಿನಪತ್ರಿಕೆಗಳಲ್ಲಿ ಸುದ್ದಿ ಹಾಗೂ ಜಾಹೀರಾತಿನ ಪ್ರಮಾಣ ಈ ಕೆಳಗಿನಂತಿವೆ :

ಪ್ರಜಾವಾಣಿ : ೮೦.೭೭: ೧೯.೨೩
ವಿಜಯ ಕರ್ನಾಟಕ : ೭೯.೪೬ : ೨೦.೫೪
ಸಂಯುಕ್ತ ಕರ್ನಾಟಕ : ೭೯.೨೪ : ೨೦.೭೬
ಕನ್ನಡ ಪ್ರಭ : ೭೬.೧ : ೨೩.೯
ಉದಯವಾಣಿ : ೭೦.೬೨ : ೨೯.೩೮

ಸಮಾಧಾನದ ವಿಷಯವೆಂದರೆ ನಮ್ಮ ಕನ್ನಡದ ಪ್ರಮುಖ ದಿನಪತ್ರಿಕೆಗಳು ಇಂಗ್ಲಿಷ್ ಪತ್ರಿಕೆಗಳಷ್ಟು ಜಾಹೀರಾತುಮಯವಾಗಿಲ್ಲ. ಎರಡನೇ ಪತ್ರಿಕಾ ಆಯೋಗವು ಪತ್ರಿಕೆಗಳಲ್ಲಿ ಸುದ್ದಿ ಹಾಗೂ ಜಾಹೀರಾತಿನ ಪ್ರಮಾಣವು ೬೦:೪೦ ಇರಬೇಕು, ಇದಕ್ಕಿಂತ ಸುದ್ದಿಯ ಪ್ರಮಾಣ ಕಡಿಮೆಯಾಗಬಾರದು ಎಂದು ಆದೇಶಿಸಿದೆ. ಇಂಗ್ಲಿಷ್ ಪತ್ರಿಕೆಗಳಲ್ಲಿ ಈ ಮಟ್ಟ ತಿರುಗುಮುರುಗಾಗಿರುತ್ತದೆ. ಆದರೆ ಕನ್ನಡ ಪತ್ರಿಕೆಗಳಲ್ಲಿ ಪತ್ರಿಕಾ ಆಯೋಗ ಹೇಳಿದ ಮಟ್ಟವನ್ನು ಮೀರಿಲ್ಲ ಎಂಬುದು ಸಮಾಧಾನದ ಸಂಗತಿ. ಆದರೆ ಈ ಒಳ್ಳೆಯತನ ಜಾಹೀರಾತು ಸಿಗದ ಕಾರಣಕ್ಕೋ ಅಥವಾ ಸುದ್ದಿ ನೀಡುವ ಬದ್ಧತೆಯಿಂದಲೋ ಎಂಬುದು ಸ್ಪಷ್ಟವಿಲ್ಲ.



ಹಾಗಾದರೆ, ಕನ್ನಡ ದಿನ ಪತ್ರಿಕೆಗಳಲ್ಲಿ ವಿವಿಧ ವಿಷಯಗಳಿಗೆ ಎಷ್ಟೆಷ್ಟು ಜಾಗ ನೀಡಲಾಗಿದೆ ನೋಡೋಣ :

ಪ್ರಜಾವಾಣಿ ದಿನಪತ್ರಿಕೆ ರಾಜಕೀಯಕ್ಕೆ ಶೇಕಡ ೨೬.೮೨ರಷ್ಟು ಸ್ಥಾನ ನೀಡಿದರೆ ಕನ್ನಡ ಪ್ರಭ ಶೇಕಡ ೨೭.೩ರಷ್ಟು ಜಾಗ ನೀಡಿದೆ. ಸಂಯುಕ್ತ ಕರ್ನಾಟಕ ಶೇಕಡ ೨೭.೦೩ರಷ್ಟು ಹಾಗೂ ಉದಯವಾಣಿ ಶೇಕಡ ೨೩.೭೬ರಷ್ಟು, ವಿಜಯ ಕರ್ನಾಟಕ ಶೇಕಡ ೨೫.೬೩ರಷ್ಟು, ಜಾಗವನ್ನು ರಾಜಕೀಯ ವರದಿಗಳಿಗೆ ನೀಡಿವೆ. ಇದಕ್ಕೆ ವಿರುದ್ಧವಾಗಿ ಈ ಎಲ್ಲಾ ಪತ್ರಿಕೆಗಳು ಕೃಷಿಗೆ ನೀಡಿದ ಸ್ಥಳ ಇಂತಿವೆ. ಪ್ರಜಾವಾಣಿ (ಶೇ. ೪.೬೧), ಕನ್ನಡ ಪ್ರಭ (ಶೇ. ೧.೪೮), ಸಂಯುಕ್ತ ಕರ್ನಾಟಕ (ಶೇ. ೨.೬೨), ಉದಯವಾಣಿ (ಶೇ. ೧.೫೩), ವಿಜಯ ಕರ್ನಾಟಕ (ಶೇ. ೪.೫೮). ಇದರಿಂದ ಸ್ಪಷ್ಟವಾಗುವ ಸಂಗತಿಯೆಂದರೆ ಹೆಸರು ಬೇರೆಯಾದರೂ ಈ ಪತ್ರಿಕೆಗಳ ಆಸಕ್ತಿಗಳು ಒಂದೇ. 'ದೇವನೊಬ್ಬ ನಾಮ ಹಲವು' ಎನ್ನುವ ಹಾಗೆ ಪತ್ರಿಕೆಗಳ ಹೆಸರು ಬೇರೆ ಬೇರೆಯಾದರೂ ಅವು ಪೋಷಿಸುವ ವಿಷಯಗಳು ಒಂದೇ. ಈ ಪತ್ರಿಕೆಗಳ ವಿಷಯವಾರು ಸರಾಸರಿ ಪ್ರಮಾಣ ಇಂತಿವೆ. :

ರಾಜಕೀಯ : ಶೇಕಡ ೨೬.೧೧

ಕ್ರೀಡೆ : ಶೇಕಡ ೮.೩೭

ಅಪರಾಧ : ಶೇಕಡ ೬.೮೨

ಕೃಷಿ : ಶೇಕಡ ೨.೯೭

ಇತರೆ : ಶೇಕಡ ೫೫.೭೩

ಸುರೇಶ್ ಕುಮಾರ್ ಅವರ ಅಧ್ಯಯನದಲ್ಲಿ ಕಂಡುಬಂದ ಇನ್ನಿತರ ವಿಶೇಷಗಳೆಂದರೆ -

✶ ಕೃಷಿ ವಿಷಯಗಳು ಬಹುತೇಕ ಅಂದರೆ ಶೇಕಡ ೬.೬೮ರಷ್ಟು ಮಾತ್ರ ಮುಖಪುಟದ ಸುದ್ದಿಗಳಾದರೆ ಶೇಕಡ ೯೩.೩೨ರಷ್ಟು ಒಳಪುಟದ ಸುದ್ದಿಗಳೇ ಆಗಿವೆ.

✶ ವರ್ಷದ ಯಾವುದೇ ತಿಂಗಳು ಕನ್ನಡ ಪತ್ರಿಕೆಗಳಲ್ಲಿ ಕೃಷಿಯ ವರದಿಗಳು ಶೇಕಡ ಆರಕ್ಕಿಂತ ಹೆಚ್ಚು ಪ್ರಕಟಗೊಂಡಿದ್ದಿಲ್ಲ. ಸಾಮಾನ್ಯವಾಗಿ ಶೇಕಡ ನಾಲ್ಕರಿಂದ ಆರರ ಒಳಗೆ ಕೃಷಿ ವರದಿಗಳಿರುತ್ತವೆ.

✶ ಅದೇ ವೇಳೆಗೆ ರಾಜಕೀಯ ವರದಿಗಳು ಸರಾಸರಿ ಶೇಕಡ ೨೭ರಷ್ಟಿವೆ. ಶೇಕಡ ೨೩ಕ್ಕಿಂತ ಕಡಿಮೆ ಯಾವ ಪತ್ರಿಕೆಯಲ್ಲೂ ಯಾವ ಸಂದರ್ಭದಲ್ಲೂ ಆಗಿಲ್ಲ!

✶ ಕನ್ನಡ ದಿನಪತ್ರಿಕೆಗಳಲ್ಲಿ ಈ ಅವಧಿಯಲ್ಲಿ ಕೃಷಿಗೆ ಸಂಬಂಧಿಸಿದ ವಾಚಕರ ಪತ್ರಗಳು ಪ್ರಕಟವಾಗಿರುವುದು ಸರಾಸರಿ ಶೇಕಡ ಒಂದಕ್ಕಿಂತ ಕಡಿಮೆ.

✶ ಕನ್ನಡ ದಿನಪತ್ರಿಕೆಗಳಲ್ಲಿ ಕ್ರೀಡೆಗೆ ಸಿಕ್ಕ ಸ್ಥಾನ ಕೃಷಿಗಿಂತ ಹೆಚ್ಚು ಅಂದರೆ ಸರಾಸರಿ ಶೇಕಡ ೮.೩೭ರಷ್ಟು.

✶ ಸುರೇಶ ಕುಮಾರ್ ಅವರ ಅಧ್ಯಯನದ ಪ್ರಕಾರ ಕೃಷಿ ಸಂಬಂಧೀ ಲೇಖನಗಳಿಗಿಂತ ವರದಿಗಳೇ ಹೆಚ್ಚು. ಅವುಗಳಲ್ಲೂ ತಿಳುವಳಿಕೆ ನೀಡುವ ವರದಿಗಳೇ ಹೆಚ್ಚು. ಆಧುನಿಕ ತಂತ್ರಜ್ಞಾನ ಕುರಿತಾದ ವರದಿಗಳು ನಗಣ್ಯ.

✶ ಎಲ್ಲ ಪತ್ರಿಕೆಗಳಲ್ಲೂ ಓದುಗರ ಪುಟವಿರುತ್ತದೆ. ಅವು ಜನಸಾಮಾನ್ಯರ ನಾಡಿಮಿಡಿತ ಅಳೆಯಲು ಸಹಕಾರಿ. ಪ್ರಜಾಪ್ರಭುತ್ವದಲ್ಲಿ ಓದುಗರ ಪತ್ರಗಳಿಗೆ ಬಹಳ ಮಹತ್ವ ಇದೆ. ಹೀಗಿರುವಾಗ ಈ ಓದುಗರ ಓಲೆಗಳ ಜಾಗದಲ್ಲಿ ಕೃಷಿ ವಿಷಯಗಳಿಗೆ ಸಿಕ್ಕ ಅವಕಾಶವನ್ನು ಅಳೆದರೆ ಶೇಕಡ ಒಂದಕ್ಕಿಂತ ಕಡಿಮೆ ಇದೆ. ಪ್ರಜಾವಾಣಿ ಪತ್ರಿಕೆಯಲ್ಲಿ ಅತೀ ಹೆಚ್ಚು ಸ್ಥಳವನ್ನು ಕೃಷಿ ಕುರಿತ ಪತ್ರಗಳಿಗೆ ಕೊಟ್ಟಿದ್ದಾರೆ - ಅದೂ ಶೇಕಡ ೦.೭೬ರಷ್ಟು!

✶ ವಿಷಾದವೆಂದರೆ, ೨೦೦೧-೨೦೦೨ನೇ ವರ್ಷದಲ್ಲಿ ಕೃಷಿ ವಿಷಯಗಳ ಕುರಿತು ಬಂದ ಸಂಪಾದಕೀಯಗಳು ಬಹಳ ಕಡಿಮೆ. ಸಂಪಾದಕೀಯಗಳು ಪತ್ರಿಕಾ ಮಾಲೀಕರ ಅಭಿಪ್ರಾಯಗಳ ಅಭಿವ್ಯಕ್ತಿ. ಇದಕ್ಕೆ ಆಳುವ ಜನ ಬಹಳ ಬೆಲೆ ಕೊಡುತ್ತಾರೆ. ಸಂಪಾದಕರುಗಳಿಗೆ ಬದ್ಧತೆಯಿದ್ದರೆ ಮಾತ್ರ ಕೃಷಿ ಕುರಿತ ಸಂಪಾದಕೀಯಗಳನ್ನು ಬರೆಯುತ್ತಾರೆ. ಈ ಅವಧಿಯಲ್ಲಿ ಉದಯವಾಣಿ ಪತ್ರಿಕೆ ಸಂಪಾದಕೀಯವನ್ನೇ ಬರೆಯುತ್ತಿರಲಿಲ್ಲ. ಹೀಗಾಗಿ ಸಹಜವಾಗಿ ಆ ಪತ್ರಿಕೆಯಲ್ಲಿ ಸಂಪಾದಕೀಯ ಕಂಡು ಬರಲಿಲ್ಲ. ಉಳಿದ ಪತ್ರಿಕೆಗಳಾದರೂ ಬರೆದ ಸಂಪಾದಕೀಯಗಳತ್ತ ನೋಡಿದರೆ ನಾಚಿಕೆಯಾಗುತ್ತದೆ. ಒಂದು ವರ್ಷದಲ್ಲಿ ಕೃಷಿ ಕುರಿತ ಸಂಪಾದಕೀಯಕ್ಕೆ ನೀಡಿದ ಜಾಗವೆಂದರೆ, ಪ್ರಜಾವಾಣಿ ೧೦೬ ಕಾಲಂ ಸೆಂ.ಮೀ.ಗಳು, ವಿಜಯ ಕರ್ನಾಟಕ ೧೬೮ ಕಾಲಂ ಸೆಂ.ಮೀ.ನಷ್ಟು ಜಾಗ ನೀಡಿವೆ. ಸಂಯುಕ್ತ ಕರ್ನಾಟಕ ೧೬೨ ಸೆಂ.ಮೀ. ಕಾಲಂನಷ್ಟು ಜಾಗ ನೀಡಿದರೆ ಕನ್ನಡ ಪ್ರಭ ನೀಡಿದ ಜಾಗ ಕೇವಲ ೫೨ ಸೆಂ.ಮೀ.ನಷ್ಟು ಜಾಗ. ಇದಕ್ಕೆ ಪ್ರತ್ಯೇಕ ವಿವರಣೆ ಬೇಕಿಲ್ಲ.

ಈ ಪುಸ್ತಕವನ್ನು ಬಿಡುಗಡೆ ಮಾಡಿದ 'ಪ್ರಜಾವಾಣಿ' ಮೈಸೂರು ಆವೃತ್ತಿಯ ಸಂಪಾದಕ ರವೀಂದ್ರ ಭಟ್ ಅವರು ಹೇಳಿದ ಮಾತು ಮುಟ್ಟಿನೋಡಿಕೊಳ್ಳುವಂತಿತ್ತು. ಈಗ ಪತ್ರಿಕೆಗಳಲ್ಲಿ ಬರುವ ಹೆಚ್ಚಿನ ಸುದ್ದಿಗಳು ರೈತರ ಆತ್ಮಹತ್ಯೆ ಕುರಿತವು. ಈಗ ಪತ್ರಿಕೆಗಳಿಗೆ ರೈತರ ಆತ್ಮಹತ್ಯೆ ಪ್ರಮುಖ ಸುದ್ದಿಯಲ್ಲ, ಕೆಲವೊಮ್ಮೆ ಸುದ್ದಿಯೇ ಅಲ್ಲ. ಜಾಗವಿದ್ದರೆ ಎಲ್ಲೋ ಒಮ್ಮೊಮ್ಮೆ, ಅದೂ ಒಳಪುಟಗಳಲ್ಲಿ ಕಾಣಿಸಿಕೊಳ್ಳುತ್ತವೆ. ಸುರೇಶ್ ಕುಮಾರ್ ಅವರ ಅಧ್ಯಯನ ಇದಕ್ಕೆ ಬಹಳಷ್ಟು ಸಾಕ್ಷಿ ಒದಗಿಸುತ್ತದೆ.

ಆದರೆ ವಾಸ್ತವ ಇಂತಿದ್ದರೆ ಅದಕ್ಕೆ ಸಂಪಾದಕರುಗಳು ಏನು ಹೇಳುತ್ತಾರೆ, ಕನ್ನಡ ದಿನಪತ್ರಿಕೆಗಳಲ್ಲಿ ಕೃಷಿ ಸುದ್ದಿಯ ಈ ಪರಿಸ್ಥಿತಿಗೆ ಸಂಪಾದಕರುಗಳ ಬದ್ಧತೆಯ ಕೊರತೆ ಕಾರಣವೊ ಅಥವಾ ಬೇರೆ ಕಾರಣಗಳಿವೆಯೋ ಎಂಬುದರ ಬಗ್ಗೆ ಪ್ರತ್ಯೇಕವಾಗಿ ಅಧ್ಯಯನವಾಗಬೇಕಿದೆ.

**ಡಾ॥ ನಿರಂಜನ ವಾನಳ್ಳಿ**
ನಂ. ೩೧, ಕೃಷ್ಣಮೂರ್ತಿ ಬಡಾವಣೆ, ತೊಣಚಿಕೊಪ್ಪಲು
ಮೈಸೂರು - ೫೭೦ ೦೦೯

## ಅಂತರ

ಶಾಸ್ತ್ರಕ್ಕೂ ಕಾವ್ಯಕ್ಕೂ
ಏನಂತರ ?
ಶಾಸ್ತ್ರ ಸ್ಥಾವರ;
ಕಾವ್ಯ ಜಂಗಮ !
(ಹೃದಯಂಗಮ)

**ಸಿ.ಪಿ.ಕೆ.**
ಮೈಸೂರು




*ಇದೇ ೪-೩-೨೦೦೨ರಂದು ಬೆಂಗಳೂರಿನ ಕನ್ನಡ ಸಾಹಿತ್ಯ ಪರಿಷತ್ತಿನ ಸಭಾಂಗಣವೊಂದರಲ್ಲಿ ನವಕರ್ನಾಟಕ ಪ್ರಕಾಶನದ ಆರೋಗ್ಯ-ವೈದ್ಯಕೀಯ ವಿಷಯದ ಮಾಹಿತಿ ನೀಡುವ ಆರು ಪುಸ್ತಕಗಳ ಬಿಡುಗಡೆ ಸಮಾರಂಭ ನಡೆಯಿತು. ಡಾ॥ ಪದ್ಮಿನಿ ಪ್ರಸಾದ್ ಸಭೆಯ ಅಧ್ಯಕ್ಷತೆಯನ್ನು ವಹಿಸಿ ಕೃತಿಗಳನ್ನು ಅನಾವರಣಗೊಳಿಸಿದರು. ಡಾ॥ ನಾ. ಸೋಮೇಶ್ವರ ಕೃತಿಗಳ ಪರಿಚಯವನ್ನು ಸೊಗಸಾಗಿ ಮಾಡಿಕೊಟ್ಟರು. ಎಲ್ಲ ಲೇಖಕರೂ ತಂತಮ್ಮ ಅನುಭವವನ್ನು ನೆರೆದ ಸಾಹಿತ್ಯಾಸಕ್ತರೊಂದಿಗೆ ಹಂಚಿಕೊಂಡರು. ಚಿತ್ರದಲ್ಲಿ ಎಡದಿಂದ ಬಲಕ್ಕೆ : ಶ್ರೀಯುತ ಆರ್. ಎಸ್. ರಾಜಾರಾಮ್, ಲೇಖಕರಾದ ಡಾ॥ ಪರಮೇಶ್ವರ, ಡಾ॥ ಸಿ. ಆರ್. ಚಂದ್ರಶೇಖರ್, ಡಾ॥ ನಾ. ಸೋಮೇಶ್ವರ, ಡಾ॥ ಪದ್ಮಿನಿ ಪ್ರಸಾದ್, ಡಾ॥ ಎಂ. ಎಸ್. ಎಸ್. ಮೂರ್ತಿ, ಶ್ರೀಮತಿ ಶ್ವೇತಾ ನರಗುಂದ ಹಾಗೂ ಶ್ರೀ ಗಣೇಶ್‌ರಾವ್ ನಾಡಿಗೇರ್.*

# ಸುವರ್ಣ ಮಹೋತ್ಸವದ 'ಸದರನ್ ಎಕಾನಮಿಸ್ಟ್'



# ಪತ್ರಿಕಾ ಕ್ಷೇತ್ರದ ಮಿನುಗುತಾರೆ ಸುಶೀಲಾ

ಒಂದು ಪತ್ರಿಕೆ ನಡೆಸುವುದು ಸುಲಭದ ಮಾತಲ್ಲ. ಅಂತಹದರಲ್ಲಿ ಭಾರತದಲ್ಲೇ ಅಪರೂಪ ಎನಿಸಿರುವ ಆರ್ಥಿಕ ಪತ್ರಿಕೆಯನ್ನು ನಡೆಸಿಕೊಂಡು ಬರುತ್ತಿರುವವರು ಭಾರತದ ಏಕೈಕ ಮಹಿಳೆ ೭೮ರ ಹರೆಯದ ಸುಶೀಲಾ ಸುಬ್ರಹ್ಮಣ್ಯ.

''ಕಷ್ಟವನ್ನು ತಪ್ಪಿಸಲಿಕ್ಕೆ ಯಾರಿಂದಲೂ ಸಾಧ್ಯವಿಲ್ಲ; ಆದರೆ ಕಷ್ಟಗಳನ್ನು ಎದುರಿಸಲು ಧೈರ್ಯ ಬೇಕಾಗುತ್ತದೆ. ನನಗೆ ಆ ಧೈರ್ಯ ಇದೆಯಲ್ಲಾ ಎಂಬುದೇ ಸಮಾಧಾನ. ಆದ್ದರಿಂದ ಪ್ರತಿಯೊಬ್ಬರೂ ದೇವರನ್ನು ಕಷ್ಟ ಕೊಡಬೇಡ ಎಂದು ಕೇಳಿಕೊಳ್ಳುವ ಬದಲು, ಜೀವನದಲ್ಲಿ ಬರುವ ಕಷ್ಟವನ್ನು ಎದುರಿಸುವ ಶಕ್ತಿ, ಧೈರ್ಯ ಕೊಡು ಎಂದು ಕೇಳಿಕೊಳ್ಳಬೇಕು.''

- ೨೭ ವರ್ಷಗಳಿಂದ ನಿರಂತರವಾಗಿ 'ಸದರನ್ ಎಕಾನಮಿಸ್ಟ್' ಆರ್ಥಿಕ ಪಾಕ್ಷಿಕ ಪತ್ರಿಕೆ ನಡೆಸಿಕೊಂಡು ಬರುತ್ತಿರುವ ಹಿರಿಯ ಪತ್ರಕರ್ತೆ ೭೮ರ ಸುಶೀಲಾ ಸುಬ್ರಹ್ಮಣ್ಯ ಅವರ ಮಾತು ಇದು.

ಪತ್ರಿಕಾ ವೃತ್ತಿಯಲ್ಲಿ ಮಹಿಳೆಯರು ಹೆಚ್ಚಾಗಿ ತೊಡಗಿಕೊಳ್ಳದ ಕಾಲದಲ್ಲೇ ಈ ಕ್ಷೇತ್ರ ಪ್ರವೇಶಿಸಿದ ಸುಶೀಲಾ ಅವರು, ತಮ್ಮ ಗಂಡ ನಡೆಸುತ್ತಿದ್ದ ಪತ್ರಿಕೆಗೆ ಸಹಾಯಕರಾಗಿದ್ದವರು. ಗಂಡನ ನಂತರ ಪತ್ರಿಕೆಯ ಸಂಪೂರ್ಣ ಹೊಣೆಯನ್ನು ಹೊತ್ತ ಅವರು, ಪತ್ರಿಕಾ ಕ್ಷೇತ್ರದಲ್ಲಿ ದೀರ್ಘ ಕಾಲ ತೊಡಗಿಕೊಂಡು ವಿಶೇಷ ಸಾಧನೆ ಮಾಡಿ ಮಹಿಳಾ ಪತ್ರಕರ್ತೆಯರಲ್ಲಿ ಮಿನುಗು ತಾರೆಯಾಗಿದ್ದಾರೆ.

ಸದರನ್ ಎಕಾನಮಿಸ್ಟ್ ಪತ್ರಿಕೆಯನ್ನು ಸ್ಥಾಪಿಸಿ ನಡೆಸಿಕೊಂಡು ಬರುತ್ತಿದ್ದ ಸುಶೀಲಾ ಅವರ ಪತಿ ಕೆ. ಎನ್.

**ಡಿ. ಯಶೋದಾ**

ಸುಬ್ರಹ್ಮಣ್ಯ ಅವರು ಆ ಪತ್ರಿಕೆಯ ಬೆಳ್ಳಿಹಬ್ಬದ ಕನಸು ಕಂಡಿದ್ದರು. ಆದರೆ ಅದಕ್ಕೆ ಇನ್ನು ಎರಡು ವರ್ಷ ಇರುವಾಗಲೇ ಅವರು ತೀರಿಕೊಂಡರು. ಗಂಡನ ಸಾವಿನ ಆಘಾತದ ನಡುವೆಯೇ ಪತ್ರಿಕೆ ಮುನ್ನಡೆಸುವ ಜವಾಬ್ದಾರಿ ಹೊತ್ತ ಸುಶೀಲಾ, ಪತ್ರಿಕೆಯ ಬೆಳ್ಳಿಹಬ್ಬವನ್ನೂ ಆಚರಿಸಿದರು, ಈಗ ಸುವರ್ಣ ಮಹೋತ್ಸವವನ್ನೂ ಆಚರಿಸುತ್ತಿದ್ದಾರೆ.

೨೩ ವರ್ಷದ ಪತ್ರಿಕೆಯನ್ನು ೫೦ ವರ್ಷದವರೆಗೆ ನಡೆಸಿಕೊಂಡು ಬರುವ ಹಾದಿಯಲ್ಲಿ ಸುಶೀಲಾ ಅವರು ಕಂಡ ಕಷ್ಟ , ಅನುಭವಿಸಿದ ನೋವು, ಪಟ್ಟ ಯಾತನೆ ಅಷ್ಟಿಷ್ಟಲ್ಲ. ಆದರೆ ಬಂದ ತೊಡಕುಗಳನ್ನೆಲ್ಲಾ ತೊಡೆದು ಹಾಕಿ ಗುರಿಯತ್ತಲೇ ಮನಸ್ಸನ್ನು ನೆಟ್ಟರೆ ಯಶಸ್ಸು ಕಟ್ಟಿಟ್ಟಬುತ್ತಿ ಎಂಬುದನ್ನು ಧ್ಯೇಯಮಂತ್ರವನ್ನಾಗಿ ಮಾಡಿಕೊಂಡರು ಸುಶೀಲಾ. ಅವರ ಕೆಲಸದಲ್ಲಿನ ಅಚಲ ವಿಶ್ವಾಸ, ನಿರಂತರ ದುಡಿಮೆ, ಸಾಧಿಸುವ ಛಲದಿಂದ ಸದರನ್ ಎಕಾನಮಿಸ್ಟ್ ಪತ್ರಿಕೆ ಉಳಿದುಕೊಂಡು, ಬೆಳೆದುಕೊಂಡು ಬಂದಿದೆ.

ಮೂಲತಃ ಹಾಸನ ಜಿಲ್ಲೆಯವರಾದ ಸುಶೀಲಾ ಅವರು, ತಮ್ಮ ಸಹೋದರ ಕೆ. ವಿ. ನಂಜುಂಡಯ್ಯ ಅವರ ಪ್ರೋತ್ಸಾಹ, ಬೆಂಬಲದಿಂದ ೧೯೫೫ರಲ್ಲಿ ಅರ್ಥಶಾಸ್ತ್ರದಲ್ಲಿ ಎಂ.ಎ. ಸ್ನಾತಕೋತ್ತರ ಪದವಿ ಪಡೆದುಕೊಂಡರು. ಆಗಿನ ಕಾಲದಲ್ಲಿ ಹೆಣ್ಣುಮಕ್ಕಳು ಇಷ್ಟು ಓದುವುದು ಸಾಮಾನ್ಯ ಸಂಗತಿಯಾಗಿರಲಿಲ್ಲ. ಆದರೆ ಛಲದಿಂದ ಓದಿದ ಅವರಿಗೆ

ಮೂಲತಃ ಹಾಸನ ಜಿಲ್ಲೆಯವರಾದ ಸುಶೀಲಾ ಅವರು, ತಮ್ಮ ಸಹೋದರ ಕೆ. ವಿ. ನಂಜುಂಡಯ್ಯ ಅವರ ಪ್ರೋತ್ಸಾಹ, ಬೆಂಬಲದಿಂದ ೧೯೫೫ರಲ್ಲಿ ಅರ್ಥಶಾಸ್ತ್ರದಲ್ಲಿ ಎಂ.ಎ. ಸ್ನಾತಕೋತ್ತರ ಪದವಿ ಪಡೆದುಕೊಂಡರು. ಆಗಿನ ಕಾಲದಲ್ಲಿ ಹೆಣ್ಣುಮಕ್ಕಳು ಇಷ್ಟು ಓದುವುದು ಸಾಮಾನ್ಯ ಸಂಗತಿಯಾಗಿರಲಿಲ್ಲ. ಆದರೆ ಛಲದಿಂದ ಓದಿದ ಅವರಿಗೆ ಹಳ್ಳಿಯ ಹಿನ್ನಲೆ, ಬಡತನ ಅಡ್ಡ ಬರಲಿಲ್ಲ . ಅಣ್ಣನ ಗೆಳೆಯರಾಗಿದ್ದ ಡೆಕ್ಕನ್ ಹೆರಾಲ್ಡ್ ಪತ್ರಿಕೆಯ ಆಗಿನ ಸಹಾಯ ಸಂಪಾದಕ ಕೆ. ಎನ್. ಸುಬ್ರಹ್ಮಣ್ಯ ಅವರನ್ನು ೧೯೬೦ರಲ್ಲಿ ಮದುವೆಯಾದರು. ಸ್ವಂತ ಪತ್ರಿಕೆ ಮಾಡುವ ಹಂಬಲ ಹೊಂದಿದ್ದ ಕೆ.ಎನ್. ಸುಬ್ರಹ್ಮಣ್ಯ ಅವರು, ಪತ್ನಿ ಸುಶೀಲಾ ಅವರ ಸಹಕಾರದಲ್ಲಿ ೧೯೬೨ರಲ್ಲಿ ಸದರನ್ ಎಕನಾಮಿಸ್ಟ್ ಇಂಗ್ಲಿಷ್ ಪಾಕ್ಷಿಕವನ್ನು ಆರಂಭಿಸಿದರು.

ಹಳ್ಳಿಯ ಹಿನ್ನೆಲೆ, ಬಡತನ ಅಡ್ಡ ಬರಲಿಲ್ಲ . ಅಣ್ಣನ ಗೆಳೆಯರಾಗಿದ್ದ ಡೆಕ್ಕನ್ ಹೆರಾಲ್ಡ್ ಪತ್ರಿಕೆಯ ಆಗಿನ ಸಹಾಯ ಸಂಪಾದಕ ಕೆ. ಎನ್. ಸುಬ್ರಹ್ಮಣ್ಯ ಅವರನ್ನು ೧೯೬೦ರಲ್ಲಿ ಮದುವೆಯಾದರು. ಸ್ವಂತ ಪತ್ರಿಕೆ ಮಾಡುವ ಹಂಬಲ ಹೊಂದಿದ್ದ ಕೆ.ಎನ್. ಸುಬ್ರಹ್ಮಣ್ಯ ಅವರು, ಪತ್ನಿ ಸುಶೀಲಾ ಅವರ ಸಹಕಾರದಲ್ಲಿ ೧೯೬೨ರಲ್ಲಿ ಸದರನ್ ಎಕಾನಮಿಸ್ಟ್ ಇಂಗ್ಲಿಷ್ ಪಾಕ್ಷಿಕವನ್ನು ಆರಂಭಿಸಿದರು. ೨೮ ಪುಟಗಳ ಕೇವಲ ೧೦ ರೂ.ಗಳ ವಾರ್ಷಿಕ ಚಂದಾ ಹಣ ಹಾಗೂ ಅತಿ ಕಡಿಮೆ ಜಾಹಿರಾತಿನೊಂದಿಗೆ ಆರಂಭವಾದ ಈ ಪತ್ರಿಕೆ ಲಾಭಕರವಾಗದಿದ್ದರೂ, ಉತ್ತಮ ಪ್ರತಿಕ್ರಿಯೆ ಪಡೆದುಕೊಂಡಿತು. ನಂತರ ಸುಬ್ರಹ್ಮಣ್ಯ ಅವರು ತಮ್ಮ ಕೆಲಸಕ್ಕೆ ರಾಜಿನಾಮೆ ನೀಡಿ ಸಂಪೂರ್ಣವಾಗಿ ಸದರನ್ ಎಕಾನಮಿಸ್ಟ್ ಪತ್ರಿಕೆಯನ್ನು ಬೆಳೆಸುವಲ್ಲಿ ತೊಡಗಿಕೊಂಡರು.

ಮಕ್ಕಳಿಲ್ಲದ ಸುಶೀಲಾ ದಂಪತಿಗಳಿಗೆ ಪತ್ರಿಕೆಯೇ ಮಗುವಾಯಿತು. ಗಂಡನ ಸಾವಿನ ನಂತರ ಈ ಮಗುವಿಗೆ ಸುಶೀಲಾ ಅವರೇ ತಂದೆ-ತಾಯಿ ಎಲ್ಲ.

ಸಮಕಾಲೀನ ಆರ್ಥಿಕ ವ್ಯವಸ್ಥೆಯ ಅರಿವು ಇಲ್ಲದೆ ಆರ್ಥಿಕ ಪತ್ರಿಕೆಯನ್ನು ನಡೆಸಲು ಸಾಧ್ಯವಿಲ್ಲ, ಪತ್ರಿಕೆ ನಡೆಸುವುದರ ಜೊತೆಗೆ ಸುಶೀಲಾ ಅವರು ಈ ವಿಷಯವಾಗಿ ಹೆಚ್ಚು ಜ್ಞಾನ ಪಡೆದುಕೊಂಡರು. ಇದರಿಂದ ಅವರಿಗೆ ಆರ್ಥಿಕ ಲೇಖನಗಳನ್ನು ಪರಿಶೀಲನೆ ಮಾಡುವುದು ಸುಲಭವಾಯಿತು. ಪತ್ರಿಕೆ ನಡೆಸುವುದು ಒಂದು ಟೀಮ್ ವರ್ಕ್ ಆದರೂ, ಅದರ ಸಂಪೂರ್ಣ ಜವಾಬ್ದಾರಿಯನ್ನು ಹೊತ್ತು, ಕಾಲ ಕಾಲಕ್ಕೆ ತಕ್ಕಂತೆ ಅದನ್ನು ಪ್ರಕಟ ಮಾಡುವುದರಲ್ಲಿ ಸುಶೀಲಾ ಅವರ ಶ್ರಮ, ಸಾಧನೆ ಅನುಕರಣೀಯ.

ಸುಶೀಲಾ ಆರ್ಥಿಕ, ಹಣಕಾಸು ವಿಷಯಗಳು ಕುರಿತಂತೆ ತಮ್ಮ ಪತ್ರಿಕೆಯಲ್ಲಿ ಹಲವಾರು ಲೇಖನಗಳನ್ನು ಬರೆದಿದ್ದಾರೆ. ಪತ್ರಿಕೆಗಳ ಆಧುನಿಕ ತಾಂತ್ರಿಕತೆ ಮತ್ತು ಹೊಸ ಹೊಸ ಪ್ರಯೋಗಗಳನ್ನು ಅಧ್ಯಯನ ಮಾಡುವುದಕ್ಕಾಗಿ ವಿದೇಶಗಳಿಗೂ ಭೇಟಿ ನೀಡಿದ್ದಾರೆ. ಆರ್ಥಿಕ ವಿಷಯ ಕುರಿತ ಅನೇಕ ರೇಡಿಯೋ ಹಾಗೂ ಟಿ.ವಿ. ಕಾರ್ಯಕ್ರಮಗಳಲ್ಲಿ ಸುಶೀಲಾ ಭಾಗವಹಿಸಿದ್ದಾರೆ. ಅರ್ಥಶಾಸ್ತ್ರಕ್ಕೆ ಸಂಬಂಧಿಸಿದ ಸಮ್ಮೇಳನಗಳಲ್ಲಿ ಪಾಲ್ಗೊಂಡಿದ್ದಾರೆ.

ಬ್ಯಾಂಕಿಂಗ್, ಕೈಗಾರಿಕೆ, ಹಣಕಾಸು ವಿಚಾರ, ಯೋಜನೆ, ವಿದೇಶಿ ವ್ಯವಹಾರ, ಕಂಪೆನಿಗಳ ವಿಷಯ, ಸ್ಟಾಕ್ ಮಾರ್ಕೆಟ್ ಮೊದಲಾದವುಗಳ ಬಗ್ಗೆ ಸದರನ್ ಎಕಾನಮಿಸ್ಟ್‌ನಲ್ಲಿ ಮಾಹಿತಿ ಇರುತ್ತದೆ. ಆಯಾ ವಿಷಯದಲ್ಲಿನ ತಜ್ಞರೇ ಲೇಖನಗಳನ್ನು ಬರೆಯುತ್ತಾರೆ. ದೇಶಾದ್ಯಂತ ಚಂದಾದಾರರನ್ನು ಹೊಂದಿರುವ ಈ ಪತ್ರಿಕೆ ವಿದ್ಯಾರ್ಥಿಗಳು, ಶಿಕ್ಷಕರು, ಆರ್ಥಿಕ ತಜ್ಞರು, ವಿಶ್ಲೇಷಕರಿಗೆ ಉಪಯೋಗವಾಗುತ್ತಿದೆ. ಬಹಳಷ್ಟು ವಿದ್ಯಾಸಂಸ್ಥೆಗಳು ಈ ಪತ್ರಿಕೆಯ ಚಂದಾ ಪಡೆದಿವೆ. ಸುಶೀಲಾ ಅವರಿಗೆ ಪತ್ರಿಕೆ ಮೂಲಕ ಲಾಭ ಮಾಡುವ ಗುರಿ ಇಲ್ಲ; ಪತ್ರಿಕೆ ತರಲು ತಗುಲುವ ಖರ್ಚು ಕಳೆದರೆ ಸಾಕು.

ಬಹಳಷ್ಟು ಆರ್ಥಿಕ ಜರ್ನಲ್‌ಗಳು ಹಣಕಾಸು ತೊಂದರೆ ಹಾಗೂ ಇನ್ನಿತರ ಕಾರಣಗಳಿಂದ ನಿಂತು ಹೋಗಿವೆ. ಆದರೆ ಇಂಥ ಸಮಸ್ಯೆಗಳನ್ನು ಎದುರಿಸಿದರೂ, ಸುಶೀಲಾ ಅವರು ಸದರನ್ ಎಕಾನಮಿಸ್ಟ್‌ಅನ್ನು ಉಳಿಸುವುದಷ್ಟೇ ಅಲ್ಲದೆ ಚೆನ್ನಾಗಿ ಬೆಳೆಸಿದ್ದಾರೆ. ಮಹಿಳೆಯಾಗಿ ಅನೇಕ ಕಷ್ಟಗಳ ನಡುವೆಯೂ, ಅತ್ಯಲ್ಪ ಜಾಹಿರಾತಿನ ನೆರವಿನೊಂದಿಗೆ ಬೆಳೆಸಿರುವುದು ವಿಶೇಷ.

ಪತ್ರಿಕೆ ನಡೆಸುವುದರ ಜೊತೆಗೆ ಸುಶೀಲಾ ಅವರು ಪುಸ್ತಕ ಪ್ರಕಟಣೆಯಲ್ಲೂ ಮುಂದು. ಕಾಂಟೂರ್ಸ್ ಆಫ್ ಪ್ಲಾನಿಂಗ್ ಅಂಡ್ ಪಾವರ್ಟಿ (೧೯೭೭) - ಪ್ರೊ|| ಬಿ. ಕುಮಾರ್, ಡೆವೆಲಪ್‌ಮೆಂಟ್ ಈಥೋಸ್ ಅಂಡ್ ಎಕ್ಸ್‌ಪೀರಿಯನ್ಸ್ (೧೯೯೧) - ಎಂ. ವೈ. ಘೋರ್ಪಡೆ, ಟ್ರಾನ್ಸ್‌ಫರ್ ಆಫ್ ಟೆಕ್ನೋಲಜಿ ಅಂಡ್ ಎಕನಾಮಿಕ್ ಡೆವೆಲಪ್‌ಮೆಂಟ್ (೧೯೯೪) - ಡಾ|| ಇಂದುಮತಿ, ಸೇವ್ ಎ ಲಾಟ್, ಇನ್‌ವೆಸ್ಟ್ ವೈಸ್ಲಿ (೧೯೯೮) - ಪ್ರೊ|| ಎಸ್. ಎಲ್. ಎನ್. ಸಿಂಹ, - ಲಿಟ್ಲ್‌ಹ್ಯಾಂಡ್ಸ್ ಇನ್ ಚೈನ್ಸ್ - ಚೈಲ್ಡ್ ಲೇಬರ್ ಇನ್ ಇಂಡಿಯಾ (೨೦೦೧) - ಪಿ.




ಜಗದೀಶ್ ಗಾಂಧಿ ಮತ್ತು ಸುಶೀಲಾ ಸುಬ್ರಹ್ಮಣ್ಯ, ವಿಷನ್ ಕರ್ನಾಟಕ ೨೦೨೫ - ಸ್ಟ್ರಾಟಜೀಸ್ ಅಂಡ್ ಆ್ಯಕ್ಷನ್ ಪ್ಲಾನ್ಸ್ ಫಾರ್ ಸಸ್ಟೇನಬಲ್ ಡೆವೆಲಪ್‌ಮೆಂಟ್ (೨೦೦೧) - ಡಾ|| ಡಿ. ಜೀವನ್ ಕುಮಾರ್ ಮತ್ತು ಸುಶೀಲಾ ಸುಬ್ರಹ್ಮಣ್ಯ, - ವುಮೆನ್ ಇನ್ ನೇಷನ್ ಬಿಲ್ಡಿಂಗ್ (೨೦೦೫) - ಸುಶೀಲಾ ಸುಬ್ರಹ್ಮಣ್ಯ, ಡಾ|| ಮೀರಾ ಚಕ್ರವರ್ತಿ ಮತ್ತು ಡಾ|| ಎನ್. ಎಸ್. ವಿಶ್ವನಾಥ್, ಇನ್‌ಫ್ರಾಸ್ಟ್ರಕ್ಚರ್ ಪ್ಲಾನಿಂಗ್ ಇನ್ ಇಂಡಿಯಾ : (೨೦೧೧)- ಪ್ರೊ|| ಎ. ಪಿ. ಶ್ರೀನಿವಾಸ ಮೂರ್ತಿ, ನಾರ್ತ್ ಈಸ್ಟ್ ಇಂಡಿಯಾ : ಅಪ್ರೋಚಸ್ ಟುವರ್ಡ್ಸ್ ಸಸ್ಟೇನಬಲ್ ಡೆವಲಪ್‌ಮೆಂಟ್ (೨೦೧೧) - ಪ್ರೊ|| ಆರ್. ಕೆ. ರಾಲ್ ಮತ್ತು ಡಾ|| ಜತೀಂದ್ರನಾಥ್ ಸಾಕಿಯ, ಫ್ರಮ್ ಕ್ರೇಡಲ್ ಟು ರಾಕಿಂಗ್ ಚೇರ್ (೨೦೧೧) - ಡಾ|| ಉಷಾ ರಾವ್ ಇತ್ಯಾದಿ.

ಕ್ವಿಟ್ ಇಂಡಿಯಾ ಚಳುವಳಿಯ ಸುವರ್ಣ ಮಹೋತ್ಸವದ ಅಂಗವಾಗಿ ೧೯೯೩ರಲ್ಲಿ ಕರ್ನಾಟಕದ ಸ್ವಾತಂತ್ರ್ಯ ಹೋರಾಟಗಾರರ ಕುರಿತು ಸುಶೀಲಾ ಅವರು ಸಂಪಾದಿಸಿರುವ ಪುಸ್ತಕವನ್ನು ಕರ್ನಾಟಕ ರಾಜ್ಯ ಫ್ರೀಡಂ ಫೈಟರ್ಸ್ ಸಂಘ ಪ್ರಕಟಿಸಿದೆ. ಸುಶೀಲಾ ಸುಬ್ರಹ್ಮಣ್ಯ ಇತರ ಲೇಖಕರ ಜೊತೆಯಲ್ಲಿ ಸಹ ಸಂಪಾದಕರಾಗಿರುವ ಪುಸ್ತಕಗಳನ್ನು ದೀಪ್ ಅಂಡ್ ದೀಪ್ ಪಬ್ಲಿಕೇಷನ್ ಪ್ರಕಟಿಸಿದೆ. ಸುಶೀಲಾ ಅವರ ಪತ್ರಿಕೆ, ಪುಸ್ತಕಗಳ ಪ್ರಕಟಣೆ, ಲೇಖನಗಳ ಬರಹ ಇಂಗ್ಲಿಷ್ ಆದರೂ, ಕನ್ನಡದಲ್ಲೂ ಅವರು ಕೆಲವು ಲೇಖನಗಳನ್ನು ಬರೆದಿದ್ದಾರೆ.

ತಮ್ಮ ಪತ್ರಿಕೆಗೆ ವಿಷಯವಾಗುವ ಸುದ್ದಿಗಳಿಗಾಗಿ ಹಾಗೂ ಜ್ಞಾನಾರ್ಜನೆಗಾಗಿ ದೇಶದ ನಾನಾ ಭಾಗಗಳಲ್ಲಿ ಸಂಚರಿಸಿ, ವಿವಿಧ ಆರ್ಥಿಕ ಸಭೆ, ಸಮಾರಂಭಗಳಲ್ಲಿ ಭಾಗವಹಿಸಿ ಮಾಹಿತಿ ಸಂಗ್ರಹಿಸುವುದು ಸುಶೀಲಾ ಅವರ ವಿಶೇಷ. ಈ ಹಿರಿ ವಯಸ್ಸಿನಲ್ಲೂ ಅವರು ದೂರ ದೂರದ ಪ್ರದೇಶಗಳಿಗೆ ಓಡಾಡುತ್ತಿರುತ್ತಾರೆ.

'ಸ್ಟಡಿ ಸರ್ಕಲ್', ಇದೊಂದು ಸೃಜನಾತ್ಮಕ ವೇದಿಕೆ. ಲೇಖಕರಿಗೆ, ಯುವ ಬರಹಗಾರರಿಗೆ ಬರಹಕ್ಕೆ ಅವಕಾಶ ಕಲ್ಪಿಸುವ ಸಲುವಾಗಿ ಸುಮಾರು ೧೪ ವರ್ಷಗಳ ಹಿಂದೆ ಸುಶೀಲಾ ಅವರು ಸ್ಟಡಿ ಸರ್ಕಲ್ ಶುರು ಮಾಡಿದರು. ಇಲ್ಲಿ ಪ್ರಚಲಿತ ವಿದ್ಯಮಾನಗಳು, ಆರ್ಥಿಕ ವಿಚಾರಗಳು, ಪತ್ರಿಕೆಯಲ್ಲಿ ಪ್ರಕಟಿಸಬಹುದಾದ ಲೇಖನಗಳ ಬಗ್ಗೆ ಚರ್ಚೆ ನಡೆಯುತ್ತದೆ.

ಕಾಂಗ್ರೆಸ್ ನಾಯಕಿ ಸೋನಿಯಾ ಗಾಂಧಿ, ಧರ್ಮಸ್ಥಳದ ಡಾ|| ವೀರೇಂದ್ರ ಹೆಗ್ಗಡೆ ಸೇರಿದಂತೆ ಅನೇಕ ಗಣ್ಯರು ಸುಶೀಲಾ ಅವರ ಕಾರ್ಯವನ್ನು ಮೆಚ್ಚಿಕೊಂಡು ಅವರಿಗೆ ಪತ್ರ ಬರೆದಿದ್ದಾರೆ. ಮುಂಬೈನ ನ್ಯೂ ಏಜ್ ಫೌಂಡೇಶನ್ ಇವರನ್ನು ಸನ್ಮಾನಿಸಿದೆ. ಸುಶೀಲಾ ಒಬ್ಬ ಸಮರ್ಪಣಾ ಭಾವದ ಬದ್ಧತೆಯುಳ್ಳ ಪತ್ರಕರ್ತೆ ಎಂದು ನ್ಯೂ ಏಜ್ ಫೌಂಡೇಶನ್‌ನ ಅಧ್ಯಕ್ಷರಾದ ಎಸ್. ಎಂ. ಸಿಂಘ್ವಿ ಹೇಳಿದ್ದಾರೆ.

೧೯೯೧ರಲ್ಲಿ ಮುಂಬೈನಲ್ಲಿ ಅತ್ಯುತ್ತಮ ಮಹಿಳಾ ಸಂಪಾದಕಿ ಪ್ರಶಸ್ತಿ, ೧೯೯೫ರಲ್ಲಿ ಬೆಂಗಳೂರಿನಲ್ಲಿ ಅನ್ನಪೂರ್ಣ ಪ್ರತಿಷ್ಠಾನ ಪ್ರಶಸ್ತಿ, ೨೦೦೮ರ ಮೈಸೂರಿನ ದಸರಾ ಮಹೋತ್ಸವದ ಸಂದರ್ಭದಲ್ಲಿ ಮಹಿಳಾ ಮತ್ತು ಮಕ್ಕಳ ದಸರಾ ವಿಭಾಗದಲ್ಲಿ ಸನ್ಮಾನ, ೨೦೧೦ರ ಅಂತರರಾಷ್ಟ್ರೀಯ ಮಹಿಳಾ ದಿನಾಚರಣೆಯಂದು ಜೀವಮಾನ ಸಾಧನೆಗಾಗಿ ವಿವಿಧ ಸಂಸ್ಥೆಗಳ ವತಿಯಿಂದ ಸನ್ಮಾನ, ೨೦೦೮ನೇ ಸಾಲಿನ ಕರ್ನಾಟಕ ಕಾರ್ಯನಿರತ ಪತ್ರಕರ್ತರ ಸಂಘದ ಶ್ರೀ ಬದರಿನಾಥ ಹೊಂಬಾಳೆ ಪ್ರಶಸ್ತಿ, ಇನ್ನೂ ಅನೇಕ ಪ್ರಶಸ್ತಿಗಳು ಇವರ ಮುಡಿಯೇರಿವೆ.

೨೦೧೧ರ ಮೇ ಒಂದರಿಂದ ಶುರುವಾದ ಸದರನ್ ಎಕಾನಮಿಸ್ಟ್ ಪತ್ರಿಕೆಯ ಸುವರ್ಣ ಮಹೋತ್ಸವ ಆಚರಣೆ, ೨೦೧೨ರ ಮೇ ಒಂದರವರೆಗೆ ನಡೆಯಲಿದೆ.

ಬೆಂಗಳೂರಿನ ಪ್ಯಾಲೆಸ್ ಗುಟ್ಟಹಳ್ಳಿಯ ಸಣ್ಣದಾದ ತಮ್ಮ ಕಚೇರಿಯಲ್ಲಿ ಯಾವಾಗಲೂ ಕ್ರಿಯಾಶೀಲರಾಗಿರುವ ಸುಶೀಲಾ ಅವರು ಯುವ ಪತ್ರಕರ್ತರಿಗೆ ಮಾರ್ಗ ದರ್ಶಕರಾಗಿದ್ದಾರೆ. ಮಹಿಳಾ ಪತ್ರಕರ್ತರಿಗೆ ಆದರ್ಶ ಪ್ರಾಯರಾಗಿದ್ದಾರೆ.

**ಡಿ. ಯಶೋದಾ**
ಅಧ್ಯಯನ ಸಂಯೋಜಕಿ, ಮಾಧ್ಯಮ ಭಾರತಿ, ಭಾರತೀಯ ವಿದ್ಯಾಭವನ, ಬೆಂಗಳೂರು - ೫೬೦ ೦೦೧




## ಸೌದಿ ಅರೇಬಿಯ - ಹೊಗೆಯಾಡುತ್ತಿರುವ ಅತೃಪ್ತಿ

ಸೌದಿ ಅರೇಬಿಯ ಅರೇಬಿಯನ್ ಪರ್ಯಾಯ ದ್ವೀಪದ ಅತಿ ದೊಡ್ಡ ರಾಜ್ಯ. ವಿಶ್ವದ ಅತಿದೊಡ್ಡ ರಾಷ್ಟ್ರಗಳಲ್ಲಿ ಹನ್ನೆರಡನೇ ಸ್ಥಾನ ಪಡೆದಿದೆ. ಅಷ್ಟೇ ಶ್ರೀಮಂತ ರಾಷ್ಟ್ರ. ಪ್ರಪಂಚದಲ್ಲಿ ದೊರೆಯುವ ತೈಲದಲ್ಲಿ ಮೂರನೇ ಒಂದು ಭಾಗ ಇಲ್ಲಿ ಉತ್ಪತ್ತಿಯಾಗುತ್ತದೆ. ಇಸ್ಲಾಮ್ ಜಗತ್ತಿನಲ್ಲಿ ಸೌದಿ ದೊರೆಗಳ ಪ್ರಾಬಲ್ಯ ವಿಶಿಷ್ಟವಾದ್ದು. ಇಸ್ಲಾಮ್ ಧರ್ಮ ಸಂಸ್ಥಾಪಕ ಮಹಮ್ಮದ್ ಜನಿಸಿದ ಮೆಕ್ಕಾ ಇರುವುದು ಇಲ್ಲಿಯೇ. ಪ್ರತಿ ವರ್ಷ ಮೆಕ್ಕಾ ಮತ್ತು ಮದೀನಾಗೆ ಪ್ರಪಂಚದ ಎಲ್ಲ ಭಾಗಗಳಿಂದ ಹತ್ತಾರು ಲಕ್ಷ ಮಂದಿ ಮುಸಲ್ಮಾನ ಯಾತ್ರಿಕರು ಬರುತ್ತಾರೆ. ೧೯೦೨ರಿಂದ ದೇಶ ಸೌದಿ ವಂಶಸ್ಥರ ಆಳ್ವಿಕೆಯಲ್ಲಿದೆ. ಮೇಲ್ನೋಟಕ್ಕೆ ಅರಬ್ ದೇಶಗಳ ಪೈಕಿ ಅತ್ಯಂತ ಸುಭದ್ರ ವ್ಯವಸ್ಥೆ ಹೊಂದಿರುವ ದೇಶ. ಧಾರ್ಮಿಕ ಕೇಂದ್ರವಾಗಿರುವುದರಿಂದ ವಿಶಿಷ್ಟವಾದ ಪ್ರತಿಷ್ಠೆ. ಇಸ್ಲಾಮ್ ಧರ್ಮದ ಪ್ರಚಾರಕ್ಕೆ ವಿಸ್ತರಣೆಗೆ ನೆರವಾಗುವುದರಲ್ಲಿ ಸೌದಿ ದೊರೆಗಳು ಯಾವತ್ತೂ ಮುಂದೆ. ಪಶ್ಚಿಮ ರಾಷ್ಟ್ರಗಳಿಗೆ, ಮುಖ್ಯವಾಗಿ ಅಮೆರಿಕಾಗೆ ಈ ಭಾಗದಲ್ಲಿ ಪರಮಾಪ್ತ ಮಿತ್ರ. ಹೊರಜಗತ್ತಿಗೆ ಬಿಗಿ ಧಾರ್ಮಿಕ ಹಿಡಿತದ ವ್ಯವಸ್ಥೆ ಹೊಂದಿರುವುದಾಗಿ ಕಾಣುವ ಈ ದೇಶದಲ್ಲಿ ಸಂಪತ್ತನ್ನು ಅನುಭವಿಸುತ್ತಿರುವವರು ಸೌದಿ ಕುಟುಂಬದವರು, ಅವರ ಪರಿವಾರದವರು ಮಾತ್ರ. ಇಸ್ಲಾಮಿಕ್ ಮೂಲಭೂತವಾದಿಗಳಿಗೆ ಸೌದಿ ಅರಸರ ಬೆಂಬಲ ರಹಸ್ಯವೇನಲ್ಲ. ಒಸಾಮಾ ಬಿನ್ ಲಾಡೆನ್ ಪೂರ್ವಾಶ್ರಮದಲ್ಲಿ ಸೌದಿ ಕುಟುಂಬದ ಸದಸ್ಯ.




ಅರಬ್ ಜಗತ್ತಿನಲ್ಲಿ ಕಳೆದ ಒಂದು ವರ್ಷದಿಂದ ಸಂಭವಿಸುತ್ತಿರುವ ತಳಮಳದ ಬಿಸಿ ಸೌದಿ ಅರೇಬಿಯಾಗೆ ತಟ್ಟಿಲ್ಲವೆ ಎನ್ನುವ ಪ್ರಶ್ನೆ ಉದ್ಭವಿಸುವುದು ಸಹಜ. ಟ್ಯುನೀಷಿಯದಿಂದ ಪ್ರಾರಂಭವಾದ ಸರ್ವಾಧಿಕಾರಿ ಆಡಳಿತದ ವಿರುದ್ಧದ ಜನಾಂದೋಳನ ಈಜಿಪ್ಟಿಗೆ ಹಬ್ಬಿ, ನಂತರ ಲಿಬಿಯಾವನ್ನು ಕಬಳಿಸಿ, ಈಗ ಸಿರಿಯಾದ ಬಾಗಿಲು ಬಡಿಯುತ್ತಿದೆ. ಈ ಅಲೆ ಸೌದಿ ದಡವನ್ನು ಅಪ್ಪಳಿಸುವ ಸಂಭವ ದೂರವೇನಿಲ್ಲ. ಅಲ್ಲಿಯೂ ಅತೃಪ್ತಿಯ ಹೊಗೆಯಾಡುತ್ತಿದೆ. ಮೂಲಭೂತ ಹಕ್ಕುಗಳಿಂದ ವಂಚಿತರಾಗಿರುವ ಇಲ್ಲಿನ ಜನ ಧಾರ್ಮಿಕ ಹಾಗೂ ಆಡಳಿತದ ದಬ್ಬಾಳಿಕೆಗೆ ಗುರಿಯಾಗಿದ್ದಾರೆ. ಹತ್ತಾರು ಸಾವಿರ ಮಂದಿ ಯಾವ ವಿಚಾರಣೆಯೂ ಇಲ್ಲದೆ ಕಾರಾಗೃಹಗಳಲ್ಲಿ ಕೊಳೆಯುತ್ತಿದ್ದಾರೆ. ಭ್ರಷ್ಟಾಚಾರ ತಾಂಡವವಾಡುತ್ತಿದೆ. ಕಿಂಚಿತ್ ವಿರೋಧ ವ್ಯಕ್ತವಾದರೂ ಅದನ್ನು ಬಗ್ಗುಬಡಿಯಲಾಗುತ್ತಿದೆ. ಷರಿಯತ್ ಕಾನೂನಿನದೇ ಮೇಲುಗೈ, ಖಾಜಿಗಳು ವಿಧಿಸುವ ನಿಯಮಗಳೇ ಅಂತಿಮ. ಮಹಿಳೆಯರಿಗಂತೂ ಯಾವ ಹಕ್ಕೂ ಇಲ್ಲ. ಬುರ್ಖಾ ಧರಿಸುವುದು ಕಡ್ಡಾಯ. ಮಹಿಳೆಯರು ಒಂಟಿಯಾಗಿ ಓಡಾಡುವಂತಿಲ್ಲ. ಜೊತೆಗೆ ಯಾರಾದರೂ ಪುರುಷರಿರಲೇಬೇಕು. ಕನಿಷ್ಠ ಒಬ್ಬ ಹುಡುಗನಾದರೂ ಜೊತೆಗಿರಬೇಕು. ಸೌದಿಯಲ್ಲಿ ನೆಲೆಸಿರುವ ವಿದೇಶೀಯರಿಗೂ ಈ ನಿಯಮ ಅನ್ವಯ. ಭಾರತದಿಂದ ಅಲ್ಲಿ ದುಡಿಯಲು ಹೋಗಿದ್ದ ಅನೇಕ ಮಂದಿ ಇಂಜಿನಿಯರುಗಳು, ವೈದ್ಯರು ಈ ಬಗೆಯ ನಿರ್ಬಂಧಗಳನ್ನು ತಾಳಲಾರದೆ ವಾಪಸ್ಸಾಗಿರುವ ನಿದರ್ಶನಗಳು ಬೇಕಾದಷ್ಟಿವೆ. ಇಷ್ಟೆಲ್ಲ ಅನಾಗರಿಕ ವ್ಯವಸ್ಥೆ ಹೊಂದಿದ್ದು, ವಿಶ್ವಸಂಸ್ಥೆ ಅಂಗೀಕರಿಸಿರುವ ಮಾನವ ಹಕ್ಕುಗಳನ್ನು ಗಾಳಿಗೆ ತೂರಿರುವ ಸೌದಿ ಆಡಳಿತದ ಬಗ್ಗೆ ಪಶ್ಚಿಮ ರಾಷ್ಟ್ರಗಳು ಚಕಾರ ಎತ್ತುತ್ತಿಲ್ಲ. ಅವರಿಗೆ ಮುಖ್ಯವಾದ್ದು ಅಲ್ಲಿನ ತೈಲಸಂಪತ್ತು ಮತ್ತು ಲಾಭ. ಪ್ರಪಂಚದ ಇತರ ಭಾಗಗಳಲ್ಲಿ ತಾನು ಮಾನವ ಹಕ್ಕುಗಳ ಏಕೈಕ ಪ್ರತಿಪಾದಕ ಎಂದು ಕೊಚ್ಚಿಕೊಳ್ಳುವ ಅಮೆರಿಕ ಸೌದಿ ಅರೇಬಿಯಾದ ವಿಚಾರದಲ್ಲಿ ಏಕೆ ಮೌನವಾಗಿದೆ ? ಇದಕ್ಕೆ ಉತ್ತರ ಅನಗತ್ಯ.

ಅಪಾರವಾದ ತೈಲ ಸಂಪತ್ತಿದ್ದರೂ ಜನಸಾಮಾನ್ಯರ ಸ್ಥಿತಿ ಮಾತ್ರ ಸುಧಾರಿಸಿಲ್ಲ. ನಿರುದ್ಯೋಗಿಗಳ ಸಂಖ್ಯೆ ನಿರಂತರವಾಗಿ ಹೆಚ್ಚುತ್ತಿದ್ದು


ಮಹಿಳೆಯರು ಬುರ್ಖಾ ಧರಿಸುವುದು ಕಡ್ಡಾಯ

ಶೇ. ೨೨ರಷ್ಟು ತಲುಪಿದೆ. ಸರಾಸರಿ ವೇತನ ತಿಂಗಳಿಗೆ ೧೩೦೦ ಡಾಲರುಗಳು ಮಾತ್ರ. ಸೌದಿ ಅರಸರು ದೇಶ ಹಾಗೂ ಜನರನ್ನು ತಮ್ಮ ಸ್ವಂತ ಆಸ್ತಿ ಎಂಬಂತೆ ನೋಡಿಕೊಳ್ಳುತ್ತಿದ್ದಾರೆ. ಈಚಿನ ದಿನಗಳಲ್ಲಿ ವ್ಯಾಪಕವಾಗಿ ವಿಸ್ತಾರಗೊಂಡಿರುವ ಸಂಪರ್ಕ ಸಾಧನಗಳಿಂದಾಗಿ ಸೌದಿ ಆಡಳಿತಗಾರರಿಗೆ ಗೋಪ್ಯವನ್ನು ಕಾಪಾಡಿ ಕೊಳ್ಳುವುದು ದುಸ್ತರವಾಗುತ್ತಿದೆ. ಅರಬ್ ದೇಶಗಳಲ್ಲಿನ ಅತೃಪ್ತಿ ಮತ್ತು ಜನಾಂದೋಳನಗಳು ಷಿಯಾ ಪಂಗಡದಿಂದ ಪ್ರೇರಿತವಾದದ್ದು ಎಂಬ ಪಶ್ಚಿಮ ರಾಷ್ಟ್ರಗಳ ವಿವರಣೆ ಅಸಂಗತ. ಈ ದೇಶಗಳ ಸರ್ವಾಧಿಕಾರಿ ಆಡಳಿತ ಮನೋವೃತ್ತಿ, ದಬ್ಬಾಳಿಕೆಗಳೇ ಅತೃಪ್ತಿಗೆ ಕಾರಣ. ಇಂದು ಸೌದಿ ಅರೇಬಿಯದಲ್ಲಿ ಸುಪ್ತವಾಗಿರುವ ಅತೃಪ್ತಿ ಒಂದು ದಿನ ಆಸ್ಫೋಟವಾಗುವುದು ಖಚಿತ.

## ಐರೋಪ್ಯ ದೇಶಗಳ ಉದ್ಧಟತನ

ಕಾಂಗ್ರೆಸ್ ನೇತೃತ್ವದಲ್ಲಿರುವ ಯುಪಿಎ ಸರಕಾರ ನಮ್ಮ ದೇಶದ ವಿದೇಶಾಂಗ ನೀತಿಯನ್ನು ಅಮೆರಿಕಾಗೆ ಒತ್ತೆ ಇಟ್ಟು ವರ್ಷಗಳೇ ಕಳೆದಿವೆ. ಮನಮೋಹನ್ ಸಿಂಗ್ ಸರಕಾರ ಅಮೆರಿಕದೊಂದಿಗೆ ಒತ್ತಡಕ್ಕೆ ಮಣಿದು

## ಪರಿತ್ಯಾಗಿ

ಪಂಚ ಭಕ್ಷ್ಯ ಪರಮಾನ್ನಗಳ
ಮೀರುವಂಥ ದೇಶ ವಿದೇಶಗಳಲ್ಲಿ
ಬೆಳೆಯುವ ಅತಿ ಪುಷ್ಟಿಕರ
ಮಧುರ ಪದಾರ್ಥ ಸೇವಿಸಿ
ತೇಗುವ ಆಧುನಿಕ ವಿರಾಗಿ

ಮೈತ್ರೀ, ಮಂಡ್ಯ

ನ್ಯೂಕ್ಲಿಯರ್ ಒಪ್ಪಂದ ಮಾಡಿಕೊಂಡಿದ್ದು ಕೊನೆಯ ಮೆಟ್ಟಿಲು. ಈಗ ಎಲ್ಲದಕ್ಕೂ ಅಮೇರಿಕದ ಮರ್ಜಿ ಅನುಸರಿಸುವುದು ಪರಿಪಾಠವಾಗಿಬಿಟ್ಟಿದೆ. ನಮ್ಮ ವಿದೇಶಾಂಗ ಸಚಿವಾಲಯ ಹಲ್ಲು ಕಳೆದುಕೊಂಡು ನಿಸ್ತೇಜವಾಗಿದೆ, ನಿಶ್ಶಕ್ತವಾಗಿದೆ. ಇತ್ತೀಚಿನ ಘಟನೆಗಳನ್ನು ಅವಲೋಕಿಸಿದರೆ ಇದು ಸ್ಪಷ್ಟವಾಗಿ ವೇದ್ಯವಾಗುತ್ತದೆ. ನಾರ್ವೆ ಸರಕಾರದ ಉದ್ಧಟತನ ಮತ್ತು ಇಟಲಿ ಸರಕಾರದ ಒತ್ತಡದ ತಂತ್ರದ ಮುಂದೆ ನಮ್ಮ ವಿದೇಶಾಂಗ ಸಚಿವಾಲಯದ ಅಸಹಾಯಕತೆ ಇದಕ್ಕೆ ಒಂದು ಸ್ಪಷ್ಟ ನಿದರ್ಶನ. ಕರ್ನಾಟಕದವರೇ ಆದ ಎಸ್. ಎಂ. ಕೃಷ್ಣ ವಿದೇಶಾಂಗ ಸಚಿವರಾಗಿರುವುದು ಆಲಂಕಾರಿಕವಾಗಿ ಮಾತ್ರ. ಗಟ್ಟಿಯಾಗಿ ಪ್ರತಿಭಟಿಸಲೂ ಅವರಿಗೆ ತಾಖತ್ತಿಲ್ಲವಾಗಿದೆ. ಕರ್ನಾಟಕದ ಜನರಿಗೆ ಅವರು ಮುಖ್ಯಮಂತ್ರಿಯಾಗಿದ್ದಾಗ ಕಾಡುಗಳ್ಳ ವೀರಪ್ಪನ್‌ಗೆ ಒತ್ತೆಯಾಗಿದ್ದ ನಟ ರಾಜಕುಮಾರ್ ಬಿಡುಗಡೆ ವಿಷಯದಲ್ಲಿ ಅವರು ತೋರಿದ ಮುತ್ಸದ್ದಿತನದ ಪರಿಚಯವಿದೆ.

ಐರೋಪ್ಯ ದೇಶಗಳ ಬಿಳಿಯರು ತಮ್ಮ ಜನಾಂಗ ಶ್ರೇಷ್ಠತೆಯನ್ನು ಇಪ್ಪತ್ತೊಂದನೇ ಶತಮಾನದಲ್ಲೂ ಎಗ್ಗಿಲ್ಲದೆ ಎತ್ತಿಹಿಡಿಯುತ್ತಿದ್ದಾರೆ. ತಾವೇ ನಾಗರಿಕರು, ಇತರರೆಲ್ಲ ಅನಾಗರಿಕರು ಎಂಬ ಭಾವನೆ ಅವರಲ್ಲಿ ಬೇರೂರಿದೆ. ಇದನ್ನು ನಾರ್ವೆ ಸರಕಾರ ಒಂದು ವರ್ಷಕ್ಕೂ ಹೆಚ್ಚು ಕಾಲದಿಂದ ಭಾರತೀಯ ಸಂಜಾತ ಮಕ್ಕಳನ್ನು ಪೋಷಕರಿಗೆ ಒಪ್ಪಿಸಲು ಹಿಂದೇಟು ಹಾಕುತ್ತಿರುವ ಪ್ರಕರಣದಲ್ಲಿ, ಇಟಲಿಯ ಹಡಗಿನ ಸಿಬ್ಬಂದಿ ಇಬ್ಬರು ಮೀನುಗಾರರ ಕೊಲೆ ಮಾಡಿರುವ ಪ್ರಕರಣದಲ್ಲಿ ಕಾಣಬಹುದಾಗಿದೆ. ಬಿಳಿಯರಿಗೇನಾದರೂ ಅನ್ಯದೇಶಗಳಲ್ಲಿ ವಿಪತ್ತಾದರೆ ಬೊಬ್ಬೆ ಹೊಡೆಯುವ ಈ ದೇಶಗಳು, ತಮ್ಮ ನಾಗರಿಕರು ಎಸಗಿದ ಅಪರಾಧ ಕೃತ್ಯಗಳನ್ನು ಮುಚ್ಚಿಹಾಕಲು ಪ್ರಯತ್ನಿಸುತ್ತಾರೆ. ಅದೊಂದು ದುರ್ಘಟನೆ ಎಂದು ಚಿತ್ರಿಸಿ ತಳ್ಳಿಹಾಕುತ್ತಾರೆ. ಇತ್ತೀಚೆಗೆ ಅಮೇರಿಕದ ತಲೆತಿರುಕ ಯೋಧನೊಬ್ಬ ಆಫ್ಘಾನಿಸ್ತಾನದಲ್ಲಿ ಹದಿನಾರು ಮಂದಿ ಸ್ಥಳೀಯ ನಾಗರಿಕರ ಮೇಲೆ ಗುಂಡು ಹಾರಿಸಿ ಕೊಲೆಗೈದ. ಇದಕ್ಕೆ ಅಮೇರಿಕದ ಪ್ರತಿಕ್ರಿಯೆ ಎಂಥದ್ದು? ಅವನ ಮೇಲೆ ಕ್ರಮ ಕೈಗೊಳ್ಳುವ ಬದಲು ಪಶ್ಚಾತ್ತಾಪ ವ್ಯಕ್ತಪಡಿಸಿದೆ. ಅದೇ ಆಫ್ಘನ್ನರೇನಾದರೂ ಈ ಕೃತ್ಯ ಎಸಗಿದ್ದರೆ ಡ್ರೋನುಗಳ ಸುರಿಮಳೆಯಾಗುತ್ತಿತ್ತು. ಇದು ಬಿಳಿಯರ ನ್ಯಾಯ.

ಕಳೆದ ವರ್ಷ ಮೇ ತಿಂಗಳಲ್ಲಿ ನಾರ್ವೆಯ ಶಿಶು ಸಂರಕ್ಷಣಾ ಅಧಿಕಾರಿಗಳು ಭಾರತೀಯರಾದ ಸಾಗರಿಕ ಮತ್ತು ಅನುರೂಪ ಭಟ್ಟಾಚಾರ್ಯ ಅವರ ಮಕ್ಕಳಾದ ಅಭಿಗ್ಯಾನ್ ಮತ್ತು ಐಶ್ವರ್ಯ ಇವರನ್ನು ತಮ್ಮ ವಶಕ್ಕೆ ತೆಗೆದುಕೊಂಡರು. ಪೋಷಕರು ಈ ಮಕ್ಕಳನ್ನು ಸರಿಯಾಗಿ ನೋಡಿಕೊಳ್ಳುತ್ತಿಲ್ಲ ಎನ್ನುವುದೇ ಆಪಾದನೆ. ಆದರೆ ಭಾರತದಲ್ಲಿರುವ ಅಜ್ಜ-ಅಜ್ಜಿ ಈ ಮಕ್ಕಳನ್ನು ತಮ್ಮ ಪೋಷಣೆಗೆ ಒಪ್ಪಿಸುವಂತೆ ಮಾಡಿಕೊಂಡ ಮನವಿಯನ್ನು ನಾರ್ವೆಯ ಅಧಿಕಾರಿಗಳು ತಿರಸ್ಕರಿಸಿದರು. ಈ ವಿವಾದ ನ್ಯಾಯಾಲಯದ ಮೆಟ್ಟಿಲೇರಿ, ವಿದೇಶಾಂಗ ಖಾತೆಯನ್ನೂ ಮುಟ್ಟಿತು. ಸ್ಥಿತಿವಂತರಾಗಿರುವ ಅಜ್ಜ-ಅಜ್ಜಿಯರಿಗೆ ಒಪ್ಪಿಸಲು ಅಡ್ಡಿಯೇನಿಲ್ಲ ಎಂದು ಹೇಳುವ ನಾರ್ವೆಯ ವಿದೇಶಾಂಗ ಸಚಿವರು ತಮ್ಮ ದೇಶದ ಶಿಶು ಸಂರಕ್ಷಣೆ ನಿಯಮಗಳ ಹಿಂದೆ ಜಾರಿಕೊಳ್ಳುತ್ತಿದ್ದಾರೆ. ಮಕ್ಕಳನ್ನು ಪೋಷಕರಿಗೆ ಒಪ್ಪಿಸಲು ಹಿಂಜರಿಯುತ್ತಿರುವ ನಾರ್ವೆ ಸರಕಾರದ ವಕ್ತಾರರು ಮಕ್ಕಳ ಸಂರಕ್ಷಣೆ ಬಗ್ಗೆ ಸಂಶಯ ವ್ಯಕ್ತಗೊಳಿಸಿ, ಭಾರತೀಯರಿಗೆ ಅವಮಾನ ಮಾಡಿದ್ದಾರೆ. ಆದರೆ ಭಾರತ ಸರಕಾರ ಇದಕ್ಕೆ ಯಾವ ಪ್ರತಿಭಟನೆಯನ್ನೂ ತೋರಿಲ್ಲ. ಮಕ್ಕಳ ಸಂರಕ್ಷಣೆಯಲ್ಲಿ ತಮ್ಮನ್ನು ಬಿಟ್ಟರೆ ಇಲ್ಲ ಎಂದು ಕೊಚ್ಚಿಕೊಳ್ಳುತ್ತಿರುವ ನಾರ್ವೆ ಅಧಿಕಾರಿಗಳ, ನಿಯಮಗಳ ಮುಂದೆ ಭಾರತದ ವಿದೇಶಾಂಗ ಖಾತೆ ತೋರುತ್ತಿರುವ ದೌರ್ಬಲ್ಯ ನಿಜಕ್ಕೂ ತಲೆತಗ್ಗಿಸುವಂಥದ್ದು. ಈ ಪ್ರಕರಣ ಇನ್ನೂ



ಅನುರೂಪ ಭಟ್ಟಾಚಾರ್ಯ ಅವರ ಮಕ್ಕಳಾದ ಅಭಿಗ್ಯಾನ್ ಮತ್ತು ಐಶ್ವರ್ಯ

ಎಳೆದಾಡುತ್ತಿದೆ. ಬೇಗನೆ ಮಕ್ಕಳು ಭಾರತಕ್ಕೆ ಮರಳಲಿ ಎಂಬುದೇ ನಮ್ಮ ಆಶಯ.

ಇಟಲಿಯ ಹಡಗೊಂದು ಕೇರಳದ ತೀರದಲ್ಲಿ ಸಂಶಯದ ಮೇಲೆ ಯಾವ ಮುನ್ನೆಚ್ಚರಿಕೆಯನ್ನೂ ನೀಡದೆ ಮೀನುಗಾರರ ದೋಣಿಯ ಮೇಲೆ ಗುಂಡುಹಾರಿಸಿ ಇಬ್ಬರು ಮೀನುಗಾರರನ್ನು ಕೊಂದಿತು. ಈ ಆಪಾದನೆಯ ಮೇಲೆ ನ್ಯಾಯವಾಗಿಯೇ ಇಟಾಲಿಯನ್ ಹಡಗನ್ನು ತೀರದಲ್ಲಿ ನಿರ್ಬಂಧಿಸಿ ಗುಂಡುಹಾರಿಸಿದವರನ್ನು ಒಪ್ಪಿಸಬೇಕೆಂದು ಒತ್ತಾಯಿಸಲಾಯಿತು. ಮೂರು ನಾಲ್ಕು ದಿನ ಮಾತುಕತೆ ನಡೆದ ಮೇಲೆ ಇಬ್ಬರು ಆರೋಪಿಗಳನ್ನೂ ಬಂಧಿಸಿ ಕೇರಳ ಪೊಲೀಸರು ಮೊಕದ್ದಮೆ ದಾಖಲಿಸಿದ್ದಾರೆ. ಈಗ ಈ ಇಬ್ಬರು ಇಟಲಿಯ ನಾವಿಕರು ಕೇರಳದಲ್ಲಿ ಬಂಧನದಲ್ಲಿದ್ದಾರೆ. ಇವರನ್ನು ಬಿಡಿಸಿಕೊಳ್ಳಲು ಇಟಲಿಯ ಸರಕಾರ ಹರಸಾಹಸ ಮಾಡುತ್ತಿದೆ. ಅಪರಾಧವೆಸಗಿರುವ ಇಟಲಿಯ ನಾವಿಕರನ್ನು ಯಾವ ಕಾನೂನಿನ ಮೇಲೆ, ಅಂದರೆ ಇಟಲಿ ಅಥವಾ ಭಾರತದ ಕಾನೂನಿನ ಮೇಲೆ ವಿಚಾರಣೆಗೆ ಗುರಿಪಡಿಸಬೇಕು ಎಂಬುದೇ ವಿವಾದಿತ ಪ್ರಶ್ನೆ. ಅಪರಾಧ ಎಸಗಿರುವವರನ್ನು ಬಿಡಿಸಿಕೊಳ್ಳಲು ಸ್ವತಃ ಇಟಲಿಯ ಪ್ರಧಾನಿ ಭಾರತದ ಪ್ರಧಾನಿ ಮೇಲೆ ಒತ್ತಡ ತರುತ್ತಿದ್ದಾರೆ. ಹೇಗಿದೆ ಇವರ ತಂತ್ರಗಾರಿಕೆ! ನಮ್ಮ ದೇಶದ ತೀರದಲ್ಲಿ ಅಪರಾಧ ಎಸಗಿರುವವರು ಇಲ್ಲಿನ ಕಾನೂನು ರೀತ್ಯ ವಿಚಾರಣೆಗೊಳಪಡಬೇಕು. ಇದು ಅಂತರರಾಷ್ಟ್ರೀಯ ನಿಯಮ. ಭಾರತ ಸರಕಾರ ಇಟಲಿ ಸರಕಾರದ ಒತ್ತಡಗಳಿಗೆ ಮಣಿಯಕೂಡದು.



ಇಟಲಿಯ ಹಡಗಿನ ಆಕ್ರಮಣಕ್ಕೆ ಈಡಾದ ಮೀನುಗಾರರ ದೋಣಿ

ಸೀಯಾರ್ಕೆ
'ಚೌಬೀನ', ನಂ. ೮೪೯, ೬ನೇ ಕ್ರಾಸ್, ಬನಶಂಕರಿ ೩ನೇ ಹಂತ, ೩ನೇ ಬ್ಲಾಕ್
ಕತ್ರಿಗುಪ್ಪೆ, ಬೆಂಗಳೂರು - ೫೬೦ ೦೮೫

## ಹಣಮಂತ ತಾಸಗಾಂವಕರ

''ಧರ್ಮಜ್ಜೀ... ಧರ್ಮಜ್ಜೀ... ಅದಿಯಾನಬೇ.''

''ಯಾರ... ಟಪಾಲ ನಾಗಣ್ಣ...'' ಎನ್ನುತ್ತ ತಲೆ ಮೇಲಿನ ಸೆರಗು ಸರಿಮಾಡಿಕೊಳ್ಳುತ್ತ ಒಂದಂಕಣ ಮನಿ ವಳಗಿಂದ ಬಂದ ಧರ್ಮಜ್ಜಿ ಕಟ್ಟಿಕಲ್ಲಿಗೆ ಕೂತಾಗ ಪೋಸ್ಟಮನ ನಾಗಣ್ಣ ಕಾರ್ಡೊಂದನ್ನು ಅವಳ ಕೈಯಲ್ಲಿಟ್ಟ. ತಿರುಗಿಸಿ, ಹೊರಳಿಸಿ, ಕೈ ಆಡಿಸಿ... ''ಕಾದಗ'' ಎಂದಿತು.

''ಅಯ್ಯ, ಇದರಾಗ ಯಾನತಿ ಹೇಳಲಾ...'' ಬಗೆಗಣ್ಣ ಬಿಟ್ಟು ಬಾಯಿ ತೆರೆದು ಕುಳಿತಾಗ ಕೈಯ ಕೋಲು ನೆಲಕ್ಕೆ ಬಿದ್ದಿತ್ತು. ನಾಗಣ್ಣ ಓದಿ ಸುತ್ತಿ ಹೊಳ್ಳಿಸಿ, ''ನೋಡಬೇ, ಅದ ಹೋದ ಖೆಪೆ ಬಂದಿತ್ತಲಾ ರಿಂದಣ್ಣನ ಪತ್ರ. ...ಇಲ್ಲಿ ಎಲ್ಲಾ ಪಾಡ ಐತಿ ಜೇಲಿನ್ಯಾಗ ಸಾಲಿನೂ ಕಲೀತನು... ನನ್ನ ತಪ್ಪ ಕ್ಷಮಿಸ್ತಿಯಲ್ಲ ಅಮ್ಮಾ... ನನ್ನ ತಪ್ಪ ಮಾಫ ಮಾಡಮ್ಮ... ನೀನ ಖರೇ ನನ್ನವ್ವ ಎಂದು ಬರದಾನಬೇ...'' ಅನ್ನುತ್ತ ಪೋಸ್ಟಮನ ಎದ್ದುಹೋಗಿದ್ದ. ಬಂದ ಟಪಾಲ ಹೊಳ್ಯಾಡಿಸಿ ನೋಡಿ ಉಳ್ಯಾಡಿ ಉಳ್ಯಾಡಿ ಅಳಾಕ ಹತ್ತು... ''ಹಾಂಟ್ಯಾನ ಮಗಾ... ನನ್ನ ಮಗನ್ನ ನುಂಗಿ ನೀರ ಕುಡ್ದಾನ'' ಎಂದುಕೊಂಡಳು.

ಇವಳ ಭೋರ್ಯಾಡಿಗೆ ಸುತ್ತಲ ಗುಡುಸಲ ಹೆಣ್ಣ ಗಂಡ ಪಿಳ್ಳಿ ಹಾಯ್ದುಹೋಗಾವ್ರು ಕೂಡಿದರು. ಬಾಯಿ ಬಿಟಗೊಂಡು ಮರಗಿದ್ರು. ಆದರ ಆಕಿ ದುಕ್ಕಾ ಯಾರಗೂ ಕಸಗೊಳ್ಳಾಕ ಬರುದುಲ್ಲಲ್ಲ.

ಇದು ಊರಿನ ಕೊನೆಗಿರುವ ಕೊಳೆಗೇರಿ. ಇಲ್ಲಿ ಎಲ್ಲಾ ಜಾತಿ-ಧರ್ಮದವರಿದ್ದರೂ ಸಮಾನತೆಯನ್ನು ನೋಡಬಹುದು. ಎಲ್ಲರೂ ಕೂಲಿಗಳು, ಕಾರ್ಮಿಕರು, ಬಡವರು. ಮುಂಜಾನೆಯಿಂದ ದುಡಿದರೇನೇ ಒಪ್ಪತ್ತಿನ ಕೂಳು ಬೇಯುವುದು. ಸಿಮೆಂಟ ಕಾರಖಾನೆ, ಗಾರ್ಮೆಂಟ ಕೂಲಿ ಟೇಲರ, ಹೊಲ, ಮನೆಗಳ ಗಂಡಾಳು, ಹೆಣ್ಣಾಳುಗಳು, ಓಣಿ ಓಣಿಗಳಲ್ಲಿ ಕಟ್ಟಿಗೆ ಹೊತ್ತು ಮಾರುವವರು, ಕಬ್ಬಿನ ಹಾಲು ಮಾಡುವ ತಳ್ಳುಗಾಡಿಗಳು. ಕಾಯಿಪಲ್ಲೆ, ಪಾವರೋಟಿ, ಐಸಕ್ಯಾಂಡಿ ಮಾರುವ ಭಾಂಡಿ, ಒಗ್ಗಾಣಿ ಕಸಮುಸುರೆಯ, ವೆಲ್ಡಿಂಗ್, ಪೇಂಟಿಂಗ್, ಗ್ಯಾರೇಜ ಕಾರ್ಮಿಕವರ್ಗದ ಬೆವರು ಸುರಿಸಿ ದುಡಿಯುವ ಏರಿಯಾ ಎಂದು ಗಾಂಧಿನಗರ ಬೋರ್ಡು ಹಾಕಿಕೊಂಡಿತ್ತು. ಅಂಬೇಡಕರ ರಸ್ತೆಯ ಚಿಕ್ಕ ಸಂದಿಗಳು. ನಡುವೆಯೇ ಗಟಾರು ಕೊಳಕು ನೀರು ಒಂದೇ ಕಡೆ ಹರಿಯದೆ ಎಲ್ಲೆಲ್ಲೂ ಹರಿದು ಗಬ್ಬುನಾತ ತುಂಬಿತ್ತು. ಚಿಕ್ಕ ಮಕ್ಕಳು ಸಿಂಬಳ ಸುರಿಸುತ್ತ ಚಡ್ಡಿ ಬಿಚ್ಚುತ್ತಿದ್ದರು. ಅರ್ಜಂಟಾದ್ರೆ ಅತ್ತಿತ್ತ ನೋಡಿ ಹೆಂಗಸರೂ ಸೀರೆ ಸರಿಸುತ್ತಿದ್ದರು. ಕೋಳಿಗಳ ಕುಕ್ಕು ಕೂ, ಕಾಗೆಗಳ ಸಂಸಾರ, ಹಡಪ ಹತ್ತಿದ ನಾಯಿಗಳ ಕೂಟ, ಹಂದಿಗಳು ಎಲ್ಲವೂ ಎಲ್ಲರ ಸ್ನೇಹಿತರೇ. ಕೂತ ಮಕ್ಕಳ ಕುಂಡೆ ಮೂಸುತ್ತ ಹೊಡ್ರಕ್ ಹೊಡ್ರಕ್... ಗುರುಗುಟ್ಟುತ್ತ ಹತ್ತಿರದ ಹೆಣ್ಣು ಹಂದಿಯೊಡನೆ ಸೆಕ್ಸಾಟ ಆರಂಭವಾಯಿತೆಂದೇ ಲೆಕ್ಕ. ಕ್ಷಣ ಕ್ಷಣದ ಸಂದಿಗೊಂದಿಗಳಲ್ಲಿಯ ರಂಗಿನಾಟವಿದು, ವಿದೇಶಿ ಪ್ರವಾಸಿಯೊಬ್ಬ ಇಲ್ಲಿಯ ಈ ದೃಶ್ಯವನ್ನು ಸೆರೆಹಿಡಿದ ಫೋಟೋ ಕೋಟಿಗಟ್ಟಲೆ ಬಹುಮಾನ ಗಳಿಸಿತ್ತಂತೆ.

ಇಲ್ಲಿಯವರೆಲ್ಲ ಸಾಕ್ಷರರಾಗಲಿ ಎಂದು ಸರಕಾರ 'ಜೈಹಿಂದ ಕನ್ನಡ ಶಾಲೆ'ಯನ್ನು ಪ್ರಾರಂಭಿಸಿ ರಾತ್ರಿ ಶಾಲೆಯಲ್ಲಿ ಕಲಿಯಲೆಂದು ಏನೇನೋ ಕಸರತ್ತು ಮಾಡುತ್ತಿದೆ. ಶಾಲೆಯ ಬಾಗಿಲು ತಕ್ಕೊಂಡು ಕೂತಿದೆ. ಸರ್ವೆ ಮಾಡಿಸಿ ಶಾಲೆ ಬಿಟ್ಟವರೂ ದೇವದಾಸಿ ಮಕ್ಕಳೂ ಹೊಸದಾಗಿ ಸೇರಬಯಸುವ ಪಿಡ್ಡಗಳನ್ನೆಲ್ಲ ಶಾಲೆಗೆ ಕಳಿಸಬೇಕೆಂದು ತುತ್ತೂರಿ ಊದುತ್ತ, ಡ್ರಂ ಬಾರಿಸುತ್ತ ಲೌಡಸ್ಪೀಕರ ಪ್ರಚಾರ ಮಾಡಿದ್ದೇ ತಡ ಬಿಸಿಯೂಟಕ್ಕೆ ಹಾಜರ, ಊಟ ಮುಗಿದಾಕ್ಷಣ ತಟ್ಟೆ ಬಾರಿಸುತ್ತ ನಾ ಮುಂದೆ ತಾ ಮುಂದೆ ಎಂದು ಸಿಕ್ಕ ಸಿಕ್ಕ ಹಾದಿ ಹಿಡಿಯುವರು. ಅದೂ ಸರಕಾರವೇ ಕೊಟ್ಟ ಸೈಕಲಲ್ಲಿ, ಹಾಜರಿದ್ದ ಶಿಕ್ಷಕರ ಮುಖ ನೋಡಬೇಕು... ಇವರ್ದಿಷ್ಟೆ. ಸಾಲಿ ಅರಿವಿ, ಸಾಲಿ ಊಟ ಆತು. ಪುಸ್ತಕ ಮೂಲ್ಯಾಗನ.

ಮೀಶೆ ಮೂಡಿದ, ರಟ್ಟೆ ಬಲಿತ ಹುಡುಗರು ರಿಕಾಮಿ ಅಡ್ಯಾಡಿ ಸೂರ್ಯನನ್ನು ಮನೆಗೆ ಕಳಿಸುತ್ತಿದ್ದಿಲ್ಲ. ಟೇಲರಿಂಗೋ, ಇಟ್ಟಂಗಿ ಭಟ್ಟಿಯೋ, ಹೊಟೇಲುಗಳಲ್ಲಿ ಕ್ಲೀನರೊ, ಥೇಟರುಗಳಲ್ಲಿ ಹುರಕಡ್ಲಿ ನಿಂಬಲೇಟ ಮಾರಲೋ ಏನೋ ಮಾಡುತ್ತ ಮನೆಗೊಂದಿಷ್ಟು ಪುಡಿಗಾಸ್ಹಾಕಿ ತಮ್ಮ ಚೈನಿ ರೊಕ್ಕಾನೂ ತೆಗೆಯುತ್ತಿದ್ದರು. ಇವರ ಜೋಡಿ ಸಾಲಿಗಿ ಹೋಗೂವು ಹೈಸ್ಕೂಲಕ ನೇಮಿ ಕಲ್ಯಾವ್ರೂ ಇದ್ರು. ಸಾಲಿ ಸೂಟಿಯೊಳಗ ಖಾಲಿ ತಿರಗದ ಒಂದೀಟ ಕಮಾಯಿಸಿ ಸಾಲಿ ಫೀ, ಟ್ಯೂಶನ ಫೀ, ಅರಿವಿ, ಅಂಚಡಿ, ಪುಸ್ತಕ, ವಹಿ ಖರ್ಚು ತೆಗೀತಿದ್ದು, ಅವ್ವಾ ಅಪ್ಪಗ ರೊಕ್ಕಕ ದುಂಬಾಲು ಬೀಳತಿದ್ದಿಲ್ಲ.

ಇಂಥಾದ ಗುಂಪಿನ್ಯಾಗ ಗೋಟ್ಯಾನೂ ಯಿದ್ದ. ಗೋಟ್ಯಾ ಧರ್ಮಜ್ಜಿ ಮಗ. ಅಲ್ಲೇ ಗಾಂಧಿನಗರದ ದೇಶಿ



ಸಾಲಿಗೆ ಹೋಗತಿದ್ದ. ಅವ್ವ ಬ್ಯಾಡೋ ಬ್ಯಾಡೋ ಅಂದರೂ ಕೇಳದನ ಸಾಲಿ ಬಿಟ್ಟ ಮ್ಯಾಲ ಸಂಜಿ ಮುಂದ ಬಿಸ್ಕೀಟ ಕಾರಖಾನೇಕ ಪ್ಯಾಕ ಮಾಡಲಿಕ್ಕೆ ಹೋಗತಿದ್ದ. ಅವ್ವನ ಕೈಯ್ಯಾಗ ವಾರ ವಾರ ನೋಟ ಕೊಡತಿದ್ದ. ಬ್ಯಾಡೋ... ಅಂದರೂ ಕೇಳದ ನಿನಗೊಂಜರಾ... ಹಗರ... ಅಂತಿದ್ದ. ಕಾರಖಾನೇಕ ಹೊಕ್ಕಿದ್ದ... ನಕ್ಕೋತನ ಬರತಿದ್ದ. ಅವ್ವ ದಿನಾ ರಾತ್ರಿ ಕಾಯಕೊಂತ ಕಟ್ಟಿ ಮ್ಯಾಲೆ ಕುಂಡ್ರಾಕಿ. ನಕ್ಕೋತ ಬಂದ ಮಗನ್ನ ನೋಡಾತಲೇ ಬಾಳೇ ಕುಶಿ ಆಗಿ... ನನ್ನ ರಾಜಾ... ಬಂಗಾರ... ಅನಕೊಂತನ ಲಟಲಟ ನೆಟಿಗಿ ಮುರದ ನೆದರ ತಗ್ಯಾಕಿ. ಮುದ್ದ ಕೊಡಾಕಿ. ತಾಯಿಗೆ ಮಕ್ಕಳು ಚಿಕ್ಕವರೇ. ಮಡಿಲಲ್ಲಿ ಆಡುವವರೇ... ''ಹೋಗಬೇ... ನಾ ಏನ ಸಣ್ಣಾಂವ ನೆದರ ಆಗಲಾಕ'' – ಎಂದ ಗೋಟ್ಯಾಗೆ, ''ಇಲ್ಲೋ ಮಗಾ, ನಿನಗ ತಿಳ್ಯಾಕಿಲ್ಲ. ಮಂದಿ ಕಣ್ಣ ಹ್ಯಾಂಗಿರತಾವು ತಿಳ್ಯಾಣಿಲ್ಲ. ಹೀಂಗ, ಅಲ್ಲನ. ನಿಮ್ಮಪ್ಪಗ ನೆದರ ಆಗೇ ಹೊಂಟಹ್ವಾದ. ಗಣ್ಯಾಗ ಮದ್ದ ಹಾರಿ ಹಕನಕ ಜೀಂವ ಕಳಕೊಂಡಲ್ಲ, ಹ್ವಾದದ್ದೇನ ಬರತೈತೇ... ನೀನ ನನ್ನ ಜೀಂವ, ನಾನ ನಿನ್ನ ಜೀಂವ. ನೀ ಚಂದಂಗ ಸಾಲಿ ಕಲ್ತು ದೊಡ್ಡ ಸಾಯೇಬ ಆಗು. ನಾ ಚಂದ್ರಕಾಳಿ ಸೀರಿ ಉಟಗೊಂಡ ಸಾಯೇಬನ ಅವ್ವ ಅನಿಸಿಗೊಂತೀನಿ,'' ಅಂತ ಪಕಪಕ ನಕ್ಕಳು. ನಕ್ಕದ್ದು ಕಂಡ ಗೋಟ್ಯಾ... ''ಯವ್ವಾ ನೀ ನಗಾಣಾ ಏಟ ಚಂದ ಕಾಣತೀಲಾ,'' ಅಂದ.

''ಅಯ್ಯ, ನಿಮ್ಮಪ್ಪನೂ ನನಗ ಹಿಂಗ ನೋಡ ಧರ್ಮೀ, ನೀ ನಕ್ಕಿ ಅಂದರ ಹುಣಿಮಿ ಚಂದ್ರಾಮ ಕೈಯಾಗ ಸಿಕ್ಕಾಂಗ ಆಗತೈತಿ... ಅಂತಿದ್ದ.'' ಗಂಡನ ನೆನಪ ಕಣ್ಣೀರು ಉದುರಿಸಿತು. ''ಗಂಡಾ ಹೆಂಡ್ತಿ ಜೀವನ ಗಂಧಾ ತೀಡಿಧಾಂಗಯಿತ್ತು. ಅಂವಾ ಹ್ವಾದಮ್ಯಾಲೆ ಎಲ್ಲಾ ಕಳಕೊಂಡ್ನಿ ಅನಸ್ತು. ನಿನ್ನ ಮುಖಾ ನೋಡ್ಕೊಂಡ ಬಾಳೇವು ಮಾಡಲಾಕ ಹತ್ತೀನಿ.''

ಹೌದು, ಗೋಟ್ಯಾಗೂ ಅವ್ವನ್ನ ಕಂಡರ ಸಮುದ್ರ ಉಕ್ಕಿಧಾಂಗ ಪ್ರೀತಿ ಉಕ್ಕತಿತ್ತು. ಹಾಲು ಹೆಪ್ಪಗಟ್ಟಿಧಾಂಗ ಹೆಪ್ಪಗಟ್ಟತಿತ್ತು. ಅವ್ವಗ ಯಾರ್ರೇ ಧರ್ಮಜ್ಜೀ... ಅಜ್ಜೀ... ಅಂತ ಕರದ್ರ... ಇಂವಗ ಭಾಳ ಸಿಟ್ಟ ಬರತಿತ್ತು. ''ಏನ ಬರಾ ವಯಸ್ಸ ನಿಂದು, ಅಜ್ಜೀ ಅನಿಸಿಗೊಳ್ಳಾಕ !''

''ಅನ್ನಲಿ ಬಿಡೋ ಮಗಾ... ಒಂದೀಸ ಹಲ್ಲ ಉದುರ್ಯಾವು. ತಲೀ ಅನ್ನೂದು ಹಂಜಿಬುಟ್ಟಿ. ಜೋಲಿ ಹೊಕ್ಕತಿಯಂತ ಕೋಲ ಹಿಡಿದೀನಿ. ಮಗಾ... ದುಃಕ್ಕಾನ ನನ್ನ ಹಣ್ಣ ಮಾಡ್ಯಾವು. ಕಷ್ಟ ಅಲ್ಲ. ಕಷ್ಟಕ ನಾ ಅಂಜಾಕಿಯಲ್ಲ. ನಿನ್ನ ಅಕ್ಕ ಮಾತಾಯಿ ಹೆಂತಾ ಚಂದಯಿದ್ದುಲ್ಲ. ಹಡ್ಯೂವಾಗ ಬಿಕ್ಕ ಹತ್ತಿ ಗೊಟಕ್ ಅಂದ್ಲು. ಕೂಸ ಹೊಟ್ಯಾಗನ ಹೋಗಿತ್ತು. ನಿಮ್ಮಪ್ಪ ನಾ ಕೂಡೇ ಬಡಬಡಕೊಂಡ ಅತ್ತ್ಯೂ. ಯಾನ ಮಾಡೂದ... ನೀ ಕೈಗೂಸ. ನಿನ್ನ ಮುಖಾ ನೋಡೇ ಅದ್ನ ಹೊಟ್ಯಾಗ ಹಾಕ್ಕೊಂಡ್ನಿ. ನೀ ಈಗ ಈಟೇತರ ಆಗೇದಿ'' ಅವ್ವ ಹೇಳುತ್ತಿದ್ದಳು.

''ಗೋಟ್ಯಾ... ಗೋಟ್ಯಾ... ಅನಕೊಂತ ಬುದ್ದ ಹಿಮಡ್ಯಾ ಕ್ವಾರಿ ಹೀಂಗ ಐದಾರು ಗೇಣೇರು ಕರ್ಯಾಕ ಹತ್ಯು. ಈಗ ಬನ್ನಿ ಬೇ... ಬೆಕ್ಕ ಟಣ್ಣಂತ ಹಾರಿಧಾಂಗ ಜಿಗದಬಿಟ್ಟ.''

''ಯಾಕಲೇ ಮಗನಾ, ಇವತ್ತ ಕಟ್ಟಿಕಡೆ ಬರಲಿಲ್ಲಾ... ದಂಡಾ ಕೊಡಬೇಕ ನೋಡ.''




''ಯಾರ್‍ರಿಪಾ... ದಂಡಾ ಕೊಡೂನಲಾ... ಅದರಾಗೇನ. ನೀವು ಹೇಳಿದಾಂಗ ಅದಕ್ಯಾಕ ಚಿಂತಿ. ಎಲ್ಲಾರೂ ದೋಸ್ತರ ಅದ್ಯೋ... ಮನ್ನೆ ಮೈಬ್ಯಾಗ ಮಾಡಿಧಾಂಗ ಸಾಲೀ ಬೈಲ ಮೂರು ಸುತ್ತ ಹೊಡ್ಯೋದೇನಲ್ಲ... ಹೌದಲ್ಲೋ ಮತ್ತ,'' ಎಂದು ಗೋಟ್ಯಾ ಕೇಳಿದ್ದಕ್ಕೆ, ''ಏ ಅದಲ್ಲ ಬಿಡು... ಚಾ ಮಿಸಳ... ಹ್ಯಾಂಗೋ ಪಗಾರ ಆಗೇತಿ... '' ಗುಂಪಿನಲ್ಲಿಯ ಒಬ್ಬ ಅಂದ.

''ಅದಕ್ಯಾಕರ್ಲ್ಯೋ ನಡ್ರಿ...''

ಹೀಂಗ ಕಟ್ಟಿ ಬೈಠೇಕ ಟಾಯಿಮ ಸೀರ ಬರ್ಲಿಲ್ಲಾಂದ್ರ ದಂಡಾ ಉಳದಾವರು ನಿರ್ಧರಿಸುತ್ತಿದ್ದರು. ಓಡ್ಯಾಡಸೂದು, ಕಲ್ಲ ಹೊರೂದು, ಗಿಡಾ ಏರೂದು, ಬತ್ತಲೆ ಓಡೂದು, ಮೆಣಸಿನಕಾಯಿ ತಿನ್ನೂದು, ಇಂಥಾವೆಲ್ಲ ಮಾಡಸತಿದ್ದರು. ಇವೆಲ್ಲ ನೋಡಿದ್ದ ಓಣಿ ಹಿರೇರು ಸುಮ್ಮಕ ಇರದ ಬೈತಿದ್ದರು. ಹೀಂಗಾಗಿ ಈಗೀಗ ಇವೆಲ್ಲ ಕಮ್ಮಿಯಾಗಿ ಚಾ ಬಜಿ ಚಾ ಚೋಡಾಕ ಬಂದ ನಿಂತತಿ.

ಆದರ ಅವತ್ತ ಮಾತ್ರ ಕೈಮೀರಿ ಹೋಗಿತ್ತು. ಗೋಟ್ಯಾ ಅಂದು ಭಾಳ ಹುರುಪಿನ್ಯಾಗ ಯಿದ್ದ. ಮರುದಿನ ದಿವಾಳಿ ಹಬ್ಬಂತ ಮಾಲಕರು ಹೆಚ್ಚು ದುಡಿಸಿಗೊಂಡ ಹೊಸಾ ಅರಿವಿ, ಪಾಕೀಟದಾಗ ಒಂದಿಷ್ಟ ನೋಟ, ಬಿಸ್ಕೀಟಿನ ದೊಡ್ಡ ಪುಡಕಾ ಖುಶಿಯಂತ ಕೊಟ್ಟಿದ್ರು. ಹಾಡಾ ಹಾಡಕೋತ ಕಟ್ಟಿ ಬೈಠೇಕ ಬಂದ. ದೋಸ್ತ ಮಂಡಳೀ ಕೂತಿತ್ತು. ''ಯಾಕರಲೇ, ಭಾಳೇ ಹೊತ್ತಾತೇನು,'' ಕುಂತಗೋತ ಪೀಠಿಕೆ ಹಾಕಿದ.

''ಬಾರಲೇ ಮಗನಾ... ಗೋಟ್ಯಾ... ಯಾಕ ಹೊತ್ತ. ದಂಡಾ ಕೊಡಬೇಕಲಾ ಮತ್ತ...'' ಕ್ವಾರಿ ಹೇಳಿದ.

''ಅದಕ್ಯಾಕರಲೇ... ಯಾನ ಬೇಕು ಹೇಳ್ರಿ.''

''ಖಾರಾ ಜಿಲೇಬಿ ಆಗಬೇಕ...'' ಒಬ್ಬ ಹೇಳಿದ್ದ.

''ಏ, ನೀ ಬರೇ ತಿನ್ನಾಕ ಸಾವತಿಲೇ... ಆಮ್ಯಾಲೆ ತಿನ್ನೂನು. ಈಗ ಈ ಬೈಲ ನಾಕ ಸುತ್ತ ಹೊಡಿ !'' ಹಿಮಡ್ಯಾ ಆಜ್ಞಾಪಿಸಿದ. ಎಲ್ಲರೂ ''ಹೂಂ...'' ಅಂದರು.

ಸಿಡಿಮಿಡಿಗೊಳ್ಳುತ್ತ ಅಂಥಾ ಅಮಾಸಿ ಕತ್ತಲಲ್ಲಿ ಪುರಮಾಸಿ ಕೊಟ್ಟ ಶಿಕ್ಷಾಕ ಗೋಣ ಹಾಕಿದ ಗೋಟ್ಯಾ ಲಾಯಿಟ ಕಂಬದ ಬೆಳಕಿನ ಗುಂಟ ಓಡಲಾಕ ಹತ್ತಿದ. ಕೂತವರೆಲ್ಲ ಕೇಹು... ಕೇಹು... ಕ್ಯಾಕಿ ಹೊಡೆಯುತ್ತ ಸಿಳ್ಳು ಹಾಕುತ್ತಿದ್ದರು.

ಒಂದು ಸುತ್ತು ಮುಗಿಸಿದ. ತೇಕು ಹತ್ತಿತ್ತು. ಹಂಗೇ ಸಾವಕಾಶ ಓಡಿದ ಓಡಿದ... ಹುರುಪು ತುಂಬುವುದು ಜೋರಾಗಿತ್ತು. ಆದರೆ ಇವನಿಗೆ ಇಂಥ ಶಿಕ್ಷೆ ಕೊಟ್ಟದ್ದಕ್ಕೆ ಮೈ ಉರಿಯುತ್ತಿತ್ತು. ತೇಕು ಆರಿಸಲು ಕಟ್ಟೆಗೆ ಕೂತ.

''ಏ ಮಗನಾ... ಕುಂಡ್ರಂಗಿಲ್ಲ...'' ಯಾವನೋ

ಒದರಿದ. ''ಒಂಜರಾ... ದಮಾ ಆರಿಸಿಗೋತೀನಿ'' ಅಂದ. ಕೂತ.

ರಿಂದಣ್ಣ ಒಪ್ಪದೇ,... ''ಕತ್ತಿ ಮಗನ... ನಮ್ಮನ್ನ ಬಯ್ಯಕೋತ ಸುತ್ತ ಹೊಡಿದಿ. ಈಗ ದಮಾ ತಗೋತಿಯೇನು... ಏಳ...'' ಎಂದು ಕುತ್ತಿಗೆ ಹಿಡಿದು ನುಗಿಸಿದ. ನುಗಿಸಿದ್ದೇ... ರಭಸಕ್ಕೆ ತಲೆ ಗೋಡೆಗೆ ಠೊಪ್ಪೆಂದು ಬಡಿಯಿತು. ಅಯ್ಯೋ... ಒದರಿದ್ದೇ ನಿಶ್ಚೇಷ್ಟಿತನಾಗಿ ಬಿದ್ದ. ಒದ್ದಾಡುತ್ತಿದ್ದ. ಆಡಾಡತಾ ಹುಡುಗಾಟ ಹುಡುಗನ ಜೀಂವಕ್ಕೇ ಕಂಟಕಾತು. ಇದ್ದಾವರೆಲ್ಲಾ ಅಲ್ಲಿಂದ ದಿಕ್ಪಾಪಾಲಾದರು. ಚರಿಗಿ ಹಿಡಕೊಂಡ ಹೊಂಟ ಮಂದಿ ನೋಡಿ ಹಿರ್ಯಾರಿಗೆ ಸುದ್ದಿ ಮುಟ್ಟಿಸಿತು. ಪೊಲೀಸರಿಗೆ ತಿಳಿಸಿದ್ರು. ವ್ಯಾನ ಬಂದು ದವಾಖಾನಿಗೆ ಸೇರಸ್ತು. ಇತ್ತ ಪಂಚನಾಮಿನೂ ಮಾಡಿತು. ಮಗಾ ಬರತಾನೂ... ನನ ಗೋಟ್ಯಾ ಬಂದೇನ... ಅನಕೊಂತ ಕಟ್ಟಿ ಮ್ಯಾಲೆ ಕೂತ ಧರ್ಮಜ್ಜಿಗೆ ಈ ಸುದ್ದಿ ಕೇಳಿ ಎದಿ ಒಡದು ಹೌಹಾರಿ ಹೋಕೊಳ್ಳಾಕ ಹತ್ಯು. ಬಡಬಡಕೊಂಡ ಅತ್ಯು. ಕೂಡಿದ್ದ ಹೆಂಗಸರು ಅವಳಿಗೆ ಸಮಾಧಾನ ಮಾಡಾಕ ಹತ್ಯು. ಹ್ಯಾಂಗಾದೀತು ಸಮಾಧಾನ. ಹೊಳ್ಯಾಡಿದ್ಲು... ಉಳ್ಯಾಡಿದ್ಲು... ''ನನ ಗೋಟ್ಯಾ... ನನ ಮಗನ...'' ಇವಳ ರೋದನೆ ಗಾಂಧಿ ನಗರದ ತುಂಬೆಲ್ಲ ಪಸರಿಸಿ ವಾತಾವರಣವನ್ನೇ ಬಿಸಿಯಾಗಿಸಿತ್ತು.

ಅತ್ತೂ ಅತ್ತೂ ಖಬರ ತಪ್ಪಿ ಬಿದ್ದ ಧರ್ಮಜ್ಜಿಗೆ ಕೂಡಿದ ಹೆಣ್ಣುಮಕ್ಕಳು ನೀರ ಸಿಡಿಸಿದರು. ಸೆರಗಿಲೇ ಗಾಳಿ ಹಾಕಿದರು. ಉಳ್ಳಾಗಡ್ಡಿ ಒಡದ ಮೂಸಿ ತೋರಿಸಿದರು. ಕೈ ಬಟ್ಟು, ಕಾಲು ಬಟ್ಟು ಒತ್ತಿದರು. ಯಾರದೋ ತೊಡೆ ಮೇಲೆ ತಲೆಯಿಟ್ಟಿದ್ದ ಧರ್ಮಜ್ಜಿ... ನರಳಿಕೋತನ ಸುತ್ತಾ ಕಡೆ ಕಣ್ಣ ಹಾಯಿಸಿದಳು.

ತೊಡಿ ಮೇಲೆ ಹಾಕೊಂಡವಳು, ''ಕಣ್ಣ ಬಿಟ್ಟಿಯೇ ಧರ್ಮಜ್ಜಿ... ದೇವ್ರ ಕಣ್ಣ ಬಿಟ್ಟಂಗಾತು... ನಾವು ಅದೀಬೇ ನಿನ್ನ ಸಂಗಾಟ... ಅಂಜಬ್ಯಾಡ... ಅಳಬ್ಯಾಡ... ಧೈರ್ಯಾ ತಗೋ...'' ಅಂತ ತನಗೆ ತಿಳಿದದ್ದನ್ನ ಹೇಳಿದಳು.

ಸರಗ್ಗನೆ ಎದ್ದ ಧರ್ಮಜ್ಜಿ ಮತ್ತೆ, ''ಗೋಟ್ಯಾ... ನನ ಮಗನ...'' ಅಂತ ಅಳ್ಯಾಕ ಹತ್ಯು.

ಎದಿ ಎದಿ ಬಡಕೋತ ನಾಕೈದು ಮಂದಿ ಆಸುಪಾಸಿನ ಹೆಣ್ಣುಮಕ್ಕಳೊಂದಿಗೆ ದವಾಖಾನೆಗೆ ಹೋದಾಗ ಮಗನ ಶವ ನೋಡಿ ಮತ್ತಷ್ಟೂ ಅತ್ತಳು. ಅವಳೊಡನೆ ಬಂದಿದ್ದವರೂ ಅತ್ತರು. ''ಇತ್ಲಾಗ ಗಂಡನ್ನ ಕಳಕೊಂಡ್ನಿ... ಅತ್ತ ಮಗಳ್ನ... ಈಗ ಯದಿ ಉದ್ದ ಮಗನ್ನ... ಹೆಂಥಾ ನಶೀಬರೇ... ನಂದು...''

ಧರ್ಮಜ್ಜಿದು ಒಂದೇ ಆಕ್ರಂದನ. ನರ್ಸುಗಳು ಬಂದು ಸಮಾಧಾನ ಹೇಳಿದರು. ಸುಮ್ಮನಿರಲು ಗದರಿದರು, ''ಡಾಕ್ಟರ ಸಾಯೇಬ್ರು ಬರ್ತಾರ... ಗಪ್ಪಿರಬೇ... ಸುಮ್ಮಾಕ ಯಿರು.'' ಮುಖ್ಯ ಡಾಕ್ಟರು ಬಂದರು. ಅವರ ಹಿಂದಿನಿಂದ ನಾಕೈದು ಮಂದಿ ಡಾಕ್ಟರುಗಳು. ಮೂರ್ನಾಲ್ಕು ಬಿಳಿ ಅರಿವೆಯ ನರ್ಸುಗಳ ದಂಡೇ ಬಂತು. ಡಾಕ್ಟರಗೆ ನೊಂದ ಮನದಿಂದ ಬಿಕ್ಕುತ್ತ ಕೈ ಮುಗಿದಳು... ''ನೋಡು ಧರ್ಮಜ್ಜಿ... ಈ ನಿನ್ನ ಮಗ ನಿನಗ ಕೊಡು ಅಂತಾ ಈ ಹಣದ ಪಾಕೀಟು ಕೊಟ್ಟು ಕಣ್ಣು ಮುಚ್ಚಿದ. ಅವನ ಹೇಳಿಕಿ ಮ್ಯಾಗ ನಿನಗ ಕೊಡ್ತನು ಇಕಾ...'' ಎಂದು ಕುಗ್ಗಿದ ಧ್ವನಿಯಿಂದ ಹೇಳಿದ ಡಾಕ್ಟರು ತಮ್ಮ ಪಟಾಲಂನೊಂದಿಗೆ ಹೋದರು. ಅದನ್ನು ಹಿಡಿದು ಮತ್ತಷ್ಟು ರೋದಿಸಿದಳು. ''ಎಷ್ಟೋ... ಕಾಳಜಿ ನನ್ನ ಮ್ಯಾಲ... ಗೋಟ್ಯಾ... ನೀನ ಯಿದ್ದ ನನ್ನ ಒಯ್ಯಬಾರದ ಆ ಶಿವಾ... ಗೋಟ್ಯಾ...''

✶ ✶ ✶

ರಿಂದಣ್ಣ ಗೋಟ್ಯಾಗ ಕೊಂದ ಸುದ್ದಿ ಊರ್‍ಸುದ್ದಿಯಾಗಿ ಬಣ್ಣ ತುಂಬಿಕೊಂಡು ಹರಿದಾಡುತ್ತಿತ್ತು. ರಿಂದ್ಯಾಗ ಪೊಲೀಸರು ಹಿಡದಾರು. ನಾಕ ಯಿಕ್ಕರಿಸ್ಯಾರು... ಎಲ್ಲಾರ ಹೆಸರೂ ಹೇಳ್ಯಾನು ತಾ ಮಾಡಿಲ್ಲ... ಮೈಬ್ಯಾ... ಮಾಡ್ಯಾನು ಅಂದಂತ.

ಅವನ ದೋಸ್ತರನೆಲ್ಲಾ ಹಿಡದಾರು. ಬರಮಪ್ಪನ ಪ್ರಸಾದಕ ಯಾರ್‍ಯಾರದೋ ಹೆಸರು ಒದರ್‍ಯಾರು... ಸುದ್ದಿ... ಗಾಳಿ ಸುದ್ದಿ... ಸಂದಿಗಳಲ್ಲೆಲ್ಲ ಬೀಸಿತು.

''ಇದ್ನ ರಿಂದ್ಯಾ ಮಾಡಿರಾಕಿಲ್ಲ, ಅದೇನ ಮಾಡೀತು ಸಾದು ಪ್ರಾಣಿ. ಮ್ಯಾಲಿನ ಕೇರ್‍ಯಾರು ಮಾಡಿಸ್ಯಾರಲೇ...''. ಮತ್ತೊಬ್ಬ, ''ಹೌದ್ರಲೇ... ನಡ್ರಿ ಆ ಓಣಿಗೆ ಬೆಂಕಿ ಹಚ್ಚಿ ನಾವೂ ಗಂಡಸ್ಸಾನಿ ತೋರಸೂನು'' ಅಂದ.

ಇನ್ನೂ ಗುಂಪು ಕೂಡುತ್ತಿರುವಾಗಲೇ... ''ನಮ್ಮ ಮನಿಗೊಳ ಮ್ಯಾಲ ಕಲ್ಲ ಬಿದ್ದೂದ್ರಲೇ... ಪೆಟ್ರೋಲ ಒಗದು ಉರಿ ಹಚ್ಚಲಾಕ ಹತ್ಯಾರಲೇ... ಹಚ್ಚಿ ಓಡಿದ್ರಂತ...'' ಎಂಬ ಸುದ್ದಿ ಕಾಳ್ಗಿಚ್ಚಾಯಿತು.

ಯಾರು... ಎಲ್ಲಿ ಕಲ್ಲು ಒಗದ್ರೋ... ಯಾರು ಎಲ್ಲಿ ಬೆಂಕಿ ಹಚ್ಚಿದರೋ... ಯಾವ ಜಾತೀನೋ... ಯಾವುದೂ ಗೊತ್ತಿಲ್ಲ... ಸುದ್ದಿಯನ್ನು ಬಾಯಿ ತೆಗೆದು ಕಿವಿ ಅಗಲಿಸಿ ಕೇಳುತ್ತಿದ್ದರಷ್ಟೆ. ಕೆಂಡದ ಮೇಲೆ ಹುಲ್ಲು ಹಾಕಿ ಗಾಳಿ ಬೀಸಿದರೆ ಉರಿ ಹೊತ್ತದೇ ಇದ್ದೀತೆ ?

ಧರ್ಮಜ್ಜಿಗೆ ಈ ಸುದ್ದಿ ಕೇಳಿ ಅಂಥಾ ದುಃಖದಲ್ಲೂ ಎಂಥಾ ಸಿಟ್ಟು ಬಂತು... ''ಹಾಂಟ್ಯಾಗೋಳ್ರಾ, ಯಾಕ ಜಗಳಾ ತಗೂತೀರಿ. ದೋಸ್ತಿಯೊಳಗ ಜಗಳಾಡಿ ಸತ್ತ ಹೋಗೇತಿ. ಅಂವೇನ ಬೇಕಂತ್ಲ ಸಾಹಿ ಹೊಡದಾನ ಯಾನ... ಜಾತಿ ಜಾತಿ ಧರ್ಮಾಧರ್ಮಕ ಜಗಳಾ ಹಚ್ಚಿ ಬೆಂಕಿ ಹಚ್ಚಾಕ ಯಾನಗೇತಿ. ...ಯಾರೂ ಹೊಡದಾಡಬ್ಯಾಡರಿ ...ಜೀಂವ ಹೋಗಿದ್ದು ನನ್ನ ಮಗಂದ... ತಗದಾಂವ ಅವನ ದೋಸ್ತ, ಸುಮಸುಮ್ಮಕ ಮಂದಿ ಮನೀಗಿ ಬಣವಿಗಿ ಬೆಂಕಿ ಹಾಕಿದರ ಯಾತಕ ಬತ್ತು...'' ಎಂದು ಒದರುತ್ತ ಓಣೆಲ್ಲ ಸುತ್ತು ಹಾಕಿದಳು. ಮೋಡವೇ ಇಲ್ಲದ ಮುಗಿಲಿಂದ ಹೂ ಮಳೆ ಸುರಿದಂತಾಯಿತು. ಯಾರು ಕೇಳಬೇಕು ? ಸುದ್ದಿ ತಿಳಿದ ಪೊಲೀಸರು ವ್ಯಾನನಲ್ಲಿ ಬಂದು ಲಾಠಿ ಬೀಸಿದರು. ಹುಚ್ಚನಾಯಿಗೆ ಹೊಡಧಾಂಗ ಸಿಕ್ಕಸಿಕ್ಕವರಿಗೆಲ್ಲ ಹುಚ್ಚೆದ್ದು ಬಾರಿಸಿದ್ರು. ಯಾರ ತೆಲಿ ಒಡೀತು... ಯಾರ ಎಲುಬು ಯಾರದೋ... ಕೈಕಾಲು... ಎದಿಗೆ ಬಡದು ದವಾಖಾನೆಗೆ ಸೇರಿಸಿದ್ರಂತೆ... ಎಂದೆಲ್ಲಾ ಸುದ್ದಿಗಳಾದವು. ರಭಸದಿಂದ ಮೇಲೆ ಮೇಲೆ ನುಗ್ಗಿ ಬರುತ್ತಿರುವ ಕೋಪೋದ್ರೇಕಿತ ಪೊಲೀಸರನ್ನು ಎದುರಿಸುವುದಾದರೂ ಹೇಗೆ ? ಸಂದಿಗೊಂದಿ, ಸಿಕ್ಕಸಿಕ್ಕ ಹಾದಿಗಳಿಂದ ತಪ್ಪಿಸಿಕೊಂಡು ಓಡೋಡಿ ಹೋಗುತ್ತಿದ್ದರು, ಹುಲಿ ಬೆನ್ನಟ್ಟಿದ ಹಾಗೆ. ಪೊಲೀಸ್ ಜೀಪುಗಳ ಭರಭರಾಟ. ಸೀಟಿಗಳ ಊದುವಿಕೆ. ಮೈಕ ಹಚ್ಚಿ ಎಚ್ಚರಿಕೆ ಕೊಡುತ್ತಿದ್ದರು, ''ನಾಗರಿಕರೆ... ಶಾಂತಿ... ಕಾಪಾಡಿ ...ವದಂತಿ ನಂಬಬೇಡಿ... ಯಾವುದೂ ಏನೂ ಆಗಿಲ್ಲ, ಗಲಾಟೆ ದಂಗೆ ಹಾಕಬಾರದು. ಗಾಂಧಿನಗರದಾಗ ೧೪೪ ಕಲಂ ಜಾರಿ ಆಗೇದ... ಗುಂಪು ಕೂಡಬಾರದು... ಮನೀ ಬಿಟ್ಟು ಹೊರಗ ಬರಬಾರದು... ಶಾಂತತಾ ಕಾಪಾಡಿಕೋರಿ.'' ಜೀಪು ವ್ಯಾನುಗಳಲ್ಲಿ ಬಂದೂಕುಧಾರಿಗಳು ಅತ್ತಿಂದಿತ್ತ ಸುತ್ತು ಹೊಡೆದೇ ಹೊಡೆಯುತ್ತಿದ್ದರು.

ಊರೆಲ್ಲ ಗಂಪ್... ಎಂದು ರಾಣಾ ಹೊಡೀತಿತ್ತು. ಸರವತ್ತ ಆಧಾಂಗ ಆಗಿ ನಾಯಿಗೋಳ ಬಗಳಾಟ ಮಾತ್ರ ಕೇಳತಿತ್ತು. ಗಾಂಧೀನಗರದಾಗ ದೀಪಾವಳಿ ಸದ್ದು ಸಡಗರ ಇದ್ದಿಲ್ಲ. ಏನಿದ್ದರೂ ಲಾಠಿ ಬೂಟುಗಳ ಸಪ್ಪಳ.

✶ ✶ ✶

ಧರ್ಮಜ್ಜಿಯ ಸಂಕಟ, ತಳಮಳಕ್ಕೆ ಎಣೆಯೇ ಯಿಲ್ಲ, ಒಂಟಿ ಜೀವಕ್ಕೆ ಆಸರೆಯಾಗಿದ್ದ ಮಗ ಗೋಟ್ಯಾ ಅನಾಮತ್ತಾಗಿ ಹೆಣವಾದದ್ದನ್ನು ಸಹಿಸಲಿಕ್ಕಾಗದೇ... ''ನನ ಗೋಟ್ಯಾ... ನನ ಗೋಟ್ಯಾ...'', ಎಂದು ಮುಸುಲುತ್ತಿದ್ದಳು. ಅತ್ತು ಅತ್ತು ಕಣ್ಣೆಲ್ಲ ಒಣಗಿ ಗೂಡಾಗಿವೆ. ದೇಹವೋ ಎಲುವಿನ ಹಂದರ. ತುಂಡು ರೊಟ್ಟಿ ತಿನ್ನುವುದನ್ನು ಬಿಟ್ಟು ನಿರ್ವಿಣ್ಣಳಾಗಿ ಹಲುಬುತ್ತಿದ್ದಳು. ಆಸುಪಾಸಿನವರು ಇವಳ ಸಂಕಟ ನೋಡಲಾಗದೆ ಎಷ್ಟೋ ಸಮಾಧಾನ ಹೇಳಿದ್ದರು. ಗಂಜಿ ಅಂಬಲಿ ಕುಡಿಸಿ ಮಾತಾಡಲು ಶಕ್ತಿ ಬರುವಷ್ಟು ಮಾಡಿದ್ದರು. ಯಾರು ಎಷ್ಟೇ

## ...ನೆನಪಾಗುತದೆ

ಬಣ್ಣ ಬಣ್ಣಗಳ ಧರ್ಮ
ಬಗೆ ಬಗೆಯ ಮತ ಗುಡಿ
ಗೋಪುರ ಚರ್ಚುಗಳಡಿಯ
ಚಿನ್ನ ಚರಂಡಿಯಲಿ
ಹರಿಯುವ
ನಗನಾಣ್ಯಗಳನು
ನೆನೆದಾಗಲೆಲ್ಲಾ
ಗಂಗಾನದಿಯಲಿ ತೇಲುವ
ಅರೆಬೆಂದ ಹೆಣಗಳ
ನೆನಪಾಗುತದೆ.

ಲೆಕ್ಕಕ್ಕೆ ಸಿಗದ
ಕೋಟಿ ಕೋಟಿ
ಆಸ್ತಿಪಾಸ್ತಿ ಆರೋಪಗಳ
ಲೆಕ್ಕಾಚಾರಗಳೆಲ್ಲವೂ
ಕೇವಲ ಒಂದು ಆಣೆಯಲಿ
ಮುಗಿಸಿಬಿಡುವ ಸಂದರ್ಭವನು
ನೆನೆದಾಗಲೆಲ್ಲಾ
ಗಂಗಾನದಿಯಲಿ ತೇಲುವ
ಅರೆಬೆಂದ ಹೆಣಗಳ
ನೆನಪಾಗುತದೆ.

ವಿಜಯಂ
ನಂ. ೧೫/೧೩, ಎರಡನೇ ಕ್ರಾಸ್, ನೆಹರು ನಗರ, ಸಾಗರ - ೫೭೭ ೪೦೧

ಸಮಾಧಾನ ಹೇಳಿದರೂ ಕರುಳಿನ ಸಂಕಟ ಕುದಿ ಕಮ್ಮಿಯಾಗುವುದಿಲ್ಲ. ಮುಪ್ಪಿನ ವಯಸ್ಸೆಂಬುದು ಸಾವಧಾನದ್ದು, ವಿಚಾರಿಸುವಂಥದ್ದು ಮತ್ತು ಸಹಜ ಗಂಭೀರವೂ ಆದದ್ದು, ಆರೋಗ್ಯಪೂರ್ಣವೂ ಆದದ್ದು. ಆದರಿದು ಅವಳ ಮೀರಿತ್ತು. ಇದ್ದೊಬ್ಬ ಮಗನೂ ಇಲ್ಲವಾದದ್ದಕ್ಕೆ, ಬದುಕು ಬಟಾಬಯಲಾದದ್ದಕ್ಕೆ ಹೊಟ್ಟೆಯುರಿ ಸೇಡಿನ ಕಿಚ್ಚಾಗಿತ್ತು. ಆ ರಿಂದ್ಯಾನ ಸುಟ್ಟೇ ಬಿಡುವಷ್ಟು ಜ್ವಾಲೆಗಳು ಉರಿದೇಳುತ್ತಿದ್ದವು.

''ಆ ರಿಂದ್ಯಾಗ ಬಿಡಬಾರದು ಸಾಯಿ ಹೊಡೀಬೇಕು. ಅಂವಾ ಇರಬಾರದು. ಆಗ... ನನ್ನ ಗೋಟ್ಯಾಗ ಸಮಾಧಾನ. ನನಗೂ.''

ಮುದ್ದತಯಿದ್ದ ದಿನಾ ಕೋರ್ಟಿಗೆ ಹಾಜರಾದಳು. ರಿಂದ್ಯಾಗ ಮುಗಸಬೇಕಂತ ಕೈಯಾಗ ಕೋಲ ಹಿಡಿದು ಝೋಲಿ ಹೋಗೂ ಮುದುಕಿ ಆದಳು. ಪೊಲೀಸರ ನಡುವಿನ ರಿಂದ್ಯಾ ಇಕಿನ ನೋಡಿ ಗೋಣ ಬಗ್ಗಿಸಿದ. ನಿಂತು ನೋಡಿದಳು. ಮೈ ಉರೀತು. ಕಣ್ಣಾನ ಕಿಡಿ ಅಂವಗ ಸುಟ್ಟವು. ಬಗ್ಗಿದ ರುಂಡಕ್ಕ ಒಂದ ಇಟ್ರ... ಸಾಕು. ಮಣ್ಣು ಮುಕ್ಕತಿದ್ದ. ಆದ್ರ ಸುತ್ತೂ ಪೊಲೀಸರ ಕ್ವಾಟಿ... ''ಉಳಿದಿಲೇ... ಸೂಳಿಮಗನಾ...'' ಎನ್ನುತ್ತಾ ಲಟಕಿ ಮುರದಳು. ಮನಿ ಹಾದಿ ಹಿಡಿದಳು.

ತಲ್ಯಾಗ ಒಂದೇ ಸವನ ರಿಂದ್ಯಾನ ಹ್ಯಾಂಗ ಹೊಡೀಲಿ... ಗುಂಯ್‌ಗುಡಾಕ ಹತ್ತಿತ್ತು. ''ಹಿಂಗ ಮಾಡಿದ್ರ ಹ್ಯಾಂಗ... ಅಂವಾ ಸಿಗಾಣಿಲ್ಲ. ಜೇಲಿಗೇ ಹಾಕ್ಕಾರು... ಆ ಭಾಡ್ಯಾನ ಅವ್ವಾ ಅಪ್ಪಗ ಸಾಯಹೊಡದು ಭಾಂಚೋದ್ಗ ಬುದ್ಧೀ ಕಲೀಸಿರ ಹ್ಯಾಂಗ... ನನ್ನಿಂದನ ನನ್ನ ಅವ್ವ ಅಪ್ಪಾ ಸತ್ತರೂ ಅಂತ ಸಾಯೂಮಟಾ ಅಳಬೇಕ. ಹಾಂಗ ಮಾಡತೀನಿ... ಹೌದು ಅವ್ರು ಎಲ್ಲಿ ಅದಾರೆಂಬೂದ ಹುಡುಕತೀನಿ.''

ಮರುದಿನ ಅವರನ್ನ ಹುಡುಕಾಕ ಓಣಿ ಓಣಿ ಅಡ್ಡಾಡಿದಳು. ಮೂರ್ನಾಲ್ಕು ದಿನದ ಮ್ಯಾಲೆ ಅವರಿವರನ ಕೇಳಿ ಕೊನೆಗೂ ಪತ್ತಾ ಹಚ್ಚಿದಳು... ''ಇವರನ್ನ ಖಲಾಸ ಮಾಡತೀನಿ...'' ಅಂತ ಹಲ್ಲು ಗಟರಿ ಕೋಲು ಹಿಡಿದು ಹೋದಳು.

''ಎಲ್ಲಿಗಿ ಧರ್ಮಜ್ಜೀ... ಯಕಾಡಿ ಹೊಂಟೀ...'' ಎಂದು ಯಾರೋ ಕೇಳಿದ್ದಕ್ಕೆ ಸಿಟ್ಟು ಬಂದು... ''ಯಾನೋ ದಗದಾ ಇಟಗೊಂಡ ಹೊಂಟಿದ್ನಿ...'' ''ಎಲ್ಲಿ ಹೋಕ್ಕಿ...'' ಕೇಳಿ ಬಿಟ್ಯ ''...ಸುಡಗಾಡಕ ಹೊಕ್ಕನ ಬರ್‍ತಿಯಾನ...'' ಇವಳು ಹೇಳುವಷ್ಟರಲ್ಲಿ ಕೇಳಿದವ ಮುಂದಿನ ಓಣಿ ದಾಟಿದ್ದ. ಧರ್ಮಜ್ಜಿ ಗಿಡದ ಮರೆಯಲ್ಲಿ ಅಡಗಿ ನಿಂತು ಅವರ ಕಲಾಪ ನೋಡುತ್ತಿದ್ದಳು... ಸೊಟ್ಟಗೆ ನಡೆಯುವ ಮುದುಕ, ಕಣ್ಣು ಕಾಣದ ಮುದುಕಿ. ಕೋತಂಬರಿ ಮೆಂತೆಪಲ್ಲೆ ಮಾರುತ್ತಿದ್ದರು. ಇದು ಮಾರಿದರೇನೇ ಒಂತುಂಡು ರೊಟ್ಟಿ. ಆ ಕಣ್ಣು ಕಾಣದ ಮುದುಕಿ ಯಾರಿಗೋ ಜುಲುಮೆ ಮಾಡುತ್ತಿತ್ತು. ಇವರನ್ನ ನೋಡಿದ ಧರ್ಮಜ್ಜಿ ಜರ್‍ರನೆ ಜರಿದು ತಲೆಮೇಲೆ ಕೈಯಿಟ್ಟು ಕುಳಿತು, ''ಹೋ... ರಿಂದ್ಯಾನ ಅವ್ವ ಅಪ್ಪಂದಿರ, ನಿಮ್ಮನ್ನ ಕೊಂದ ನಾ ಯಾನ ಮಾಡಲಿ... ಈಗಾಳೇ ಬದುಕಿ ಸತ್ತಂಗ ಅದೀರಿ. ನಿಮ್ಮನ್ನ ಕೊಲ್ಯಾ... ಛೀ... ಬ್ಯಾಡ... ಬ್ಯಾಡ... ಬದುಕ್ಕೊಳ್ಳಿ... ನನ್ನೆಸರಿಂದ ಬದುಕ್ರೋ...'' ಎಂದು ಅಕ್ಕರಿಸಿದಳು.

ಹದಿನೈದು ಇಪ್ಪತ್ತು ದಿನಗಳಾಗಿರಬಹುದು. ಒಂದು ಮಧ್ಯಾನ್ನ ಕುಂಟಗೋತ ಮುದುಕ ಮುದಕಿ ಕೈಹಿಡಕೊಂಡ ಧರ್ಮಜ್ಜಿ ಮನಿ ಮುಂದ ನಿಂತ್ರು. ಇಂವ ಸೊಟ್ಟ, ಅಕಿ ಕುರಡಿ. ಕಲ್ಲಿನ ಮ್ಯಾಲೆ ಕೂತರು. ಧರ್ಮಜ್ಜಿ ಇವರನ್ನ ಕೆಕ್ಕರಿಸಿ ನೋಡಿ,... ''ಹೆಂತಾ ಮಗನ್ನ ಹಡದೀರಿಪಾ... ಅತ್ತ ದಿನಾ ಹ್ವಾದ ನಿಮಗರ ಆಸರ... ಅಂದ್ರ ಅದೂ ಯಿಲ್ಲ... ಇತ್ತ ನನ್ನ ಮಗನ್ನ ನುಂಗಿ ಹಾಕಿದಾಂವಾ... ಹಿಂಗ ಸಿಟ್ಟ ಬಂದ್ಯೆತಿ... ಯಾನ ಮಾಡೂದು... ಅಂವ ಸಿಕ್ಕಿದ್ರ ಕತೀನ... ಬ್ಯಾರಿ ಆಕ್ಕಿತ್ತು. ಕುಡಸಾಲ್ಯಾ ಉಳದ.''

''ಹೌಂದಬೇ ಧರ್ಮಜ್ಜಿ. ನಮ್ಮ ಮಗ ತೆಪ್ಪ ಮಾಡ್ಯಾನು. ಆ ದ್ಯಾವರೂ ಸೈತ ಅವ್ನ ಕ್ಷಮಿಸಂಗಿಲ್ಲ... ದೊಡ್ಡ ಮನಸ ಮಾಡು... ಹೊಟ್ಯಾಗ ಹಾಕ್ಕೋ... ಅವ್ನ ಕ್ಷಮಿಸಿಬಿಡಬೇ... ಅದ್ನ ಕೇಳಿ ಆರಾಮ ಜೀಂವಾ ಬಿಡತೀವಿ. ಇರದಿದ್ರ ಇದ... ನಮಗ ಕಟೂತಿರತ್ತೈತಿ. ಅದ ಚಿಂತ್ಯಾಗ ನಾವು ಶಿವಶಿವಾ ಅನಬೇಕಾಕ್ಕೈತಿ... ದೊಡ್ಡ ಮನಸ ಮಾಡಿಬಿಡಬೇ...''

''ಹುಂ... ಕ್ಷಮಿಸಬೇಕತ್ತ, ನನ್ನಂಗ ಕಣ್ಣೀರ ಕಪಾಳಕ ಬಂದಿದ್ರ ತಿಳೂತಿತ್ತು. ಹೊಟ್ಯಾನ ಸಂಗಟ ಯಾನ...ತ್ತ ಕ್ಷಮಿಸಾಂವಾ... ಶಾಪಾ ಕೊಡಾಂವ ದ್ಯಾವರು. ನಾವು ನರಮನಸೇರು... ನಮ್ಮ ಹತ್ಯೇಕ ಯಾನ್ಯೆತಿ. ಹ್ವಾದಾಂವ ಹ್ವಾದ. ಹೊಳ್ಳಿ ಬರ್‍ತಾನೇನು... ಇದ್ದಾವರು ಒಂದಾಗಿ ಬಾಳೇವು ಮಾಡಿದರ ವಾನಲಾ... ನಿಮಗೂ ವಯಸಾಗೇತಿ. ಕಣ್ಣರೇ ಕಾಣಂಗಿಲ್ಲ. ನನಗೂ ವಯಸಾಗೇತಿ. ನನಗರೇ ಯಾನ ಹಿಂದ ಮುಂದ ... ಎಲ್ಲಾರೂ ಸೇರೇ ಇದ...

ಮನ್ಯಾಗ ಇರೂಣು. ಆಸರಾಕ್ಕತಿ. ರಿಂದ್ಯಾ... ರಿಂದಣ್ಣ... ನನ್ನ ಮಗಾ... ಅವ ನನ್ನಾಂವ. ಜೇಲಿಂದ ಬಿಡಸ್ತೂನು... ಸಾಲಿ ಕಲಸತೂನು... ದೊಡ್ಡ ಸಾಯೇಬನ್ನ ಮಾಡತೂನು... ಇರಾಮಟಾ ಪಿರೂತಿ ಮಾಡತೀನಿ... ಹ್ವಾದಮ್ಯಾಲೆ ಕೊಳ್ಳಿ ಅವ್ನ ಇಡಲಿ.''

''ಅನಬ್ಯಾಡಬೇ ಧರ್ಮಜ್ಜಿ! ಇನ್ನಾ ಭಾಳ ವರಸ ಬದಕ. ನಮ್ಮ ಉಳದ್ದ ಆಯುಶ್ಯಾನೂ ನಿನಗ ಕೊಡತೀವಿ. ಅಂವ ನಮ್ಮ ರಿಂದ್ಯಾ ಅಲ್ಲ, ನಿನ್ನ ರಿಂದ್ಯಾ. ಲಗ್ನಾ ಮಾಡು ಆಯಿ ಆಗು... ಮಮ್ಮಗನ ತೊಡೀಮ್ಯಾಲೆ ಆಡಸು. ಸೊಂಟದಾಗ ಕುಂಡ್ರಿಸಿಗೊಂಡು ಊರೆಲ್ಲಾ ಸುತ್ತಾಡು...''

ಸಂತೋಷದಿಂದ ಧರ್ಮಜ್ಜಿ ಪಕ... ಪಕ... ನಕ್ಕಿತು. ಆ ನಗು ಬ್ರಹ್ಮಾಂಡವೆಲ್ಲ ನಕ್ಕಂತಿತ್ತು. ದುಃಖದ ಎಳೆಯೂ ಕಾಣಲಿಲ್ಲ. ''ಧರ್ಮಜ್ಜಿ ನೀ... ದೊಡ್ಡ ಗುಣದಾಕಿ. ನಿನ್ನಂಥಾ ನರಮನಶಾಳ್ನ ಕಾಣಾಕಿಲ್ಲ. ಆ ಶ್ರೀರಾಮನ ಅಪ್ಪಗ ಶಾಪ ಆಗಿ ಮಗಾ... ಮಗಾ... ರಾಮಾ... ಅನಕೋತನ ಸತ್ತಂತ. ಆದರ ನೀ... ಬದುಕೋ... ಬದುಕು... ಅಂತ ಜೀವದಾನ ಮಾಡಿದಿ. ನೀ ಮುಗಿಲೆತ್ತರದ ಮುದುಕಿ.''

''ಹಂಗ ಅನಬ್ಯಾಡ್ರಿಪಾ... ಮುಪ್ಪಿನ್ಯಾಗ ಬೇಕಲ್ಲ ಆಧಾರಕ... ಕೋಲ... ಊರುಗೋಲ... ರಿಂದ್ಯಾನ... ನನ್ನ ಕೋಲ.'' ಮುದುಕಿ ಆನಂದದಿಂದ ಗೋಡೆ ಗೋಡೆಗೂ ಕೇಳುವಂತೆ ನಕ್ಕಿತು. ''ಅಂವ್ನ ಜೇಲದಿಂದ ಬಿಡಸ್ತೀನು... ನನ್ನ ಮಗಾ ಅಂತ ಸಾಯೇಬರಿಗಿ ಹೇಳತೀನು... ಅಂವಗ ಬಿಡ್ರಿಪಾ... ಅಂತ ಕಾಲ ಹಿಡೀತನು.''

ಅವಳಿಂದ ಈ ಮನಃಪೂರ್ವಕ ಮಾತು ಕೇಳಿದ ಮುದುಕ ಮುದುಕಿಗೆ ಬೆಳದಿಂಗಳಲ್ಲಿ ಸ್ವಚ್ಛಂದ ಹಾರಾಡಿದಂತಾಗಿತ್ತು.

* * *

ಗಾಂಧಿನಗರ ಶಾಂತವಾಗಿದ್ದರೂ ದೈನಂದಿನ ಚಟುವಟಿಕೆಗಳಿಗೆ ಮಂಕು ಹಿಡಿದು ರಸ್ತೆಗಳೆಲ್ಲ ಭಣಗುಡುತ್ತಿದ್ದವು. ಜನ ಜಂಗುಳಿ ಓಡಾಟ ಹೆಚ್ಚಿದ್ದಲ್ಲಿ ಪೊಲೀಸ ಕಾವಲು ಯಿತ್ತು. ಒಬ್ಬರನ್ನೊಬ್ಬರು ಸಂಶಯದ ಕಣ್ಣುಗಳಿಂದಲೇ ಎದುರಿಸುತ್ತಿದ್ದರು. ವ್ಯಾಪಾರ ವಹಿವಾಟುಗಳೆಲ್ಲ ಅಷ್ಟಕಷ್ಟೆ. ಶಾಲೆ ಬಾಗಿಲು ತೆರೆದಿತ್ತಾದರೂ ಬಿಸಿಯೂಟಕ್ಕೆ ಹುಡುಗರೇ ಯಿಲ್ಲ. ಅದೆಷ್ಟೋ ಗಂಡಸರು ಅಂಜಿ ಊರೇ ಬಿಟ್ಟಿದ್ದರು. ಹೆಂಗಸರಿಗೋ ಡುಗುಡುಗು. ಮೊದಲಿನಂತೆ ಕೊಡುತ್ತಿದ್ದಿಲ್ಲ. ಯಾಕ ಯಕ್ಕ ರೊಟ್ಟಿ ಆತ... ನೀರಿಗಿ ಹೊಂಟ್ಯಾ... ತೂಗಿ ತೂಗಿ ಮಾತಾಡುವಷ್ಟು ಅಂಜಿಕೆ ನೆಟ್ಟಿತ್ತು. ಆದರೆ, ಧರ್ಮಜ್ಜಿ ಇವ್ಯಾವೂ ನೋಡದೆ ಲವಲವಿಕೆಯಿಂದ ಓಡಾಡುತ್ತಿತ್ತು. ಈಗ ಜೋಡಿದಾರರಾಗಿ ಕುಂಟ ಮುದುಕ, ಕುರುಡಿ ಮುದುಕಿ. ಹಿರಿಯನೆಂದು ಕಕುಲಾತಿಯಿಂದ ಯಣ್ಣಾ... ಎನ್ನುತ್ತಿದ್ದಳು. ದೇವರೇ ಹಾಕಿದ ಬಾಂಧವ್ಯ ಈಗ ಮೂವರು. ರಿಂದ್ಯಾ ರಿಂದಣ್ಣಗ ಬಿಡಸಬೇಕು. ಸಾಯೇಬಗ ಬೇಡಕೋಬೇಕು ಎಂದು ಲೆಕ್ಕ ಹಾಕುತ್ತಿದ್ದಳು.

ಸರಸರ ಯಾರೋ ಬಂದ ನಡಿಗೆ ಸದ್ದು. ಮಾತುಗಳೂ ಕೇಳಿ ಬಂದವು. ದೊಡಮನಸೇರು... ಬಂತಂತ. ಮಂದಿ ಕೈಮುಗದ ನಿಂತಿತ್ತು. ''ಧರ್ಮಜ್ಜಿ...'' ಅನ್ನುತ್ತ ಖಾಕಿ ಕೋಟಿನ ಕೆಂಪು ಬಿಲ್ಲೆಯ ಪಟ್ಟೇವಾಲಾ ಒಳಗೆ ಬಂದ. ಗಡಬಡಿಸುತ್ತಿದ್ದ ಅವನು ತಗ್ಗಿದ ಸ್ವರದಿಂದ, ''ಸಾಯೇಬರು ಬಂದ್ರು... ಸಾಯೇಬರು. ಹೊರಗೆ ಬಾ,'' ಅಂದ. ಪೊಲೀಸರು ಕಾವಲಿದ್ದರು. ತಲೆ ಮೇಲಿನ ಸೆರಗು ಸರಿಪಡಿಸಿಕೊಳ್ಳುತ್ತ, ಇದ್ಯಾನ ಬತ್ತಬೇ ಮತ್ತ ಹೊಸಾದು... ಬೆದರುಗಣ್ಣುಗಳಿಂದ ನೋಡುತ್ತಲೇ, ''ಶರಣರಿ ಸಾಯೇಬರ... ರಾಮ ರಾಮ... ಬುದ್ಧಿ ನಮಸಗಾರ್‍ರಿ.'' ಒಮ್ಮೆಲೇ ನಾಕ್ಕೈದು ದೊಡ್ಡ ಜನ ಬಂದು ಬಾಗಲ ಮುಂದ ನಿಂತಾಗ ಮೂವರ ಎದೆ ಡಬಡಬ ಹಾರತೊಡಗಿತು.

''ಧರ್ಮಜ್ಜೀ... ನಾವು ಸರಕಾರದ ತರ್ಫೇ ಬಂದೀವಿ. ನಮ್ಮ ತಹಸೀಲದಾರ ಸಾಹೇಬರು, ಎಂ.ಎಲ್.ಎ. ಸಾಹೇಬರು, ಇವರು ಇನಸ್ಪೆಕ್ಟರ್ ಸಾಹೇಬರು...'' ಎಲ್ಲರನ್ನೂ ಪರಿಚಯಿಸಿದರು. ಆಫೀಸಿನ ಶಿರಸ್ತೆದಾರ್‍ರು.

ಎಲ್ಲರೆದುರು ತಲೆ ಬಗ್ಗಿಸಿ ನಡುಗುತ್ತ ನಿಂತಿದ್ದಳು ಧರ್ಮಜ್ಜಿ... ''ನೋಡಮ್ಮಾ, ನಿನ್ನ ಮಗನ ದುಃಖದಾಗ ನಾವು ಎಲ್ಲಾರೂ ಭಾಗಿ ಅದೇವು. ನಿನ್ನ ದುಃಖ ಕಮ್ಮಿ ಮಾಡಲಿಕ್ಕೆ ಯಾರಿಂದನೂ ಶಕ್ಯವಿಲ್ಲ. ದುಡ್ಯೂ ಮಗಾ ಯಿದ್ದ. ಈಗ ಇಲ್ಲ. ನಿನ್ನ ಕಷ್ಟದಾಗ ನಮ್ಮದು ಸ್ವಲ್ಪ ಸಹಾಯ. ರೊಟ್ಯಾಗ ಉಪ್ಪು ಯಿದ್ದಾಂಗ. ಸರಕಾರ ನಿನಗ ಪರಿಹಾರ ಧನ ಅಂತಾ ಒಂದು ಲಕ್ಷ ರೂಪಾಯಿ ಕೊಟ್ಟದ. ತಗೋ ಈ ಚಕ್ಕು...'' ಕೈಯಲ್ಲಿಟ್ಟರು.

**ರಾಕ್ಷಸ**

ನಮ್ಮಲ್ಲಿ ಅನೇಕ
ರಾಕ್ಷಸ ಶಕ್ತಿಗಳಿವೆ ;
ಅವುಗಳಲ್ಲಿ
ವರ್ಣವ್ಯವಸ್ಥೆ
ಬ್ರಹ್ಮರಾಕ್ಷಸ !

ಸಿ.ಪಿ.ಕೆ.

ಅಳು ಒತ್ತರಿಸಿ ಬಂದು ಬಾಯಿಗೆ ಸೆರಗು ಒತ್ತಿದಳು. ಬಿಸಿಯುಸಿರಿನೊಂದಿಗೆ ದುಃಖ ಉಮ್ಮಳಿಸಿತು.

''... ಸಮಾಧಾನ ಮಾಡಕೋಬೇ. ಜನರಿಗೇನೇ ನೀ ಧೈರ್ಯ ಹೇಳಿದಾಕಿ. ಮನ್ನೆ ಗದ್ದಲ ನಡದಾಗ ಎಲ್ಲಾರಗೂ ಬೈದು ಜಗಳಾಡ ಬ್ಯಾಡ್ರಿಪಾ, ಇದೇನ ದ್ವೇಸದ್ದ ಅಲ್ಲ... ಅಂತ ಕೈ ಮುಗದು ಬುದ್ಧಿ ಹೇಳಿದೆಂತ ಪೊಲೀಸರು ಸುದ್ದಿ ಮುಟ್ಟಿಸಿ ನಿನ್ನ ಭಾಳ ಹೊಗಳ್ಯಾರು. ನಿನ್ನಂಥಾಕಿ ಭಾಳೇ ಮಂದಿ ಈ ಸಮಾಜಕ ಬೇಕು. ನಿನಗೆ ಗೌರವದ ವಂದನೆ.''

ಇದನ್ನು ನೋಡಲು ಮಂದಿ ಅನ್ನೂ ಮಂದಿ ಸುತ್ತೆಲ್ಲಾ ಮಾಳಿಗಿ ಕುಂಬಿ, ಬೈಲು, ಅಂಗಳಾ ಎಲ್ಲೆಲ್ಲೂ ತುಂಬಿತ್ತು.

ಫೋಟೋಗಳು ಕ್ಲಿಕ್‌ಗೊಂಡವು. ಧರ್ಮಜ್ಜಿ ಕೈಮುಕ್ಕೊಂಡಿದ್ದಳು. ಸರಕಾರದವರು ಕೊಟ್ಟ ಚೆಕ್ಕನ್ನು ಕೈಯಲ್ಲಿ ಹಿಡಿದು ಹೊರಳಾಡಿಸಿ ನೋಡಿದಳು. ಅವಳಿಗೇನು ತಿಳೀಬೇಕು! ಕಣ್ಣಿಗೊತ್ತಿಕೊಂಡಳು.

''ಇದರಾಗ ಒಂದು ಲಕ್ಷ ರೂಪಾಯಿ ಐತಿಬೇ...'' ಶಿರಸ್ತೇದಾರರು ಮತ್ತೊಮ್ಮೆ ಖಚಿತಪಡಿಸಿದರು. ಹೊರಡಲು ಸಿದ್ಧರಾಗಿದ್ದನ್ನು ನೋಡಿದ ಧರ್ಮಜ್ಜಿ ಕಣ್ಣೊರಿಸಿಕೊಂಡು ಕೈಮುಗಿಯುತ್ತ ...''ಸಾಹೇಬರ, ಈ ರೊಕ್ಕಾ ನನಗ ನನ್ನ ಗೋಟ್ಯಾನ ನೆಪ್ಪಿಗೆ ಕೊಟ್ಟಿ ಯಾನ ಹೇಳೂದು ತಿಳಿಯಾಣಿಲ್ಲ. ನಂದ ವಂದ ಮಾತ ನಡಸ್ರಿ ಅಂತಾ ಬೇಡಕೋತಿನ್ರಿ. ನಾವು ದುಡಕೊಂಡ ತಿನೂ ಜನ. ಹ್ಯಾಂಗೋ ಬಂದದ್ದು ನಮ್ಮದಲ್ಲ. ಅದು ನಮಗ ಬ್ಯಾಡಾ. ನನಗ ಕೊಟ್ಟ ಈ ರಕಮ ನಮ್ಮ ಗಾಂಧಿನಗರದ ಸಾಲಿಗೆ ಬಳಸ್ರಿ. ನನಗ ಅದರಾಗ ಯಾನೂ ತಿಳ್ಯಾಕಿಲ್ಲ. ಬಡೂರು ಮಕ್ಕಳೂ ಸಾಲೀ ಕಲೀಬೇಕು. ಅಂಥಾದಕ್ಕ ಇದರ ಉಪಯೋಗ ಬೀಳಬೇಕ. ಹಂಗ ಮಾಡ್ರಿ. ತಗೋರಿ ಇದನ್ನ. ಅಲ್ಲದ ನನ್ನ ಮಗಾ ರಿಂದ್ಯಾ ಜೇಲಿನ್ಯಾಗ ಅದಾನು. ಅಂವಗ ಬಿಡಿಸಿ ನನ್ನ ಹಂತೇಕ ಕಳಸ್ರಿ. ಭಾಳೇ ಉಪಕಾರ ಮಾಡಿಧಾಂಗ ಆಕ್ಕತಿ. ನಮ್ಮ ಮೂರೂ ಮಂದಿ ಮುದುಕ್ರಿಗೆ ಅವನ ಕೈಯಾನ ಕೋಲ ಊರುಗೋಲ. ಅಷ್ಟ ಮಾಡಿ ಪುಣ್ಯ ಕಟಗೋರಿ ಸಾಯೇಬ್ರ. ನಿಮ್ಮ ಕಾಲಿಗೆ ಬೀಳತೀವ್ರಿ.''

ಬಂದ ಅಧಿಕಾರಿಗಳಿಗೆ ಏನು ಮಾತಾಡಬೇಕೆಂದು ತೋಚದೆ ಮೌನಕ್ಕೆ ಶರಣಾಗಿದ್ದರು. ''ಎಂಥ ದೊಡ್ಡಗುಣ! ಬಡತನದಲ್ಲೂ ಮಹಾತ್ಯಾಗ. ಇದೇ ನಮ್ಮ ನೆಲದ ಗುಣ. ಹ್ಯಾಟ್ಸ್ ಆಫ್ ಧರ್ಮಜ್ಜಿ. ಆಯಿತಮ್ಮ, ನಿನ್ನ ರಿಂದ್ಯಾನ ಹೊರಗ ಬಿಡಿಸಿ ನಿನ್ನ ಉಡ್ಯಾಗ ಹಾಕತೀವಿ.''

ಇದನ್ನ ಕೇಳಿದ ಧರ್ಮಜ್ಜಿ, ಮುದಕ, ಮುದುಕಿ ಸಂತೋಷದಿಂದ ಶರಣರಿ... ಶರಣರಿ... ಅನ್ನುತ್ತ ಕಣ್ಣೊರೆಸಿಕೊಂಡರು.

**ಹಣಮಂತ ತಾಸಗಾಂವಕರ**
'ಸುಧನ್ವ', ಸೆಕ್ಟರ್ ನಂ. ೧೮, ಫ್ಲಾಟ ನಂ. ೨೫, ನವನಗರ
ಬಾಗಲಕೋಟ - ೫೮೭ ೧೦೩

# ಅಂದಿನ ರಾಮ - ಇಂದಿನ ರಾಮ

**ಗೊ**ತ್ತಿರುವುದು ನನಗೆ
ಪಂಚೆಯ ಶ್ರೀರಾಮ
ಹುಟ್ಟಿರುವುದು ಈಗ
ಚೆಡ್ಡಿಯ ಶ್ರೀರಾಮ ॥

ರಾಮ ಹುಟ್ಟಿದ ಅಂದು
ತಾಯಿಯ ಗರ್ಭದಲಿ
ಅವನೆ ಹುಟ್ಟಿದ ಇಂದು
ಮಸೀದಿ ಮೂಲೆಯಲಿ

ಅಂದು ರಾಮನ ಜನನ
ಹಗಲು ಹೊತ್ತಿನಲ್ಲಿ
ಇಂದು ಅವನ ಜನನ
ತೂತು ಕತ್ತಲಲ್ಲಿ

ಅಂದು ಬಿಲ್ಲು ಬಾಣ
ಅವನ ಹೆಗಲಿನಲ್ಲಿ
ಇಂದು ಬಿದಿರು ದಂಡ
ಅದೇ ಬಗಲಿನಲ್ಲಿ

ಅಂದು ರಾಮನ ಹಣೆಗೆ
ಎರಡೊ ಮೂರೊ ನಾಮ
ಇಂದು ನಮ್ಮ ಹಣೆಗೆ
ರಕ್ತದ ಒಂದೇ ನಾಮ

ಅಂದು ಹೊರಟ ರಾಮ
ವನವಾಸದ ಕಡೆಗೆ
ಇಂದು ನಮ್ಮ ರಾಮ
ನವದೆಹಲಿಯ ಕಡೆಗೆ

ಅಂದು ರಾಮನಿಗೆ ಸಾಕು
ಕಾಡಲಿ ಪರ್ಣಕುಟೀರ
ಇಂದು ಬೇಕೇ ಬೇಕು
ಕೋಟಿ ಇಟ್ಟಿಗೆ ಮಂದಿರ

ಅಂದು ರಾಮನಿಗೆ ಪ್ರಿಯವು
ಎಲ್ಲ ಜೀವ ಜಂತು




ಇಂದು ಯಾರೂ ಬೇಡ । ಇರಲಿ
ದಲಿತರಂತೂ ಇಂತು

ನಿನ್ನೆ ಶಂಭೂಕ ಮರ್ಡರ್
ತಪ್ಪಿತು ಕುವೆಂಪು ಇಂದ
ಇಂದು ನಾವುಗಳೆ ಮರ್ಡರ್
ತಪ್ಪುವುದು ಯಾರಿಂದ ?

ಅಂದು ಹರಡಿದ ರಾಮ
ಹೆಚ್ಚೂ ಕಡಿಮೆ ಪ್ರೀತಿ
ಇಂದು ಹರಡುವನು ಯಾಕೆ
ಎಂದಿಲ್ಲದ ಭೀತಿ ?

ಇರಲು ಎದುರಿನಲ್ಲಿ
ಭೀಮನ ಸಂವಿಧಾನ

ಮತ್ತೆ ಯಾಕೆ ಬೇಕು
ರಾಮನ ಸಂವಿಧಾನ ?

ಇರಲಿ ರಾಮ ಅಲ್ಲಿ
ಜನರ ತಂಟೆ ಯಾಕೆ
ಸುಮ್ಮನಿರದೆ ಹುಳುವ
ಬಿಟ್ಟುಕೊಳ್ಳುವುದ್ಯಾಕೆ ?

**ಕಾ. ವೆಂ. ಶ್ರೀನಿವಾಸಮೂರ್ತಿ**
ಸಹ ಪ್ರಾಧ್ಯಾಪಕ, ಸ್ನಾತಕೋತ್ತರ ಕೇಂದ್ರ, ಬೆಂಗಳೂರು ವಿಶ್ವವಿದ್ಯಾಲಯ
ಕೋಲಾರ - ೫೬೩ ೧೦೧

ಸಾಮಾನ್ಯರ ದರ್ಶನ –

# ಅಪರೂಪದ ಯುವ ರೈತ



ರಾಮನಾಥ ಮೋಳೆ ಗ್ರಾಮದ ನಾಗರಾಜು ಹೈಸ್ಕೂಲು ಶಿಕ್ಷಣ ಮುಗಿಸಿರುವ ಯುವಕ. ಆದರೆ ತಿಂಗಳ ಸಂಬಳ ದೊರೆಯುವ ಯಾವುದಾದರೂ ನೌಕರಿ ಅರಸುತ್ತ ನಗರಗಳ ಕಡೆಗೆ ಹೋಗದೆ ಹಳ್ಳಿಯಲ್ಲೇ ಉಳಿದ ಮಣ್ಣಿನ ಮಗ.

ತಂದೆಯ ಹೆಸರು 'ಭೂಮಿ' ಸಿದ್ಧಯ್ಯ. ಪ್ರಾಯಶಃ ಈ ಕಾರಣದಿಂದ ನಾಗರಾಜನಿಗೆ ಭೂಮಿಯ ಮೇಲಿನ ಸೆಳೆತ ಹೆಚ್ಚು. ಬದುಕುವುದಾದರೆ ಭೂಮಿಯನ್ನೇ ನಂಬಿ ಬದುಕಬೇಕೆಂಬ ಹಟ. ಸ್ವಂತ ದುಡಿಮೆಯೇ ಬಂಡವಾಳ.

ಹಾಗೆಂದು ಊರಿನಲ್ಲಿ ಅವರಿಗೆ ಎಕರೆಗಟ್ಟಲೆ ಹೊಲ ಗದ್ದೆಗಳಿಲ್ಲ. ಇರುವ ಒಂದು ಎಕರೆಯಲ್ಲಿ ಕಬ್ಬು ಬೆಳೆಸಿದ್ದಾರೆ. ತಂದೆಯ ನಿಧನದ ನಂತರ ಮನೆಯ ಜವಾಬ್ದಾರಿ ಈತನ ಹೆಗಲ ಮೇಲೆ. ಎಂಟು ತಿಂಗಳಿಗೆ ಕಟಾವಾಗಬೇಕಾದ ಕಬ್ಬು ಮಂಡ್ಯದ ಸಕ್ಕರೆ ಕಾರ್ಖಾನೆಯ ಮರ್ಜಿಯಂತೆ ಮತ್ತೆ ನಾಲ್ಕು ತಿಂಗಳು ಕಾಯ ಬೇಕಾಗಬಹುದು. ಕೈಗೆ ಹಣ ಬರಬೇಕಾದರೆ ಮತ್ತೆ ಎರಡು ತಿಂಗಳಾಗಬಹುದು.

ಆದರೆ ನಾಗರಾಜು ಕೈಚೆಲ್ಲಿ ಕುಳಿತುಬಿಡುವ ವ್ಯಕ್ತಿಯಲ್ಲ. ಊರಿನಲ್ಲಿ ವ್ಯವಸಾಯ ಮಾಡುವವರಿಲ್ಲದೆ ಖಾಲಿ ಬಿದ್ದಿರುವ ಜಮೀನು ಅರಸುತ್ತಿದ್ದಾಗ ಈ ಅವಕಾಶ ಸಿಕ್ಕಿತು. ನಾಗರಾಜು ಈಗ ವ್ಯವಸಾಯ ಮಾಡುತ್ತಿರುವ ಜಮೀನು ವರ್ಷಕ್ಕೆ ಒಂದು ಬೆಳೆ ಬೆಳೆಯುತ್ತಿದ್ದ, ಮಳೆಯ ನೀರನ್ನು ಆಧರಿಸಿದ್ದ ಬಯಲು. ರಾಗಿ ಕೊಯ್ಲಿನ ನಂತರ ಶಾಲೆಯ ಮಕ್ಕಳು ಅದನ್ನು ಕ್ರಿಕೆಟ್ ಮೈದಾನವಾಗಿ ಬಳಸುತ್ತಿದ್ದರು. ಸುಮಾರು ಎರಡು ಎಕರೆಯಷ್ಟಿರುವ ಜಮೀನನ್ನು ನಾಗರಾಜು ಗುತ್ತಿಗೆಗೆ ತೆಗೆದುಕೊಂಡು ಅಲ್ಲಿ 'ಸೋಲಾರ್' ಎಂಬ ಹೈಬ್ರಿಡ್ ಹುರುಳಿ ಗಿಡ ಮತ್ತು 'ಮಾಲಿನಿ' ಹೆಸರಿನ ಸೌತೆ ಬೆಳೆಸಿದ್ದಾರೆ. ಕೊನೆಯ ಸಾಲಿನಲ್ಲಿ ಮಾರುದ್ದ ಹೀರೆಕಾಯಿ ಗಿಡಗಳು. ಒಣ ಬಯಲು ಹಸಿರು ಬನವಾಗಿರುವುದನ್ನು ಕಂಡಾಗ ಇಂಥ ಸಾಹಸಕ್ಕೆ ಕೈ ಹಾಕಿರುವ ವ್ಯಕ್ತಿ ಯಾರಿರಬಹುದು ಎಂದು ಕುತೂಹಲವಾಯಿತು. ಹೊಸ ವಿಚಾರದ, ಭೂಮಿಯಲ್ಲಿ ದುಡಿಮೆ ಮಾಡಿ ಬದುಕಲು ಸಾಧ್ಯ ಎಂಬ ಅರಿವಿರುವ ನಾಗರಾಜ ಇನ್ನೂ ಅವಿವಾಹಿತ ಯುವಕ ಎಂದು ತಿಳಿದಾಗ ಆಶ್ಚರ್ಯವೂ ಆಯಿತು.

ಹಳ್ಳಿಗಳಲ್ಲಿ ಹಬ್ಬಿರುವ 'ಸಬ್ಸಿಡಿ' ಎಂಬ ಸಾಂಕ್ರಾಮಿಕ ವ್ಯಾಧಿಯನ್ನು ಸರಳವಾಗಿ ಪತ್ತೆ ಹಚ್ಚಬಹುದು ! ಕೆರೆಯಲ್ಲಿ ಈಜಾಡುವ ಪಕ್ಷಿಗಳ ಫೋಟೋ ತೆಗೆಯುವುದನ್ನು ನೋಡಿದ ಕೆಲವು ಅಮಾಯಕ ಹಳ್ಳಿಗರು ಇದು ಸಹ ಸರಕಾರದಿಂದ ಸಬ್ಸಿಡಿ ಹೊಡೆಯುವ ಉಪಾಯ ಎಂದೇ ತರ್ಕಿಸುವವರು. ಇಲ್ಲದಿದ್ದರೆ ಪ್ರತಿಬಾರಿ ಹಳ್ಳಿಗೆ ಬಂದಾಗಲೂ ಹಕ್ಕಿಗಳ ಬೆನ್ನು ಹತ್ತುವ ಹುಚ್ಚು ಯಾಕೆ ಎಂಬ ತರ್ಕ ಅವರದು.



ನಾಗರಾಜನ ಸಾಹಸವನ್ನು ಮೆಚ್ಚಿದ ನನಗೂ ಒಂದು ಕ್ಷಣ ಆ ಚಪಲ ತಟ್ಟಿತು, ಈತ ಸರಕಾರದಿಂದ ಸಹಾಯಧನ ಪಡೆದಿರಬಹುದೆ ಎಂದು. ಆದರೆ ನಾಗರಾಜನ ಮಣ್ಣಿನ ಮೇಲಿನ ನಂಬಿಕೆ ಮತ್ತು ದುಡಿದೇ ಬದುಕಬೇಕೆಂಬ ಹಟವೇ ನಿಜವಾದ ಸಬ್ಸಿಡಿ ಎಂದು ತಿಳಿದು ಸಂತೋಷವಾಯಿತು.

ಭೂಮಿಯ ಒಡೆಯ ಒಂದು ಬೋರ್‌ವೆಲ್ ಹಾಕಿಸಿಕೊಟ್ಟಿದ್ದಾರೆ. ಭೂಮಿಯಲ್ಲಿ ಸಮೃದ್ಧಿ ನೀರಿರುವ ಸ್ಥಳ ಅದು. ಭೂಮಿ ಒಡೆಯರಿಗೆ ವರ್ಷಕ್ಕೆ 30 ಸಾವಿರ ಗುತ್ತಿಗೆ ಹಣ ನೀಡಬೇಕು. 'ಸೋಲಾರ್' ನಾಲ್ಕೈದು ಅಡಿಗಳಷ್ಟು ಎತ್ತರಕ್ಕೆ ಬೆಳೆಯುವ ಗಿಡ. ಪ್ರತಿಯೊಂದು ಗಿಡವೂ ಬೆಳೆದು ನಿಲ್ಲಲು ಸಹಾಯಕವಾಗುವಂತೆ ಸಾಲುಗಳಿಗೆ ಅಡ್ಡಲಾಗಿ ಆಸರೆ ತಂತಿ ಅಥವಾ ಪ್ಲಾಸ್ಟಿಕ್ ದಾರಗಳನ್ನು ಬಳಸಲಾಗಿದೆ. ಗಿಡಗಳ ಅವಧಿ ಮುಗಿಯುವವರೆಗೂ ಅವು ಭೂಮಿಗೆ ಬಾಗದಂತೆ ಭದ್ರವಾದ ಆಸರೆಕೊಟ್ಟು ನೋಡಿಕೊಳ್ಳಬೇಕಾದ್ದು ಬಹಳ ಮುಖ್ಯ. ಪ್ರತಿದಿನ ಸಾಲುಗಳಿಗೆ ನೀರು ಹಾಯಿಸಲು ನಾಗರಾಜು ಜೊತೆಗೆ ಇಬ್ಬರು ಗಂಡಾಳುಗಳು ಕೆಲಸ ಮಾಡುತ್ತಾರೆ. ಇತರ ಹುರುಳಿ ತಳಿಗಳಂತೆ ಮೂರು ನಾಲ್ಕು ಬಾರಿ ಕಾಯಿ ಬಿಡಿಸಿದನಂತರ ಗಿಡಗಳು ಒಣಗಿಹೋಗುವುದಿಲ್ಲ. ಸುಮಾರು ಒಂದು ವರ್ಷದವರೆಗೂ ಫಸಲು ಪಡೆಯಬಹುದು. ಕೆಲವೊಮ್ಮೆ ಪ್ರತಿದಿನ, ಎರಡು-ಮೂರು ದಿನಗಳಿಗೊಮ್ಮೆ ಕಾಯಿ ಬಿಡಿಸಬಹುದು. ಕಾಯಿ ಬಿಡಿಸುವಾಗ ಸುಮಾರು ಹತ್ತು ಮಂದಿ ಹೆಣ್ಣಾಳುಗಳ ಸಹಾಯ ಬೇಕಾಗುತ್ತದೆ. ಈಗಾಗಲೇ ಸುಮಾರು ಐವತ್ತು ಸಾವಿರ ರೂಪಾಯಿ ವೆಚ್ಚವಾಗಿದೆ. ಮೊದಲ ಫಸಲಿನ 60 ಕೆ.ಜಿ. ಹುರುಳಿಕಾಯಿಯನ್ನು ಮಂಡ್ಯದಲ್ಲಿ ಮಾರಾಟ ಮಾಡಿದ್ದಾಗಿದೆ.

'ಮಾಲಿನಿ' ಸೌತೆ ಸುಮಾರು ಗೇಣುದ್ದದ ಸ್ವಲ್ಪ ಮುಳ್ಳಿರುವ ಕಾಯಿ. ಸ್ವಲ್ಪ ಕಹಿ ಎನ್ನಿಸುವ ಅದನ್ನು ಔಷಧಿ ತಯಾರಿಕೆಯಲ್ಲಿ ಬಳಸಲಾಗುತ್ತದೆಯಂತೆ. ಔಷಧಿಯಾಗಿ ಅದರ ಉಪಯೋಗ ಹೇಗೆಂದು ತಿಳಿದುಕೊಳ್ಳಲು ನಡೆಸಿದ ಪ್ರಯತ್ನ ಫಲ ನೀಡಲಿಲ್ಲ. ಬೀಜ ಸರಬರಾಜು ಮಾಡಿದವರಿಗೂ ಅದರ ಬಗ್ಗೆ ಹೆಚ್ಚು ತಿಳಿದಿರಲಿಲ್ಲ. ಎರಡು ಬೆಳೆಗಳ ಪೈಕಿ ಒಂದರ ಇಳುವರಿ ಕಡಿಮೆಯಾದಾಗ ಮತ್ತೊಂದರ ಇಳುವರಿ ಹೆಚ್ಚಿ ವೆಚ್ಚ ಸರಿತೂಗಿಸಲು ಸಹಾಯಕವಾಗುತ್ತದೆ ಎಂಬುದು ನಾಗರಾಜರ ಅಂದಾಜು.

ಹುರುಳಿ ಮತ್ತು ಸೌತೆ ಬಿಡಿಸಿದ ಕೂಡಲೆ ಮಂಡ್ಯದ ಮಾರುಕಟ್ಟೆಗೆ ಸಾಗಿಸುವ ಕೆಲಸ ಸಹ ನಾಗರಾಜರದೇ. ದಳ್ಳಾಳಿಗಳ ಕಿರಿಕಿರಿ ಇದ್ದರೂ, ಆಳುಗಳಿಗೆ ನೀಡುವ ಕೂಲಿ ಮತ್ತು ಇತರ ವೆಚ್ಚ ಕಳೆದು, ಗುತ್ತಿಗೆ ಹಣ ನೀಡಿದ ನಂತರ ವರ್ಷಕ್ಕೆ ಐವತ್ತರಿಂದ ಎಪ್ಪತ್ತು ಸಾವಿರ ಸಂಪಾದಿಸಲೇಬೇಕು ಎಂಬುದು ಗುರಿ.

ಬೀಜ ಮಾರಾಟಗಾರರ ಸಲಹೆಯಂತೆ ಈವರೆಗೆ ರಾಸಾಯನಿಕಗೊಬ್ಬರ ಮತ್ತು ಕೀಟನಾಶಕಗಳನ್ನು ಮಾತ್ರ ಬಳಸುತ್ತಿದ್ದಾರೆ.

ಒಂದು ಸಾಲು ಹುರುಳಿ ಮತ್ತು ಒಂದು ಸಾಲು ಸೌತೆ ಗಿಡಗಳಿಗೆ ಯಾಕೆ ಕೊಟ್ಟಿಗೆ ಗೊಬ್ಬರ ಪ್ರಯೋಗಿಸಿ ನೋಡಬಾರದು ಎಂಬುದು ನನ್ನ ಸಲಹೆ. ಒಂದು ಬಗೆಯ ಪುಸಲಾಯಿಕೆ ಎಂದರೂ ಸರಿ. ನಾನು ಮತ್ತೊಮ್ಮೆ ಹಳ್ಳಿಗೆ ಭೇಟಿ ನೀಡುವ ವೇಳೆಗೆ ಕೊಟ್ಟಿಗೆ ಗೊಬ್ಬರದ ಪ್ರಯೋಗ ಮಾಡುವ ಭರವಸೆ ನೀಡಿದ್ದಾರೆ.

ಚಿತ್ರ ಲೇಖನ: **ಕೆ. ಪಿ ಸ್ವಾಮಿ**
ನಂ. ೧೬೭, ೧೦ನೇ ಮುಖ್ಯರಸ್ತೆ, ೩ನೇ ಹಂತ, ಪೀಣ್ಯ ಕೈಗಾರಿಕಾ ಪ್ರದೇಶ, ಬೆಂಗಳೂರು - ೫೬೦ ೦೫೮



ಲೇಖಕರು : **ರಂಗನಾಥ ಕಂಟನಕುಂಟೆ**
ಪುಟಗಳು : xviii + ೧೯೮
ಬೆಲೆ : ರೂ. ೧೫೦
ಪ್ರಕಾಶಕರು : **ಡಾ|| ಎಂ. ಬೈರೇಗೌಡ**
ಮುದ್ದುಶ್ರೀ ಗ್ರಂಥಮಾಲೆ, ಕೆ. ಎಸ್. ಮುದ್ದಪ್ಪ ಸ್ಮಾರಕ ಟ್ರಸ್ಟ್
ಕೃಷ್ಣಾಪುರದೊಡ್ಡಿ ನಂ. ೧೯೯, ೩ನೇ ತಿರುವು, ೮ನೇ ಮುಖ್ಯರಸ್ತೆ
ಹಂಪಿನಗರ, ಬೆಂಗಳೂರು - ೫೬೦ ೧೦೪




# ‘ಜನ ಸಂಸ್ಕೃತಿಯ ವ್ಯಾಕರಣ’

**ಭಾ**ಷೆಯ ಚಿಂತನೆಯಲ್ಲಿ ಗಂಭೀರವಾಗಿ ತೊಡಗಿಕೊಂಡಿರುವ ಯುವಪೀಳಿಗೆಯ ಲೇಖಕರಲ್ಲಿ ರಂಗನಾಥ್ ಕೂಡ ಒಬ್ಬರು. ‘ಜನರ ವ್ಯಾಕರಣ’ ಇಂದಿನ ದಿನಗಳಲ್ಲಿ ಕನ್ನಡ ಭಾಷೆ ಎದುರಿಸುತ್ತಿರುವ ಸವಾಲುಗಳನ್ನು ಮುಂದಿಡುತ್ತದೆ ಎಂದರೆ ಕ್ಲೀಷೆಯಾಗಿಬಿಡುತ್ತದೆ. ಏಕೆಂದರೆ, ನಮ್ಮ ಸುತ್ತ ಹುಟ್ಟಿಕೊಳ್ಳುತ್ತಿರುವ ಸಂಘಟನೆಗಳು ಈ ಪದಗಳನ್ನು ಬಳಸಿ ಅವುಗಳ ಗಂಭೀರತೆಯನ್ನು ನಾಶಮಾಡುತ್ತಿವೆ. ಬರವಣಿಗೆಯ ಮೂಲಕ ನುಡಿಯ ಅಂತರಂಗ-ಬಹಿರಂಗಗಳನ್ನು ಡಿ. ಎನ್. ಶಂಕರಭಟ್ಟ, ಕೆ. ವಿ. ನಾರಾಯಣ, ಕೆ. ವಿ. ತಿರುಮಲೇಶರೇ ಅಲ್ಲದೆ ಇನ್ನೂ ಅನೇಕರು ಚರ್ಚಿಸಿದ್ದಾರೆ. ಪ್ರಶ್ನೆಯಿರುವುದು ಈಗ ನಮಗೆ ಬೇಕಾಗಿರುವುದು ಭಾಷೆಯ ರಚನಾತ್ಮಕ ಚರ್ಚೆಯ ಹುಡುಕಾಟವೋ ಅಥವಾ ಅದನ್ನು ಕೊಂಡಿಯಾಗಿ ಬಳಸಿಕೊಂಡು ಬೇರೆ ಬೇರೆ ಆಯಾಮಗಳನ್ನು ಒಳಗುಮಾಡಿಕೊಳ್ಳುವುದೋ ಎಂಬುದು. ಸಾಹಿತ್ಯ ರಚನೆಗಳನ್ನು ಇವತ್ತಿನ ಆಗುಹೋಗುಗಳಿಗೆ ಭಾಷಿಕ ಚರ್ಚೆಯಲ್ಲಿ ಸೇರಿಸಿಕೊಳ್ಳುವ ಬಗೆ ಹೇಗೆ ? ಭಾಷಿಕ ರಾಜಕಾರಣ-ಸಾಂಸ್ಕೃತಿಕ ರಾಜಕಾರಣ ಇವುಗಳ ಚರ್ಚೆಯನ್ನು ಯಾವ ರೀತಿಯಲ್ಲಿ ಮುಂದುವರಿಸಬೇಕು ಎಂಬುದು ನಮ್ಮ ಮುಂದಿರುವ ಪ್ರಶ್ನೆ. ರಂಗನಾಥರ ಈ ಕೃತಿಯನ್ನು ಓದಿದಾಗ ಇಂತಹ ಪ್ರಶ್ನೆಗಳು ಮೂಡುತ್ತವೆ. ಈ ರೀತಿಯ ಪ್ರಶ್ನೆಗಳು ಕವಿರಾಜಮಾರ್ಗದಲ್ಲೇ ನಮಗೆ ಕೆಲವೆಡೆ ಕಾಣಸಿಗುತ್ತವೆ. ಜನಸಮುದಾಯಗಳನ್ನು ಕುರಿತು, ಜನಭಾಷೆಗಳ ಬಗ್ಗೆ ಹೇಳುವಾಗ ‘ಗ್ರಾಮ್ಯೋಕ್ತಿ’ ಎಂದು ಕರೆದು ಶ್ರೀವಿಜಯ ಸೂತ್ರಬದ್ಧವಾಗಿ ಚರ್ಚೆ ಎಬ್ಬಿಸುತ್ತಾನೆ, ನಿಜ. ಆದರೆ ಅಂತಿಮವಾಗಿ ಕವಿರಾಜಮಾರ್ಗಕಾರನ ಮೂಲ ಉದ್ದೇಶ ಅಲಂಕಾರಗಳ ಮೀಮಾಂಸೆಯನ್ನು ವಿಸ್ತರಿಸುವುದು ಮಾತ್ರವೇ ಆಗಿತ್ತೇ, ಎಂಬ ಪ್ರಶ್ನೆಯೂ ಮೂಡುತ್ತದೆ. ಹೀಗೆ ಹೇಳುವಾಗ ರಂಗನಾಥ್ ತಮ್ಮ ಭಾಷಿಕ ಪೂರ್ವ ಸೂರಿಗಳನ್ನು ಎದುರುಗೊಳ್ಳುವುದೇ ಈ ಮಾದರಿಯ ಪ್ರಶ್ನೆಗಳ ಮೂಲಕ. ಕವಿರಾಜಮಾರ್ಗಕಾರನ ಹೆಗಲಮೇಲೆ ಭದ್ರವಾಗಿ ಕೂತಿರುವ ವಿದ್ವಾಂಸರೂ ನಮ್ಮಲ್ಲಿದ್ದಾರೆ. ಹಾಗೆಯೇ ಅವನ ಎರಡೂ ಭುಜಗಳನ್ನು ಪರೀಕ್ಷಿಸುತ್ತ ನಿಂತು ಭಾಷಿಕ ಜಗತ್ತನ್ನು ನೋಡುವವರೂ ಇದ್ದಾರೆ. ರಂಗನಾಥ್ ಎರಡನೇ ಗುಂಪಿಗೆ ಸೇರಿದವರು. ಕೃತಿ ಅವರೇ ಹೇಳಿಕೊಂಡಿರುವ ಹಾಗೆ, ‘ಜನಭಾಷೆಗಳು ಮತ್ತು ಪ್ರಭುತ್ವ ಭಾಷೆಗಳ ಸಂಘರ್ಷ’ ಎಂಬ ಪ್ರಬಂಧದ ಮುಂದುವರಿದ ಆಲೋಚನೆಗಳು ಎಂದು ಪ್ರಾರಂಭದಲ್ಲಿಯೇ ಇದು ತಿಳಿಯುತ್ತದೆ. ಮೊದಲೇ ಪ್ರಸ್ತಾಪಿಸಿದ ಹಾಗೆ ಭಾಷೆಯನ್ನು ಪ್ರಾಯೋಗಿಕವಾಗಿ ಮತ್ತು ರಚನಾತ್ಮಕವಾಗಿ ಈಗಾಗಲೇ ಕೆ.ವಿ.ಎನ್., ಡಿ.ಎನ್.ಎಸ್. ಅವರು ಬಹಳ ಅರ್ಥಪೂರ್ಣವಾಗಿ ಮಾಡಿದ್ದಾರೆ. ಅದರಲ್ಲೂ ಡಿ.ಎನ್.ಎಸ್. ಕನ್ನಡ ಭಾಷೆಯ ಚರಿತ್ರೆಯೊಂದಿಗೆ ಗುದ್ದಾಡಿ, ಹಠ ಹಿಡಿದು ಕನ್ನಡದ್ದೇ ಆದ ಚೌಕಟ್ಟನ್ನು ಗುರುತಿಸಲು ಯತ್ನಿಸಿದ್ದಾರೆ. ಇದರಲ್ಲೂ ಕೂಡ ಒಂದು ಸಾಮಾಜಿಕ ನ್ಯಾಯವನ್ನು ಗುರುತಿಸಬಹುದು. ರಂಗನಾಥ್ ಅವರು ಈ ಇಬ್ಬರ ಆಲೋಚನಾಕ್ರಮಗಳನ್ನು ವಿಸ್ತರಿಸಲು ಪ್ರಯತ್ನಮಾಡಿದ್ದಾರೆ. ಈ ಚರ್ಚೆಯನ್ನು ಇವರು ಪ್ರಾಥಮಿಕ ಶಾಲಾ ಹಂತದಿಂದ ಹಿಡಿದು ನುಡಿಯ ಪ್ರಮಾಣೀಕರಣದವರೆಗೆ ಹಿಗ್ಗಿಸುತ್ತಾರೆ. ಮುಖ್ಯವಾಗಿ, ಸಾಮಾಜಿಕ ನ್ಯಾಯವೆನ್ನುವುದು ಬಹುಮುಖಿಯಾದುದು. ನುಡಿ ಅಧ್ಯಯನದ ಮೂಲಕವೇ ಇದನ್ನು ವಿಸ್ತರಿಸಬೇಕು ಎಂಬುದು ಕೂಡ ಏಕದಾರಿಯದೇ. ಆದರೆ ರಂಗನಾಥ್ ಇದನ್ನು ಸಮಾಜದಲ್ಲಿ ಭಾಷೆ ಬಳಕೆಯಾಗುತ್ತಿರುವ ಇನ್ನಿತರ ಪ್ರಬಲ ವಲಯಗಳನ್ನು ಹೆಕ್ಕಿ ತೆಗೆದು ಅವುಗಳನ್ನು ಭಾಷೆಯ ಮತ್ತು ಸಾಮಾಜಿಕತೆಯ ಹಿನ್ನೆಲೆಯಲ್ಲಿ ವಿಶ್ಲೇಷಿಸುತ್ತಾರೆ. ಚಿತ್ರೋದ್ಯಮದ ಬಗ್ಗೆ ಅವರು ಎತ್ತಿರುವ ಪ್ರಶ್ನೆಗಳು ಗಮನ ಸೆಳೆಯುತ್ತವೆ. ಭಾಷೆಯನ್ನು ವಿಸ್ತರಿಸುವಲ್ಲಿ ಚಲನಚಿತ್ರಗಳ ಪಾತ್ರವೂ ಕೂಡ ದೊಡ್ಡದು. ಆದರೆ ಕನ್ನಡ ಚಲನಚಿತ್ರಗಳಿಗೆ ಹೋಲಿಸಿದರೆ ಪರಭಾಷೆಗಳ ಚಿತ್ರೋದ್ಯಮಗಳು ನಮಗಿಂತ ಮುಂದಿವೆ. ಪ್ರಸ್ತುತ ದಿನಗಳಲ್ಲಿ ಪರಭಾಷೆಯ ಚಿತ್ರಗಳನ್ನು ನೋಡುತ್ತಲೇ ಅವುಗಳ ‘ಭಾಷೆ’ಯನ್ನು ನಮ್ಮವರು ಕಲಿಯುತ್ತಿದ್ದಾರೆ. ಕನ್ನಡ ಚಿತ್ರಗಳಿಗೆ ಆ ಸ್ಥಿತಿ ಇನ್ನೂ ಬಂದಿಲ್ಲವೇಕೆ ? ನಮ್ಮ ಚಿತ್ರೋದ್ಯಮ ಈ ಸಮಸ್ಯೆಯನ್ನು ಮಾರುಕಟ್ಟೆಯ ವಲಯಕ್ಕೆ ಜಾರಿಸುತ್ತದೆ. ಈ ದೃಷ್ಟಿಯಲ್ಲಿ ರಂಗನಾಥ್ ಅವರ ಚರ್ಚೆ ಸಫಲಗೊಂಡಿದೆ. ಜಗತ್ತಿನಾದ್ಯಂತ ನಮ್ಮ ಸೋದರ ಭಾಷೆಗಳಾದ ತಮಿಳು, ತೆಲುಗು ಭಾಷೆಯ ಚಿತ್ರಗಳು ಪ್ರದರ್ಶಿತಗೊಂಡು ತೆರೆಯ ಮೇಲೇ ಅಲ್ಲದೆ ಹೊರಗೂ ಕೂಡ ತಮ್ಮ ವ್ಯಾಪ್ತಿಯನ್ನು ವಿಸ್ತರಿಸಿಕೊಳ್ಳುತ್ತಿವೆ. ಜಗತ್ತಿನ ಬೇರೆಡೆ ಕನ್ನಡಿಗರೂ ಇದ್ದಾರೆ. ಆದರೆ ನಮ್ಮ ಚಿತ್ರಗಳು ಹಿನ್ನಡೆ ಕಾಣುತ್ತವೆ. ಇದರಿಂದ ನಮ್ಮ ಭಾಷೆಯೂ ಹಿನ್ನಡೆಯನ್ನು ಅನುಭವಿಸಿದೆಯೇ, ಎಂಬ ಪ್ರಶ್ನೆಯೂ ಕಾಡುತ್ತದೆ. ಮತ್ತೊಂದು ಕಡೆ, ಒಂದನೇ ತರಗತಿಯಿಂದಲೇ ಇಂಗ್ಲಿಷ್ ಭಾಷೆಯನ್ನು ಕಲಿಸಿದರೆ ಸಾಮಾಜಿಕ ನ್ಯಾಯ ಸಿಗುತ್ತದೆ ಎಂಬುದನ್ನು ರಂಗನಾಥ್ ಒಪ್ಪಿಕೊಳ್ಳುವಂತೆ ಕಾಣುವುದಿಲ್ಲ. ಅನೇಕ ಎಡಪಂಥೀಯ ಹೋರಾಟಗಳಲ್ಲಿ ಕಾಣಿಸಿಕೊಂಡಿರುವ ರಂಗನಾಥ್‌ರ ಈ ಹೇಳಿಕೆ ಮುಖ್ಯವಾಗುತ್ತದೆ. ಹಿಂದುಳಿದ ಮತ್ತು ಅಲ್ಪಸಂಖ್ಯಾತ ವಿದ್ಯಾರ್ಥಿಗಳನ್ನೂ ಒಳಗೊಂಡ ಸರ್ಕಾರಿ ಶಾಲೆಗಳಲ್ಲಿ ಪ್ರೌಢ ಮತ್ತು ಪದವಿ ಹಂತ ಮುಗಿಯುವವರೆಗೆ ವ್ಯಾವಹಾರಿಕ ಇಂಗ್ಲಿಷ್ ಕಲಿಸಲು ಸಾಧ್ಯವಿಲ್ಲವೆ, ಎಂಬ ಪ್ರಶ್ನೆಯನ್ನು ಕೇಳಿಕೊಳ್ಳುತ್ತಾರೆ. ಇಂಗ್ಲಿಷ್ ಭಾಷೆಯನ್ನೇ ಮುಂದಿಟ್ಟುಕೊಂಡು ಕೆಲವು ಕಲಿಕಾ ಕೇಂದ್ರಗಳು ಅದನ್ನು ವಾಣಿಜ್ಯೀಕರಣಗೊಳಿಸುತ್ತಿವೆ ಎಂಬುದು ನಿಜ. ಕನ್ನಡ ಶಾಲೆಗಳು ಇಂದಿಗೂ ಅನೇಕ ರೀತಿಯಲ್ಲಿ ಚಿಂತಿಸುತ್ತಿವೆ. ಈಗಂತೂ ಕನ್ನಡ ಮಾಧ್ಯಮಕ್ಕೇ ಕುತ್ತು ಬಂದಿದೆ, ಹಾಗಾಗಿ ರಂಗನಾಥ್ ಅವರ ಸಮಸ್ಯೆ ಬೇರು, ಚಿಗುರುಗಳನ್ನು ದಾಟಿರುವುದರಿಂದ ಸಾಮಾಜಿಕ ನ್ಯಾಯವನ್ನು

**ಎನ್. ಸುರೇಶ್ ನಾಗಲಮಡಿಕೆ**

ಮೀರಿ ನಾವು ಚರ್ಚೆಗೆ ತೊಡಗಬೇಕು ಎನಿಸುತ್ತದೆ. ಕನ್ನಡ ನುಡಿಯ ಆತಂಕಗಳ ಹಿನ್ನೆಲೆಯ ಸಾಮಾಜಿಕ ನ್ಯಾಯವನ್ನು ಈ ಕೃತಿ ಪದೇ ಪದೇ ಚರ್ಚೆಗೆ ಒತ್ತಾಯಿಸುತ್ತದೆ. ಹೀಗೆ ಹೇಳುವಾಗ ಭಾಷೆಗೆ ಸಾಮಾಜಿಕ ನ್ಯಾಯವೋ ಅಥವಾ ಆ ಭಾಷೆಯನ್ನು ನುಡಿಯುವ ಸಮುದಾಯಗಳ ಸಾಮಾಜಿಕ ನ್ಯಾಯವೋ, ಎಂಬ ಪ್ರಶ್ನೆಗಳು ಮೂಡುತ್ತವೆ. ಹಾಗೆ ನೋಡಿದರೆ, ಈ ಕೃತಿಯಲ್ಲಿ ಇವೆರಡೂ ಅಂಶಗಳು ಇಬ್ಭಾಗಗೊಂಡು ಬೇರೆ ಬೇರೆಯಾಗಿ ಚರ್ಚಿತಗೊಂಡಿವೆ.

ಅಲ್ಪಸಂಖ್ಯಾತ ಭಾಷೆಗಳ ಹಿನ್ನೆಲೆಯಲ್ಲೂ ರಂಗನಾಥ್ ಈ ಚರ್ಚೆಯನ್ನು ಬೆಳೆಸುತ್ತಾರೆ. ಕರ್ನಾಟಕದಲ್ಲಿ ಉರ್ದು ಭಾಷೆಯನ್ನು ಮಾತನಾಡುವ ಜನರಿದ್ದಾರೆ. ಕೊಂಕಣಿ, ತೆಲುಗು, ತಮಿಳು, ಮಲೆಯಾಳಂ ಅಲ್ಲದೆ ಬುಡಕಟ್ಟು ಭಾಷೆಗಳನ್ನು ಮಾತನಾಡುವವರಿದ್ದಾರೆ. ಆದರೆ ಪ್ರಭುತ್ವಗಳು ತಮಗೆ ಗೊತ್ತಿಲ್ಲದಂತೆ ಅಭಿವೃದ್ಧಿಯ ಹೆಸರಿನಲ್ಲಿ ಅವುಗಳನ್ನು ವರ್ಗೀಕರಿಸಿವೆ. ಈ ವರ್ಗೀಕರಣ ಆ ಭಾಷೆಗೆ ಅಭಿವೃದ್ಧಿಗಿಂತ ಸಾಮಾಜಿಕ ನ್ಯಾಯ ಇಲ್ಲವೆನ್ನುವ ರೀತಿ ಮುಖ್ಯವಾಗುತ್ತದೆ. ಇದಕ್ಕಿಂತ ಮುಖ್ಯವಾಗಿ ಆ ಭಾಷೆಗಳಿಗೆ ಒಂಟಿತನ ಕಾಡಿಸಬಾರದು. ಈ ಒಂಟಿತನವೇ ಭಾಷೆಗಳಿಗೆ ಕೀಳರಿಮೆಯನ್ನು ಉಂಟುಮಾಡುತ್ತದೆ. ಮಾತ್ರವಲ್ಲ, ಅದು ಇವುಗಳನ್ನು ಸದಾ ದೂರವಿಡುವ ಹುನ್ನಾರವೇ ಆಗುತ್ತಿರುತ್ತದೆ. ಪ್ರಭುತ್ವ ಆ ಭಾಷೆಗಳಿಗೆ ಸಾಮಾಜಿಕ ನ್ಯಾಯವನ್ನು ಒದಗಿಸುತ್ತಿಲ್ಲ. ಬದಲು, ಅವುಗಳನ್ನು ತನ್ನ ಸೌಹಾರ್ದ ಭಾಷೆಗಳಿಂದ ಹೊರನೂಕುತ್ತಿದೆ ಎಂದು ಹೇಳುವಾಗ ರಂಗನಾಥ್ ಇಂಥ ಕಡೆ ಆಳಕ್ಕೆ ಹೋಗುವುದಿಲ್ಲ. ಅವಸರದಿಂದ ಮಾತನಾಡುತ್ತಾರೆ. ಮುಖ್ಯವಾಗಿ ಭಾಷೆಗಳಿಗೂ ಅನಗತ್ಯವಾಗಿ ಕೋಮುವಾದದ ಸ್ಪರ್ಶವಿರುವಾಗ ಸಾಮಾಜಿಕ ನ್ಯಾಯದ ಪರಿಕಲ್ಪನೆ ಅದಕ್ಕೆ ಯಾವ ರೀತಿ ಪರಿಹಾರವಾಗುತ್ತದೆ ಎಂಬುದನ್ನು ವಿಸ್ತರಿಸಿಕೊಳ್ಳುವ ಅಗತ್ಯವಿದೆ. ಬ್ಯಾರಿ ಅಕಾಡೆಮಿ, ಉರ್ದು ಅಕಾಡೆಮಿಗಳು ಸ್ಥಾಪನೆಯಾಗಿದ್ದೂ ಸಾಮಾಜಿಕ ನ್ಯಾಯ ಅಲ್ಲವೆ? ಅದು ಅವುಗಳ ಸ್ವಾಯತ್ತವನ್ನು ಸೂಚಿಸುವುದಿಲ್ಲವೆ? ಬೇರೆ ಆಗಿದ್ದ ಮಾತ್ರಕ್ಕೆ ಅವು ಸೌಹಾರ್ದವನ್ನು ಕಳೆದುಕೊಂಡಿವೆ ಎಂಬ ಅರ್ಥವನ್ನು ಸೂಚಿಸುವುದಿಲ್ಲ. ಬದಲು, ಹೀಗೆ ವರ್ಗೀಕರಣಗೊಂಡು ಅಭಿವೃದ್ಧಿಯ ಹಿನ್ನೆಲೆಯಲ್ಲಿ ಸಾಮಾಜಿಕ ನ್ಯಾಯವನ್ನು ದಕ್ಕಿಸಿಕೊಂಡಿವೆಯಲ್ಲವೆ? ಇಂಥ ಕಡೆ ಕನ್ನಡ-ಕನ್ನಡಿಗ-ಕರ್ನಾಟಕ ಎಂಬ ಸಮೀಕರಣವನ್ನು ತರಬೇಕಾದರೆ ಗೊಂದಲವಾಗುತ್ತದೆ. ಬರಗೂರು ರಾಮಚಂದ್ರಪ್ಪ ಇದನ್ನು ಭಾಷೆಯ ಸಾಂಸ್ಕೃತಿಕ ಸ್ವಾಯತ್ತತೆ ಎಂಬ ಲೇಖನದಲ್ಲಿ ಎದುರಿಸಿದ್ದಾರೆ. ರಂಗನಾಥ ಅವರು 'ಸ್ವಾಯತ್ತತೆ'ಯ ಬೆನ್ನಲ್ಲೇ ಈ ಸಮಸ್ಯೆಯನ್ನು ಬಿಡಿಸಿಕೊಳ್ಳಬಹುದಿತ್ತು. ಒಂದು ಭಾಷೆಗೆ ಸ್ವಾಯತ್ತತೆ ಮುಖ್ಯವೋ, ಇದರಿಂದ ಅದಕ್ಕೆ ಮತ್ತು ಆ ಸಮುದಾಯಗಳಿಗೆ ಸ್ವಾಯತ್ತತೆ ದೊರಕುತ್ತದೋ, ಎಂಬ ಪ್ರಶ್ನೆಗಳು ಮುಖ್ಯವಾಗುತ್ತವೆ. ಇಂಥ ಕಡೆ ಬರಗೂರರ ಆಲೋಚನೆಗಳು ತೂಕದಿಂದ ಕೂಡಿವೆ. ರಂಗನಾಥ್ ಇದನ್ನು ವಿಸ್ತರಿಸುವ ಕೆಲಸವನ್ನು ಮಾಡಬಹುದಿತ್ತು.

ಸಂಸ್ಕೃತಿ ಕುರಿತ ಚರ್ಚೆಯನ್ನು ರಂಗನಾಥ್ ಡಿ.ಆರ್., ಕೆ.ವಿ.ಎನ್. ಮುಂತಾದವರ ಹಿನ್ನೆಲೆಯಲ್ಲಿ ಚರ್ಚಿಸುತ್ತಾರೆ. ಹಾಗೆ ನೋಡಿದರೆ, ಸಂಸ್ಕೃತಿ ವಿಮರ್ಶೆ ಎಂಬುದು ಗುಪ್ತವಾಗಿಯೇ ನಮ್ಮಲ್ಲಿ ವೆಂಕಣ್ಣಯ್ಯ, ಮುಳಿಯ, ಶಂಬಾ ಮುಂತಾದವರಿಂದ ಪ್ರಾರಂಭವಾಗಿ, ಅದನ್ನು ಕೆ. ವಿ. ಸುಬ್ಬಣ್ಣ, ಮೊಕಾಶಿಯವರು ಬೇರೆ ಬೇರೆ ಆಯಾಮಗಳಲ್ಲಿ ವಿಸ್ತರಿಸಿದ್ದರು. ರಂಗನಾಥ್ ಸೇರಿಸಿಕೊಳ್ಳುವ ಭಾಷಿಕ/ವರ್ತಮಾನದ ತುರ್ತುಗಳೆಲ್ಲ ಸುಬ್ಬಣ್ಣ, ಶಂಬಾ, ಮೊಕಾಶಿಯವರಲ್ಲಿ ಬರುತ್ತವೆ. ಶೆಟ್ಟರ್ ಅವರ ಯೋಚನೆಗಳನ್ನು ನಾವು ಗಂಭೀರವಾಗಿ ಸ್ವೀಕರಿಸಬೇಕಾಗಿದೆ. ಇದೇ ಲೇಖನದಲ್ಲಿ ಲೇಖಕರು ವರ್ತಮಾನವನ್ನು ವಿಸ್ತರಿಸಿಕೊಳ್ಳಲು ವರ್ತಮಾನದಲ್ಲಿ ಸಮರ್ಥವಾದ ಸತ್ಯಗಳು ನಿರ್ಮಾಣಗೊಳ್ಳುತ್ತಿಲ್ಲವೆಂಬ ಶಂಕೆಯೋ, ಎಂಬ ಪ್ರಶ್ನೆಯನ್ನು ಕೇಳಿಕೊಳ್ಳುತ್ತಾರೆ. ಕ್ಲಾಸಿಕಲ್ ಪಠ್ಯಗಳನ್ನು ಓದಿ ವರ್ತಮಾನವನ್ನು ಅವಲೋಕಿಸುವುದು ಓದಿನ ಒಂದು ಕ್ರಮವಷ್ಟೆ? ಡಿ.ಆರ್. ತಮ್ಮ 'ಫ್ಲೇಮಿಂಗ್ ಫೀಟ್' ಕೃತಿಯಲ್ಲಿ ಅಂಬೇಡ್ಕರ್/ಗಾಂಧಿಯವರ ಚಿಂತನೆಗಳನ್ನು ವಿಸ್ತರಿಸಲು ಕೈವಾರ ನಾರಾಣಪ್ಪ, ಕಡುಕೋಳಪ್ಪ, ಕನಕ ಎಲ್ಲರನ್ನೂ ತಂದು, ಸಿದ್ಧಲಿಂಗಯ್ಯನವರ 'ಪಂಚಮ' ನಾಟಕವನ್ನೂ ಚರ್ಚೆಗೆ ಎತ್ತಿಕೊಳ್ಳುತ್ತಾರೆ. ಸಂಸ್ಕೃತಿ ಚರ್ಚೆಯು ಗಡಿ/ಭಾಷೆಗಳನ್ನು ಮೀರಿ ಚಾಚಿಕೊಳ್ಳುತ್ತದೆ. ಶಂಬಾ ಏಕಕಾಲಕ್ಕೆ ನಾಗಾರಾಧನೆಯ ಬಗ್ಗೆ ಮಾತನಾಡುತ್ತ, ಕರ್ಣನ ಬಗ್ಗೆಯೂ ಬರೆಯುತ್ತಾರೆ. ಹಾಲುಮತ ಪುರಾಣವನ್ನು ಕುರಿತು ವಿಸ್ತಾರವಾಗಿ ಚರ್ಚಿಸುತ್ತಾರೆ. ಗೊಂದಲಗಳೆಲ್ಲಾ ಕೆಲವೊಮ್ಮೆ ನಾವು ಹಾಕಿಕೊಳ್ಳುವ ಓದಿನ ಚೌಕಟ್ಟುಗಳಿಗೆ ಸಂಬಂಧಪಟ್ಟಿರುತ್ತವೆ, ಅಷ್ಟೆ. ಮತ್ತೊಂದು ಕಡೆ ರಂಗನಾಥ್ 'ಕನ್ನಡ ಕಥನಗಳಲ್ಲಿ ಭಾಷೆಯ ಬಳಕೆ' ಎಂಬ ಲೇಖನದಲ್ಲಿ ಒಳನುಡಿ ಮತ್ತು ಅದರ ಸಾಮಾಜಿಕ ಪರಿಸರದ ಹಿನ್ನೆಲೆಯನ್ನು ಚರ್ಚಿಸುತ್ತಾರೆ. ಪ್ರಯತ್ನಪಟ್ಟಿದ್ದರೆ ಈ ಚರ್ಚೆಯನ್ನು ಇನ್ನೂ ರಚನಾತ್ಮಕತೆಯಿಂದ ಬಹುಸಂಸ್ಕೃತಿಯ ಕಡೆಗೆ ಚಲಿಸಬಹುದಿತ್ತು. ಸಮಕಾಲೀನ ಸಾಹಿತ್ಯದಲ್ಲಿ ಸಾಂಸ್ಕೃತಿಕ ಪಠ್ಯ ರೂಪುಗೊಳ್ಳುತ್ತಿಲ್ಲವೇ, ಅದರಿಂದ ಚರಿತ್ರೆ ಮತ್ತು ಸಂಸ್ಕೃತಿಯ ಗೆರೆಯನ್ನು ದಾಟುತ್ತಿಲ್ಲವೇ, ಎಂಬ ಪ್ರಶ್ನೆಗಳನ್ನು ಕೇಳಿಕೊಂಡಾಗ, ರಂಗನಾಥ್ ಪ್ರಾರಂಭದಲ್ಲಿ ಮತ್ತೆ ಏಕವಚನ/ಬಹುವಚನ ಮುಂತಾದ ಪ್ರಾಯೋಗಿಕ ವಿಷಯಗಳತ್ತ ತಿರುಗುತ್ತಾರೆ. ನಾಗವೇಣಿಯವರ 'ಗಾಂಧೀ ಬಂದ' - ಕುಂ. ವೀ. ಅವರ, 'ಅರಮನೆ', ವೈದೇಹಿ ಅವರ ಅನೇಕ ಕತೆಗಳು, ಜಂಬಣ್ಣ ಅವರ 'ಕುರುಮಯ್ಯ ಮತ್ತು ಅಂಕುಶದೊಡ್ಡಿ', ನುಗಡೋಣಿ ಅವರ ಕೆಲವು ಕತೆಗಳು ನನಗೆ ತಿಳಿದಮಟ್ಟಿಗೆ ಸಾಂಸ್ಕೃತಿಕ ಪಠ್ಯಗಳೇ ಆಗಿವೆ. ಅವುಗಳ ಭಾಷೆಗಳ ಮುಖೇನವೂ ಈ ಮಾತು ವಾಸ್ತವವಾಗಿದೆ. ಈ ಪಠ್ಯಗಳನ್ನು ಚರ್ಚಿಸಲು ಬೇಕಾದ ಪರಿಕರಗಳನ್ನು ನಾವು ಹುಡುಕಬೇಕಷ್ಟೆ.

ಇಷ್ಟು ಹೇಳಿದರೂ ಇಂದು 'ಜನರ ವ್ಯಾಕರಣ' ಭಾಷೆಯ ಮೇಲೆ ಆಸಕ್ತಿ ಇರುವ ವಿದ್ಯಾರ್ಥಿಗಳು ಗಮನಿಸಬೇಕಾದ ಪುಸ್ತಕವಾಗಿದೆ. ಭಾಷೆಯ ಬಗೆಗಿನ ಅವರ ತೀರ್ಮಾನಗಳು, ಪ್ರಭುತ್ವದ ವಿರುದ್ಧ ತೂಕಬದ್ಧ ವಿವರಗಳು ಅವರ ಮುಂದಿನ ಬರವಣಿಗೆಗೆ ಇನ್ನಷ್ಟು ದಾರಿ ಮಾಡಿಕೊಡಲಿವೆ.

**ಎನ್. ಸುರೇಶ್ ನಾಗಲಮಡಿಕೆ**
ನಂ. ೫೮, ೧ನೇ ಮಹಡಿ, ೫ನೇ ಅಡ್ಡರಸ್ತೆ, ನರಸಿಂಹಲು ಬಡಾವಣೆ,
ನಂದಿನಿ ಲೇಔಟ್, ಬೆಂಗಳೂರು - ೫೬೦ ೦೯೬



## ಯೋಗ್ಯತೆ

ಜನ್ಮಾಂಧನಾದರೂ
ಏಕಾಂಗಿಯಾಗಿ
ಹೆದರಿದ ಗುಬ್ಬಿಯಂತೆ
ವಿಷಾದಗೀತೆಯಾಗಬೇಕಿಲ್ಲ
ಬದುಕಿಗೆ ವಸಂತ ಪಂಚಮಿಯ ಬಣ್ಣದೋಕುಳಿಗಾಗಿ
ವರಮಾಲೆ ಹಿಡಿದ ಗಾಂಧಾರಿಯ
ಒಪ್ಪಿಸುತ್ತಾರೆ
ಸಂಸಾರ ತ್ಯಾಗಮಾಡಿ
ಮೋಹದ ಪಂಜರದಿಂದ ಹೊರಬಂದೆ
ನಾರುಮಡಿಯುಟ್ಟ
ಸಂಯಮ ಸಾಧಕನೊಂದಿಗೂ
ಸಪ್ತಪದಿ ಹಾಕಲು
ಸುಕುಮಾರಿ ಸುಕನ್ಯೆಯ
ಒಪ್ಪಿಸುವರು

ಸಕಲ ಸಾಮ್ರಾಜ್ಯವನು ಕಳೆದುಕೊಂಡ
ಅಡವಿ ಪಾಲಾದ ಕಡುಬಡವನನ್ನು
ಪಾಣಿಗ್ರಹಣ ಮಾಡಲು ವಧುವಾಗಿ
ಸಿದ್ಧಳಾಗುತ್ತಾಳೆ ರಾಜಕುವರಿ ಸಾವಿತ್ರಿ
ನಿಗಮಶರ್ಮನಾದರೂ
ಅಷ್ಟಾವಕ್ರನಾದರೂ
ಈ ದೇಶದಲ್ಲಿ
ವರನಾಗಲು
ಗಂಡಾಗಿ ಜನಿಸಿದರೆ ಸಾಕು

ತೆಲುಗು ಮೂಲ : **ಶ್ರೀಮತಿ ಮಂದರಪು ಹೈಮವತಿ**
ಕನ್ನಡಾನುವಾದ : **ಗುರುಮೂರ್ತಿ ಪೆಂಡಕೂರು**
ರಾಮನಗರ, ಹಗರಿಬೊಮ್ಮನಹಳ್ಳಿ – ೫೮೩ ೨೧೨



ನಡುವೆ ಸುಡುಬಿಸಿಲು, ಎರಡನ್ನೂ ಅನುಭವಿಸುತ್ತ ದೂರಸಾಗಿದಂತೆಲ್ಲ ನೀರವತೆ ಹೆಪ್ಪುಗಟ್ಟಿತ್ತು. ಪಶುಪಕ್ಷಿ ಕೀಟಗಳ ಶಬ್ದವನ್ನು ಹೊರತುಪಡಿಸಿದರೆ ಅಲ್ಲಿ ಜಗಳವೂ ಇಲ್ಲ, ಬುಸುಗುಟ್ಟುವಿಕೆಯೂ ಇಲ್ಲ. ತಾನು ಬಯಸಿದ್ದು ದೊರೆತ ಸಂಭ್ರಮದಲ್ಲಿ ಮುಂದೆ ಸಾಗುತ್ತಿದ್ದ ಅಶ್ವತ್ಥ ಅವರಿಗೆ ಸಮೀಪದಲ್ಲಿ ಒಂದು ಕೊಳ ಕಾಣಿಸಿತು. ಕೊಳದ ಅಂಚಿನಲ್ಲಿ ವಿಶಾಲವಾದ ಮರ. ಮರದ ಕೆಳಗೆ ಹಸಿರುಹುಲ್ಲಿನ ಹಾಸು

ಎಲೆಗಳು... ಇತ್ಯಾದಿ. ಈ ಮರವು ಒಂದು ರೀತಿಯಲ್ಲಿ ಎಲ್ಲ ವಯೋಮಾನದ ಜನರಿರುವ ಊರಿನ ಹಾಗೆ. ಎಲೆಗಳೇ ಜನಗಳು ಎನಿಸಿ ಅಶ್ವತ್ಥ್ ಮುಗುಳ್ನಕ್ಕರು. ಈ ಎಲೆಗಳಿಗೆ ಬಾಯಿ ಇಲ್ಲದೆ ಮೂಕವಾಗಿವೆ. ಅವುಗಳೂ ಮಾತಾಡುವಂತಿದ್ದರೆ ?! ಪ್ರಾಯಃ ಪತ್ರಗಳೂ ಪರಸ್ಪರ ಹೋಲಿಸಿಕೊಂಡು ತಮ್ಮ ತಾಪತ್ರಯವನ್ನು ವಿನಿಮಯ ಮಾಡಿಕೊಳ್ಳುತ್ತಿದ್ದವೇನೋ ?

# ಅಶ್ವತ್ಥನ ಆಲೋಚನೆ

### ಭಾಗ – ೧

**ಅ**ಶ್ವತ್ಥ್, ಬೆಂಗಳೂರಿನ ಪ್ರತಿಷ್ಠಿತ ಕಂಪನಿಯೊಂದರ ಉದ್ಯೋಗಿ. ಕೈ ತುಂಬ ಕೆಲಸ; ಜೇಬಿನ ತುಂಬ ವೇತನ. ಹೊರಗಿನಿಂದ ನೋಡುವವರ ಕಣ್ಣಿಗೆ ಅವರದು ಯಶಸ್ವಿ ಸಾಧನೆ.

ಆದರೆ ಬಹಿರಂಗದ ಮೆಚ್ಚುಗೆಯು ಅಳಿಸಲಾರದಂತಹ ಅಂತರಂಗದ ತುಮುಲ ಅವರಿಗೆ. ಏಕೆಂದರೆ ಕಚೇರಿಯ ಪರಿಸರದಲ್ಲಿ ಎಲ್ಲರೂ ಒಬ್ಬರು ಇನ್ನೊಬ್ಬರೊಡನೆ ಹೋಲಿಸಿಕೊಳ್ಳುವುದು, ಸ್ಪರ್ಧೆ, ಸಂಘರ್ಷ – ಇವು ನಿತ್ಯ ರಾದ್ಧಾಂತಗಳು. ಅದೇಕೋ ಅಶ್ವತ್ಥ್ ತಾನು ಅಸ್ವಸ್ಥ ಎಂದು ಕರೆದುಕೊಳ್ಳಲು ಲಾಯಕ್ಕು ಎಂದುಕೊಳ್ಳುತ್ತಿದ್ದುದುಂಟು. ದೇಹ ಮನಸ್ಸುಗಳೆರಡೂ ಭಾರ. ಅವರ ಮನಸ್ಸಿನ ವೃಕ್ಷದ ತುಂಬ ಸಂದೇಹದ ಟಿಸಿಲುಗಳೆ.

ಹೋಗಲಿ, ಮನೆಯಲ್ಲಾದರೂ ನಿರಾಳವಾಗಿರೋಣವೆಂದರೆ - ನೆರೆಹೊರೆಯವರೊಡನೆ ಸ್ಪರ್ಧೆ, ಅಣ್ಣತಮ್ಮಂದಿರೊಡನೆ ಪೈಪೋಟಿ. ಬದುಕಿನ ಜಂಜಡದಲ್ಲಿ ಮನಸ್ಸು ಜಡವಾಗಿಹೋಯಿತು. ಒಂದು ದಿನ ಮಟ್ಟಿಗಾದರೂ ಬಿಡುಗಡೆ ದೊರೆಯಲೆಂದು ನಿರ್ಜನಾರಣ್ಯಕ್ಕೆ ಹೋಗಬಯಸಿದರು.

ಸಾರ್ವತ್ರಿಕ ರಜೆಯ ಹಿಂದಿನ ದಿನ ಕಛೇರಿಯಿಂದ ಬೇಗ ಹೊರಟು ರಾತ್ರಿ ಬಸ್ಸಿನಲ್ಲಿ ಪ್ರಯಾಣ ಮಾಡಿ ಕಾಡಿನ ಅಂಚಿನಲ್ಲಿದ್ದ ಊರನ್ನು ಬೆಳಗಿನ ಜಾವ ತಲುಪಿದರು. ಅಲ್ಲಿನ ಹೋಟಲೊಂದರಲ್ಲಿ ಪ್ರಾತರ್ವಿಧಿಗಳನ್ನು ಮುಗಿಸಿ, ತಿಂಡಿ ತಿಂದು, ಮಧ್ಯಾಹ್ನದ ಊಟಕ್ಕೆ ಬುತ್ತಿಕಟ್ಟಿಸಿಕೊಂಡು, ಸುಡುಬಿಸಿಲನ್ನು ಲೆಕ್ಕಿಸದೆ ಕಾಡಿನ ಕಡೆಗೆ ಹೊರಟರು. ತಾನು ಸಾಗಿದ ದಾರಿಯಲ್ಲಿಯೇ ಹಿಂತಿರುಗಬೇಕಾಗಿದ್ದರಿಂದ ಗುರುತುಗಳನ್ನು ಮನಸ್ಸಿನಲ್ಲಿಟ್ಟುಕೊಳ್ಳುತ್ತಾ ಕಾಡಿನ ಒಳಸಾಗಿದರು.

ಊರಿನಿಂದ ದೂರ ಸರಿದಂತೆ ಕಾಡು ದಟ್ಟವಾಗತೊಡಗಿತು. ಹಾಯ್ ಎನಿಸುವ ಮರದ ನೆರಳು, ನಡು

ಇದ್ದು, ಅಶ್ವತ್ಥ್ ಅವರನ್ನು ಮರದ ಎಲೆಗಳ ಅಲುಗಾಟ ಕೈಬೀಸಿ ಕರೆಯುವಂತೆ ಭಾಸವಾಯಿತು. ಎಲೆಗಳು ಗಾಳಿಗೆ ಅಲುಗಿದರೂ ಆ ಕಂಪನವು ಶಬ್ದವನ್ನುಂಟು ಮಾಡುತ್ತಿರಲಿಲ್ಲ. ತನ್ನ ಹೊಟ್ಟೆ ಚುರುಗುಟ್ಟುತ್ತಿದ್ದುದನ್ನು ಗಮನಿಸಿದ ಅಶ್ವತ್ಥ್ ಊಟ ಮಾಡಿ ವಿಶ್ರಾಂತಿ ಪಡೆಯಲು ಈ ಜಾಗ ಪ್ರಶಸ್ತವಾಗಿದೆಯೆಂದು ನಿರ್ಧರಿಸಿ ಕೊಳದ ತಿಳಿನೀರನ್ನು ತಂದು ಕುಡಿದು, ಊಟ ಮುಗಿಸಿ, ಕೈಕಾಲು ಚಾಚಿ ಮಲಗಿದರು. ಹಾಸಿಗೆ, ದಿಂಬು ಇಲ್ಲ; ಹೊದ್ದಿಕೆ ಇಲ್ಲ; ಬೆಳಕನ್ನು ತಡೆಹಿಡಿವ ಗಾಜಿನ ಕಿಟಕಿಗಳಿಲ್ಲ; ಏರ್‌ಕಂಡೀಷನರ್ ಇಲ್ಲ. ಆದರೂ ಏನಾಶ್ಚರ್ಯ! ಇವೆಲ್ಲವೂ ಮೂಲಭೂತ ಅಗತ್ಯ ಎಂದು ನಂಬಿದ್ದ ಅಶ್ವತ್ಥ್‌ಗೆ, ಸುಖ ನಿದ್ರೆಗೆ ದಣಿವು, ಬಿಸಿಲು ಊಟ ಮತ್ತು ನೆರಳುಗಳೇ ಸಾಕು ಎಂದು ಕಲಿಸುವ ರೀತಿಯಲ್ಲಿ ಕ್ಷಣಾರ್ಧದಲ್ಲೇ ಅವರು ನಿದ್ದೆಹೋದರು.

ಊರಿನಲ್ಲಾದರೋ ಅಶ್ವತ್ಥ್ ಅವರಿಗೆ ನಿದ್ದೆ ಬರುವುದೇ ತಡವಾಗುತ್ತಿತ್ತು. ನಿದ್ದೆ ಬಂದರೂ ಕನಸಿನಲ್ಲಿ ಬದುಕಿನ ಜಂಜಾಟಗಳೇ ತಾಂಡವವಾಡುತ್ತಿದ್ದವು. ಈ ಹೊಸ ಪರಿಸರದಲ್ಲಿ ಅವರು ಸುಖನಿದ್ರೆ ಮಾಡುತ್ತಾ ಕಂಡ ಕನಸಾದರೂ ಏನು ಎಂದು ತಿಳಿಯಬಯಸುವಿರಾ ? ಹಾಗಿದ್ದರೆ ಮುಂದಿನ ಭಾಗವನ್ನು ಸಮಾಧಾನವಾಗಿ ಓದಿ.

### ಭಾಗ – ೨

ಕನಸಿನ ಲೋಕದಲ್ಲಿಯೂ ಅಶ್ವತ್ಥ್‌ಗೆ ಕಂಡು ಬಂದದ್ದು ಒಂದು ಮರ. ವೈಶಾಖದ ಬಿಸಿಲಿನಲ್ಲಿ ವಿವಿಧ ವಯೋಮಾನದ ಎಲೆಗಳೆಲ್ಲಾ ಹರಡಿಕೊಂಡು, ಬುಡದಲ್ಲಿ ದಟ್ಟ ನೆರಳನ್ನು ಮೂಡಿಸಿದ ಮರ ಅದು. ಎಲೆಗಳಲ್ಲೋ ವಿವಿಧ ಬಗೆ; ಚಿಗುರುಗಳು, ಕೊಂಚ ಬಲಿತವು, ದೃಢಕಾಯದವು, ವಿಸ್ತಾರದ ಎಲೆಗಳು, ಬಣ್ಣ ಬದಲಿಸಿದ, ಉದುರಲು ಸಜ್ಜಾಗಿರುವ ಮುದಿ

ಪ್ರೊ|| ಎಂ. ಆರ್. ನಾಗರಾಜು

### ಭಾಗ – ೩

ಜೋರಾಗಿ ಗಾಳಿ ಬೀಸಿ ಒಂದು ಎಲೆ ಅನೇಕ ಎಲೆಗಳನ್ನು ತಾಕುತ್ತಾ ಅಶ್ವತ್ಥರ ಕಿವಿಯ ಮೇಲೆ ಬಿತ್ತು. ಕೊಂಚ ವೇಳೆಯಲ್ಲೇ ಇನ್ನೊಂದೆರಡು ಎಲೆಗಳು ಅವರ ಮೇಲೆ ಬಿದ್ದವು. ಈ ನೆವದಲ್ಲಿ ಅಶ್ವತ್ಥ್ ಕನಸಿನ ಲೋಕಕ್ಕೆ ಪ್ರವೇಶಿಸಿದರು. ವೃಕ್ಷಲೋಕಕ್ಕೆ ನನ್ನನ್ನು ಈ ಮರವು ಪತ್ರವೃಷ್ಟಿಯಿಂದ ಇದಿರುಗೊಳ್ಳುತ್ತಿದೆ ಎಂದು ಕಲ್ಪಿಸಿಕೊಂಡು ಮುಗುಳ್ನಕ್ಕರು. ಮೈಯೆಲ್ಲ ಕಣ್ಣಾಗಿಸಿ ಕಿವಿಯಾಗಿಸಿ ಮರವನ್ನು ಗಮನಿಸತೊಡಗಿದರು. ಮೂಕ ಮರದ ಮರ್ಮರ ಎಲೆಗಳ ಮಾತಾಗಿ ಕೇಳತೊಡಗಿತು.

**ಹಣ್ಣೆಲೆ :** ನನಗೋ ಈಚೀಚೆಗೆ ಮೈಯೆಲ್ಲಾ ಭಾರವಾಗತೊಡಗಿದೆ. ನಾನು ನೆರಳು ಆಸರೆಯನ್ನು ನೀಡಿ ಆನಂದಪಡುತ್ತೇನೆ ಹೊರತು ಸುಡುಬಿಸಿಲಿನಲ್ಲಿ ಬಳಲುವ ನನ್ನನ್ನು ಸಂತೈಸುವುದು ಹಾಗಿರಲಿ, ಕಣ್ಣೆತ್ತಿ ನೋಡುವವರೂ ಇಲ್ಲ. ಬಿಸಿಲಿನ ಸುಡುಬೇಗೆ ಬಳಲಿದ್ದಕ್ಕೆ ರಾತ್ರಿಯಾದರೂ ನಿದ್ದೆ ಬರುತ್ತದೆಯೇ ? ಅದೂ ಇಲ್ಲ. ಪ್ರತಿಕ್ಷಣದಲ್ಲೂ ಉದುರುವ ಭೀತಿ. ಮೇಲಿನಿಂದ ಉದುರುವ ಎಲೆಗಳು ನನ್ನನ್ನು ಸೋಕಿ ನೀನೂ ಹೊರಡಲು ತಯಾರಾಗಿರು ಎಂದು ಹೇಳಿದಂತೆ ಭಾಸವಾಗುತ್ತದೆ. ನನ್ನನ್ನೇ ನೋಡಿಕೊಂಡರೂ ಉದುರಲು ಸನ್ನದ್ಧವಾಗಿರುವ ಎಲೆಯಂತೆಯೇ ಕಾಣುತ್ತೇನೆ. ಬಣ್ಣಗೆಟ್ಟ ಒರಟಾದ ಮುಖ, ಬಲಿತ ತೊಟ್ಟು, ಕೆಲವೊಮ್ಮೆ ನನಗಿಂತ ಕಿರಿಯ ಪ್ರಾಯದ ಎಲೆಗಳು ಉದುರಿದಾಗ, ನಾನು ಇಷ್ಟು ಪ್ರಾಯದವರೆಗೆ ಬದುಕಿದ್ದೇನಲ್ಲ ಎಂದು ಹೆಮ್ಮೆ ಎನಿಸುವುದಿಲ್ಲ. ಬದಲಾಗಿ ಈಗಲಾದರೂ ಸಾಯಬೇಕಲ್ಲಾ ಎನಿಸುತ್ತದೆ. ಈಗಲೂ ಕೆಲವೊಮ್ಮೆ ಈ ಉದುರುವಿಕೆಯನ್ನು ನೋಡಲೆಂದೇ ಬದುಕಿದ್ದೇನಲ್ಲಾ ಎಂದೆನಿಸುತ್ತದೆ. ನನಗಿಂತಲೂ ಮುಂಚೆ ಸಾವನ್ನಪ್ಪಿದ ಎಲೆಗಳ ಬಗ್ಗೆ ಅಸಹಾಯಕತೆಯ, ಕನಿಕರದ ನಿಟ್ಟುಸಿರು ಬಿಡುತ್ತೇನೆ.

ಹೊಳಪಾಗಿ ನಳನಳಿಸುವ ಚಿಗುರುಗಳು ನನ್ನ ಸುತ್ತಲೂ ಕಾಣಿಸಿಕೊಂಡಿವೆ. ಬಾಲ್ಯದ ನೆನಪಾಗುತ್ತಿದೆ. ಚಿಗುರನ್ನು ನೋಡಿದಾಗ ನಾನು ಹೀಗೆ ಇದ್ದೆನೆ ಎನಿಸುತ್ತದೆ. ನಾನು ಚಿಗುರಾಗಿದ್ದಾಗ ಕೊಂಚ ಗಾಳಿ ಬೀಸಿದರೂ ಸಾಕು, ಹೊಸದಾಗಿ ನಡೆ ಕಲಿತ ಮಗುವಿನ ಹಾಗೆ ಕಂಪಿಸುತ್ತಿದ್ದೆ. ಅದು ನಡೆಯೋ, ನಾಟ್ಯವೋ, ತಟ್ಟಾಡುವಿಕೆಯೋ ತಿಳಿಯದು. ಎಲ್ಲರೂ ಇದನ್ನು ನೋಡಿ ನಗುತ್ತಿದ್ದರು. ನನ್ನನ್ನು ನೋಡಿ ನಗುತ್ತಿರುವವರ ಹಾಗೆ ನಾನು ಕೂಡ ದೃಢಕಾಯವಾಗಬೇಕು, ವಿಶಾಲವಾಗಿ ಬೆಳೆದು ಅನೇಕರಿಗೆ ಆಸರೆಯಾಗಬೇಕು ಎಂದು ನಿರಂತರವಾಗಿ ಪರಿಶ್ರಮಿಸಿದೆ. ಹಾಗೆ ಪರಿಶ್ರಮ ವಹಿಸಿದ್ದು ನಾನೊಬ್ಬನೇ ಅಲ್ಲ, ನನ್ನ ಜೊತೆಯವರೆಲ್ಲರೂ ಹೀಗೆ ಮಾಡಿದವರೇ. ಅಷ್ಟೇ ಅಲ್ಲ – ಗಳಿಸುವ, ಸಂಗ್ರಹಿಸುವ ಪ್ರಕ್ರಿಯೆಯಲ್ಲಿ ಒಬ್ಬರಿಗೊಬ್ಬರು ಪೈಪೋಟಿ. ನಾನು ಗಳಿಸಿದ್ದನ್ನು ಲೂಟಿ ಮಾಡಲು ನನಗೆ ಆಶ್ರಯ ನೀಡಿದ್ದ ಮರವೂ ಪ್ರಯತ್ನಿಸುತ್ತಿತ್ತು. ಎಲ್ಲ ನಷ್ಟಗಳ ನಡುವೆಯೂ ವಿಶಿಷ್ಟ ಗಾತ್ರ ತಳೆದೆ. ಅಹರ್ನಿಶಿ ಗಾಳಿ, ಬಿಸಿಲು, ಮಳೆ ಎಲ್ಲವುಗಳ ದಾಳಿಯನ್ನು ಸಹಿಸಿಕೊಂಡು ನನ್ನ ಅಸ್ತಿತ್ವವನ್ನು ಉಳಿಸಿಕೊಂಡಿದ್ದೇ ಅಲ್ಲದೆ ಆ ಸಂಗ್ರಹಣೆಯಿಂದಾಗಿ ವಿಶಾಲ ಪತ್ರವೆನಿಸಿದೆ.

ಆದರೆ ಈಗ ಮೊದಲಿನಂತೆ ದುಡಿಯಲಾರೆ. ನನ್ನ ಮೈಯೇ ನನಗೆ ಭಾರವೆನಿಸಿದೆ. ನನ್ನ ಭ್ರಮೆಯ ಸುಳಿಯಲ್ಲೇ ಸಿಕ್ಕು ಬಳಲುತ್ತಿರುವ ಎಳೆಯರನ್ನು ಕಂಡು ಕನಿಕರವೆನಿಸುತ್ತದೆ. ನನ್ನ ಮಾತನ್ನು ಕೇಳಿಸಿಕೊಳ್ಳಲೂ ಬಿಡುವಿಲ್ಲದಷ್ಟು ದುಡಿಮೆಯಲ್ಲಿ ಅವರು ತೊಡಗಿದ್ದಾರೆ. ವಿಶ್ರಾಂತಿಯ ಸೋಮಾರಿತನ ಅವರಿಗೆ ಅಪರಾಧವೆನಿಸುತ್ತದೆ. ಕಡೆಗೂ ನನ್ನ ಮಾತು ಅರಣ್ಯರೋದನ.

ಈ ಒಂಟಿ ಬೇವಾರ್ಸಿ ಬದುಕು ಬೇಸರವೆನಿಸಿದರೂ ನನ್ನ ಅಸ್ತಿತ್ವ ನಷ್ಟವಾಗುವುದೇನೋ ಎಂಬ ಸತ್ಯ ನನಗೆ ಸಾವಿನ ಭೀತಿಯನ್ನು ಹೆಚ್ಚಿಸಿದೆ.

ಒಮ್ಮೊಮ್ಮೆ ಇನ್ನೂ ಉದಾರವಾಗಿ ಆಲೋಚಿಸುತ್ತೇನೆ. ನಾನು ಸತ್ತರೂ ಕೂಡಿಟ್ಟ ದ್ರವ್ಯ ಮತ್ತೆ ಮಣ್ಣಿಗೆ ಸೇರಿ, ಅಲ್ಲಿಂದ ಮರಕ್ಕೆ ತಲುಪಿ ಮತ್ತೊಮ್ಮೆ ಚಿಗುರಾಗಿ ಅರಳುವೆನೆಂಬ ದೂರದೃಷ್ಟಿ ನನಗೆ ಕೊಂಚ ಸಾಂತ್ವನ ನೀಡುತ್ತದೆ. ಆದರೆ ಕೆಳಗೆ ಬಿದ್ದ ನನ್ನನ್ನು ಗಾಳಿ ಬೇರೆಡೆಗೆ ಕೊಂಡೊಯ್ದರೆ ಎಂಬ ಸಂಶಯವೂ ಚುಚ್ಚುತ್ತದೆ. ನಾನೇ ರೂಪಾಂತರಗೊಳ್ಳುವುದಾದರೆ ಚಿಗುರಾದೇನು ಎಂಬ ಸಂದೇಹವೂ ಬಾಧಿಸುತ್ತದೆ. ಅಂತೂ ಸಂಗ್ರಹಣ ಸ್ಪರ್ಧೆಯಲ್ಲಿ ನಾನು ಕೂಡಿಟ್ಟಿದ್ದಕ್ಕೆ ಏನೂ ಸಾರ್ಥಕವಿಲ್ಲ. ನೋಡಿ ವ್ಯಥೆಪಡುವುದೊಂದೇ ಸಾಧನೆ ಎಣಿಸಿ ಹಳಹಳಿಸುತ್ತೇನೆ.

ಆದರೆ ಈ ನಷ್ಟ ನನಗೊಬ್ಬನಿಗೇ ಅಲ್ಲ, ಎಲ್ಲ ಎಲೆಗಳ ಹಣೆಬರಹವು ಇದೇ ಎನ್ನುವುದಾದರೆ ನಾನೇಕೆ ಚಿಂತಿಸಬೇಕು! ಈ ವ್ಯಥೆಯ ಮೂಲ ಸಾವಿನಲ್ಲಿಲ್ಲ, 'ನಾನು' ಎಂಬ ನಂಬಿಕೆಯಲ್ಲಿದೆ. ಈ 'ನಾನು' ಎಂಬ ಹುಸಿನಂಬಿಕೆಯನ್ನು ನಾನು ಸಂಗ್ರಹಿಸಿಟ್ಟಿದ್ದೆಲ್ಲವೂ ನನ್ನದೆಂಬ ಮಮಕಾರವನ್ನು ಸತ್ಯವೆಂದು ಭಾವಿಸಿದ್ದರಲ್ಲಿದೆ. ನಾನು ವಿಶಾಲ ವಿಶ್ವದ ಅಂಗ ಎಂದು ಗುರುತಿಸಿಕೊಂಡಿದ್ದರೆ, ನಾನು ಎಲೆಯಾಗುವ ಮೊದಲು ಈಗ ಎಲೆಯ ಸ್ಥಿತಿಯಲ್ಲಿ ಹಾಗೂ ಎಲೆಯು ರೂಪಾಂತರಗೊಂಡ ಮೇಲೂ ವಿಶ್ವದ ಭಾಗವೇ ಎಂದುಕೊಳ್ಳುತ್ತೇನೆ. ಆಗ ಚಿಗುರನ್ನು ಕಂಡರೆ, ನನ್ನ ಅನಂತರವೂ ಉಳಿಯುವ ಎಲೆಗಳನ್ನು ಕಂಡರೆ ಅಸೂಯೆಯಾಗುವುದಿಲ್ಲ, ಸಾವಿನ ಭೀತಿ, ಸಂಗ್ರಹದ ಪ್ರೀತಿ ಎರಡೂ ಕಣ್ಮರೆಯಾಗುತ್ತವೆ.

ಆದರೆ ಈ ವಿಚಾರವನ್ನು ಸರೀಕರೊಂದಿಗೆ ಹಂಚಿಕೊಳ್ಳಲು ನನಗೆ ಬಾಯಿ ಇಲ್ಲ, ಅದನ್ನು ಕೇಳುವ ಸಂಯಮ, ದುಡಿಮೆಯಲ್ಲಿ ನಿರತರಾದವರಿಗೂ ಇಲ್ಲ. ಹೋಗಲಿ, ನಾನಂತೂ ಈ ಸತ್ಯವನ್ನು ನಂಬಿ ಮುದದಿಂದಲೇ ಉದುರುವ ಒಬ್ಬೊಂಟಿ ಮುದಿ ಎಲೆಯಾಗಿ ಈ ಏಕಾಂತದ ಚಿಂತೆಯಿಂದ ಹೊರಬರುತ್ತೇನೆ. ಇದೇ ತಿಳಿವನ್ನು ಉಳಿದ ಸಹಚರರು ಗಳಿಸಿಕೊಳ್ಳುವುದು, ಬಿಡುವುದು ಅವರಿಗೆ ಬಿಟ್ಟ ವಿಚಾರ. ಈ ಹೊಣೆಯ ಗುರುತನದ ಹೊರೆಯೂ ನನಗೆ ಬೇಡ. ನಗುನಗುತಾ ಬಾಳಲಿಲ್ಲ, ತೆರಳುವಾಗಲಾದರೂ ನಿರಾಳವಾಗಿ ಸೋಲನ್ನೊಪ್ಪಿ ಸಂತಸದಿಂದ ಸಾಗಲು ನಿರ್ಧರಿಸಿದ್ದೇನೆ.

**ಮಧ್ಯವಯಸ್ಸಿನ ಎಲೆ :** ದೊಡ್ಡ ಎಲೆಗಾದರೋ ಘನತೆ ಇದೆ, ಗಾತ್ರವಿದೆ, ಮನ್ನಣೆ ಇದೆ, ಎಳೆಯ ಚಿಗುರಿಗಾದರೋ ಬಣ್ಣ ಇದೆ. ಬಳು ಇದೆ. ಆಕರ್ಷಣೆ ಇದೆ. ನನ್ನ ಬದುಕಿಗೆ ಮನ್ನಣೆಯೂ ಇಲ್ಲ ಆಕರ್ಷಣೆಯೂ ಇಲ್ಲ, ಗಾಣದ ಎತ್ತಿನ ಹಾಗೆ ದುಡಿಯುವುದೊಂದೇ ಕೆಲಸ. ಕೀಟದ ಕಾಟದಿಂದ ಕಣ್ತಪ್ಪಿಸಿಕೊಳ್ಳಬೇಕು ಅಥವಾ ಆ ಕೀಟಗಳು ನನ್ನವರೆಗೆ ಎಲ್ಲಿ ತಲಪುವುವೊ ಎಂಬ ಚಡಪಡಿಕೆಯೇ ಬದುಕು. ಆದರೂ ನನ್ನ ನೆರೆಯವರೊಂದಿಗೆ ನರಳುತ್ತೇನೆಂಬ ಬಾಧೆಯ ನಡುವೆಯೂ ಮರದ ಬುಡಕ್ಕೆ ಬಂದವರಿಗೆ ನೆರಳು ನೀಡುತ್ತೇನೆ. ಮರವು ಬೆಳೆಯಲು ನನ್ನ ಕೊಡುಗೆಯೂ ಇದೆ ಎಂಬ ಸಮಾಧಾನದಲ್ಲಿ ಈ ಬೇಸರವನ್ನು ಮರೆಯುತ್ತೇನೆ.

**ಕಿರಿ ಎಲೆ :** ''ನಾವು ಬೆಳೆಯುವ ಎತ್ತರಕ್ಕೆ ನೀನು ಬೆಳೆಯಬಲ್ಲೆಯಾ ?'' ಎಂದು ನನ್ನ ಸುತ್ತಲಿನ ಪ್ರಬುದ್ಧ ಎಲೆಗಳು ಸವಾಲು ಹಾಕುತ್ತಿರುವಂತೆ ನನಗೆ ಭಾಸವಾಗುತ್ತದೆ. ಅದಲ್ಲದೆ ಗಾಳಿಯೊಂದಿಗೆ ನರ್ತಿಸುವಾಗ ಎಲ್ಲಿ ಕೆಳಗೆ ಬಿದ್ದು ಹೋಗುವೆನೋ ಎಂದು ಭಯವಾಗುತ್ತದೆ. ಕಿರಿಯರು ಹಗುರವಾಗಿರುವುದರಿಂದ ಗಾಳಿಯ ರ್‍ಯಾಗಿಂಗ್‌ಗೆ ಹೆದರ ಬೇಕಾಗಿಲ್ಲ ಎಂದು ಹಿರಿಯರು ಹೇಳುವುದನ್ನು ಕೇಳಿ ಧೈರ್ಯ ತಾಳಿದ್ದೇನೆ. ಆದರೂ ನಾನು ಬೆಳೆಯಬೇಕಾದದ್ದು ಬಹಳವಿದೆ. ಕಾಲದ ಪಾಲನ್ನು ಯಾರು ಕಿತ್ತುಕೊಳ್ಳಲು ಸಾಧ್ಯ ? ಕೊಡಲಿ ಏಟು ಬುಡಕ್ಕೇ ಹಾಕಿ ಮರಕ್ಕೆ ಪ್ರಳಯ ತಂದು ಎಲ್ಲ ವಯಸ್ಸಿನ ಎಲೆಗಳನ್ನು ಒಟ್ಟಿಗೆ ನಿರ್ನಾಮ ಮಾಡುವ ಪ್ರಳಯಾಂತಕರು ಬರದಿದ್ದರೆ ದುಡಿಯುತ್ತೇನೆ. ನಮ್ಮ ಹಿರಿಯರ ಹಾಗೆಯೇ ನಾನೂ ಮರದ ಕೆಳಗೆ ಬಂದವರಿಗೆ ನೆರಳು, ಮರದ ಆಸರೆ ಪಡೆದವರಿಗೆ ಹೂವು ಹಣ್ಣುಗಳ ಆತಿಥ್ಯಕ್ಕೆ ಪರೋಕ್ಷವಾಗಿ ಪಾಲುದಾರನಾಗುವೆ ಎಂಬ ಸಂತೃಪ್ತಿ ನನಗಿದೆ, ಮರದ ಸಂತತಿ ಮುಂದುವರಿಸುವುದರಲ್ಲಿ ನನ್ನ ಪಾತ್ರ ಇದೆ ಎಂಬುದೇ ನನಗೆ ನೆಮ್ಮದಿ.

### ಭಾಗ -೪

ಮರದ ಮೇಲಿನಿಂದ ಉದುರಿದ ತರಗೆಲೆಯೊಂದು ಅಶ್ವತ್ಥ್ ಅವರ ತುಟಿಯ ಮೇಲೆ ಬಿದ್ದು ಎಚ್ಚರವಾಯಿತು. ತಾನು ಈವರೆವಿಗೆ ಕಂಡದ್ದು ಕೇವಲ ಕನಸು ಎಂದು ಅರಿವಾಯಿತು. ಆ ಕನಸನ್ನು ನೆನಪಿಸಿಕೊಂಡಾಗ ಅಶ್ವತ್ಥ್‌ಗೆ ನಗುಬಂತು. ತಮ್ಮನ್ನು ತಾವೇ ನೋಡಿಕೊಂಡು ನಗುವುದು ದಾರ್ಶನಿಕರಿಗೆ ಮಾತ್ರ ಸಾಧ್ಯವಂತೆ. ಈ ಅರ್ಥದಲ್ಲಿ ಅಶ್ವತ್ಥ್ ದಾರ್ಶನಿಕರಾಗಿದ್ದರು.

ಅಶ್ವತ್ಥ್ ನಕ್ಕಿದ್ದಕ್ಕೆ ಕಾರಣವಾದರೂ ಏನು ಎಂದು ಕೇಳುವಿರಲ್ಲವೇ? ಕಾಡುವ ಜನರಿಂದ ದೂರ ಸರಿದು ಕಾಡಿಗೆ ಬಂದು ಕೇವಲ ಮೂಕವಾಗಿ ಕ್ರಿಯೆಗೈಯುವ ಈ ಎಲೆಗಳು ಎಂದೂ ಪ್ರತಿಕ್ರಿಯೆ ನೀಡದ ಮೌನಾನಂದರನ್ನು ನೋಡಿ ತಾನೂ ಮೌನವಾಗಿ ಆನಂದವಾಗಿ ಇರಬೇಕಾಗಿತ್ತು. ಅದನ್ನು ಬಿಟ್ಟು ನಗರದ ಜನಗಳ ಗೊಣಗಾಟ, ಪೈಪೋಟಿಗಳನ್ನು ಎಲೆಗಳಿಗೆ ಆರೋಪಿಸಿದ್ದರಿಂದ, ಕಾಡಿಗೆ ಬಂದಾಗಲೂ ನಾಡಿನ ಜಗಳವನ್ನು ತನ್ನ ಮನಸ್ಸು ಹೊತ್ತಿದ್ದನ್ನು ಕಂಡು ನಗೆ ಬಂದಿತು. ನಮ್ಮ ಬದುಕಿನ ಸುಖದುಃಖಗಳೇ ಹಾಗೆ. ಆ ಕ್ಷಣದಲ್ಲಿ ನಮ್ಮನ್ನು ಆವರಿಸಿಕೊಳ್ಳುವುದೇ ಅಲ್ಲದೆ ಅಂತರಂಗದಲ್ಲಿ ಅವಿತಿದ್ದು ವಾಸನೆಯಾಗಿ ಯಾವಾಗಲೋ ಹೊರಬಂದು ಬಾಧಿಸುತ್ತವೆ.

ಸುಖದುಃಖಗಳನ್ನು ಮೂಕವಾಗಿ ಅನುಭವಿಸುತ್ತ ಅಂತರಂಗಕ್ಕೆ ತೆಗೆದುಕೊಳ್ಳದೆ 'ಅಪರಿಗ್ರಹ' ಆಚರಿಸುವವರ ಮನಸ್ಸು ಆ ಕಾಡಿನ ಎಲೆಗಳ ಹಾಗೆ ಮೌನಾನಂದದಿಂದ ಕೂಡಿರಬೇಕು. ಅವುಗಳ ಸ್ಥಿತಿ ಹೇಗಿರಬಹುದೆಂದು ಕಲ್ಪಿಸಿಕೊಂಡಾಗ ದೂರದರ್ಶನದಲ್ಲಿ ಪ್ರಸಾರವಾದ ಡಾ|| ಚನ್ನವೀರ ಕಣವಿಯವರ ಕವನದ ಸಾಲು ನೆನಪಿಗೆ ಬಂದಿತು. 'ಗಿಡದಿಂದುದುರುವ ಎಲೆಗಳಿಗೂ ಮುದ ಚಿಗುರುವಾಗಲೂ ಒಂದೇ ಹದ', 'ನೆಲದ ಒಡಲಿನೊಳಗೇನು ನಡುವುದೋ ಎಲ್ಲಿ ಅಡಗಿಹನೋ ಕಲಾವಿದ' ಕವನದ ನೆನಪೂ ವಾಸನೆ ಇದ್ದೀತೆ ಎನಿಸಿ ಅಶ್ವತ್ಥ್ ಮರಳಿ ಊರಿನ ಕಡೆಗೆ ಹೊರಟರು. ರಜೆ ಇಲ್ಲದೆ ಇದ್ದ ಕಾರಣ ಊರಿಗೆ ಮರಳುವುದಲ್ಲದೆ ಬೇರೆ ದಾರಿಯೇ ಇರಲಿಲ್ಲ, ನಡೆದು ಬಂದ ಜಾಡನ್ನು ಗುರುತಿಸುತ್ತಾ ಸಾಗಿದಾಗ ತನ್ನ ಅನುಭಾವದ ಗುರಿಯು ಅವರೊಂದಿಗೆ ಸಾಗಿಬರುತ್ತಿತ್ತು.

(ಲೇಖಕನ ಆಭಾರ : ಡಾ|| ಚನ್ನವೀರ ಕಣವಿಯವರ ಕವನ)

**ಪ್ರೊ|| ಎಂ. ಆರ್. ನಾಗರಾಜು**
ಎಫ್ - ೩, ಎಸ್.ಎಫ್.ಎಸ್. ನಿವಾಸಗಳು
೭ನೇ ಅಡ್ಡರಸ್ತೆ, ಯಲಹಂಕ ಉಪನಗರ
ಬೆಂಗಳೂರು - ೫೬೦ ೧೦೬




**ಹೇಗೂ ಬೀದಿಗೆ ಬಂದಿದ್ದೀರಾ...
ಹಾಗೆಯೇ ರಾಜಕೀಯ ರಂಗಕ್ಕೆ
ಹಾರಿಬಿಡಿ ಶ್ರೀಗಳೇ...**

# ಯುವ ಕಲಾವಿದೆ
# ಮಾಧುರಿ ರಾವ್

ಮಾಧುರಿ ರಾವ್ ಕರ್ನಾಟಕ ಚಿತ್ರಕಲಾ ಪರಿಷತ್ತಿನಲ್ಲಿ ಪದವಿ ಪಡೆದು ನಂತರ ಎಡಿನ್‌ಬರೋ ವಿಶ್ವವಿದ್ಯಾನಿಲಯದಲ್ಲಿ ಸ್ನಾತಕೋತ್ತರ ಪದವಿ ಪಡೆದ ಯುವ ಕಲಾವಿದೆ. ಸದ್ಯದಲ್ಲಿ ಬೆಂಗಳೂರಿನ ಆಧುನಿಕ ಕಲೆಯ ರಾಷ್ಟ್ರೀಯ ಗ್ಯಾಲರಿಯಲ್ಲಿ ಸಹಾಯಕ ಕ್ಯೂರೇಟರ್ ಆಗಿ ಕೆಲಸ ನಿರ್ವಹಿಸುತ್ತಿದ್ದಾರೆ. ಎಡಿನ್‌ಬರೋ ವಿಶ್ವವಿದ್ಯಾನಿಲಯದಲ್ಲಿ ತಮ್ಮ ಅಧ್ಯಯನದ ಭಾಗವಾಗಿ ಪ್ರದರ್ಶಿಸಿದ್ದ ಕಲಾಚಿತ್ರಗಳ ಪೈಕಿ ಆರನ್ನು ಇಲ್ಲಿ ಸಂಗ್ರಹಿಸಲಾಗಿದೆ.













Printed by R. S. Rajaram at Navakarnataka Printers, No. 167 & 168, 10th Main, III Phase, Peenya Industrial Area, Bangalore - 560 058 and Published by him for Navakarnataka Publications (P) Ltd. Embassy Centre, Crescent Road, P. B. 5159, Bangalore - 560 001, Editor : Dr. G. Ramakrishna

**HOSATHU** Kannada Monthly / APRIL 2012 / Rs. 12
RNI Regd. KARKAN / 1999 / 614. Karnataka Regd. KRNA/BGE/7/2012-14
Licenced to post without prepayment. WPP No.14.
Posted at MBC, Bangalore GPO-560001 on the 28th of every month. (No. of Pages 64)